

This Book is published with the Financial Assestion of
**TIRUMALA TIRUPATI DEVASTHANAMS**
under their Scheme Aid to publish Religious Books

ಪ್ರಕಾಶಕರು:
ಸಾಹಿತ್ಯ ಸದನ C/o ವೆಂಕಟಾದ್ರಿ,
ಮಿಲ್‌ರಸ್ತೆ, ಗುಲ್ಬರ್ಗ 585102

[illegible]

# ಶ್ರೀಗುರುಚರಿತ್ರಾಮೃತಂ



**ಪುಸ್ತಕ ದೊರೆಯುವ ಸ್ಥಳ**
ಆರ್.ಎಚ್.ಕುಲಕರ್ಣಿ, ಸಾಹಿತ್ಯ ಸವನ
C/o ವೆಂಕಟಾದ್ರಿ, ಮಿಲ್ ರಸ್ತೆ, ಗುಲ್ಬರ್ಗ 585102

ಶ್ರೀ ಡಿ.ಜಿ.ದೇಸಾಯಿ B.Com.
12-1-508/62 ಲಕ್ಷ್ಮೀನಗರ ಕಾಲೋನಿ
ಶಾಂತಿನಗರ, ಸಿಕಂದ್ರಾಬಾದ್ A.P. 500017

ಬಾಲಿತ ಬೆಲೆ (ಆಧ್ಯಾತ್ಮಿಕ ಬೆಲೆ ಅಮೂಲ್ಯ) ಸದಸ್ಯರಿಗೆ ಮಾತ್ರ
ರೂ. 45 ರೂ. 25

**ಮುದ್ರಕರು**
ಬೃಂದಾವನ ಪ್ರಿಂಟರ್ಸ್
ಬೆಂಗಳೂರು.

# ಮುನ್ನುಡಿ

ಅದೊಂದು ಸುದಿನ. ನನ್ನನ್ನು ಆಶ್ಚರ್ಯ ಚಕಿತಳನ್ನಾಗಿಸಿದ, ಮಹಾಪರ್ವ. ಅಂದು ಶ್ರೀಯುತ ಕುಲಕರ್ಣಿ ರಾಘವೇಂದ್ರರಾಯರು ತಮ್ಮನ್ನು ಕಾಣಲು ಸೂಚಿಸಿದರು. ನನ್ನ ತಂದೆಗೂ ಹಿರಿಯರು. ಗೌರವಾನ್ವಿತರು. ನಿವೃತ್ತ ಜೀವನದಲ್ಲಿ ಧಾರ್ಮಿಕ ಪ್ರವೃತ್ತಿಯನ್ನು ರೂಢಿಸಿಕೊಂಡವರು. ಅವರ ಹೇಳಿಕೆಯ ಮೇರೆಗೆ ಅವರನ್ನು ಕಂಡೆ. ಅವರು ನನಗೆ ಅಪ್ಪಳಿಸಿದ ಮಾತು ನನ್ನನ್ನು ವಿಸ್ಮಿತಳನ್ನಾಗಿಸಿತು. ತಾವು ಅನುವಾದಿಸಿದ ಶ್ರೀ ಮಧ್ವಪ್ರಣೀತ 'ಶ್ರೀ ಮನ್ಮಹಾಭಾರತ ತಾತ್ಪರ್ಯ ನಿರ್ಣಯ'ದ 'ಮಹಾಭಾರತ ಪ್ರಕರಣ'ದ ಹಸ್ತಪ್ರತಿಯನ್ನಿತ್ತು ಮುನ್ನುಡಿ ಬರೆಯ ಹೇಳಿದರು. ಆನಂದಾಶ್ಚರ್ಯಗಳೆರಡೂ ಒಮ್ಮೆಲೇ ಕಾಡಿದವು ನನ್ನನ್ನು. ಕೇವಲ ಅಂಕಗಳಿಗಾಗಿ ಮಾತ್ರ ಮಾಡಿದ ಸಾಹಿತ್ಯಾಭ್ಯಾಸವೆಲ್ಲಿ? ತಾತ್ಪರ್ಯ ನಿರ್ಣಯದಂಥ ಸಾತ್ವಿಕ ತಾತ್ವಿಕ ಗ್ರಂಥದ ಅಭ್ಯಾಸವೆಲ್ಲಿ? ಇದಕ್ಕೆ ನಾನು ಅರ್ಹಳೆ?. ಇದು ನಗೆಪಾಟಲಾಗುವ ಪ್ರಸಂಗವಲ್ಲವೆ? ನಿರ್ದಾಕ್ಷಿಣ್ಯವಾಗಿ ನನ್ನ ಮನಃಸ್ಥಿತಿಯನ್ನು ಹೇಳಿಕೊಂಡೆ. ಅವರು ಧೈರ್ಯವನ್ನು ಕೊಟ್ಟು ಪ್ರೋತ್ಸಾಹಿಸಿದರು. ಮರಳಿ ಚಿಂತಿಸಿದೆ. ವೇದಾಧ್ಯಯನವು ಸ್ತ್ರೀಯರಿಗೆ ಕ್ಲಿಷ್ಟ ಹಾಗೂ ದುರ್ಗಮ. ಆದರೆ ಶ್ರೀಮದಾಚಾರ್ಯರು ರಚಿಸಿದ ಈ ಸಾರಗ್ರಂಥ ಸ್ತ್ರೀಯರಿಗೆ ಅಧ್ಯಯನಕ್ಕೆ ಅನುಕೂಲವಾಗಿಸುವ ಉದ್ಗ್ರಂಥ. ಶ್ರೀಯುತರು ಪರ್ಯಾಯವಾಗಿ ಇಂತಹ ಮೌಲಿಕ ಗ್ರಂಥದ ಅಧ್ಯಯನಕ್ಕೆ ಒದಗಿಸಿದ ಅವಕಾಶವನ್ನು ನೆನೆದ ನನ್ನ ಮನ ನವಿಲಾಗಿ ನರ್ತಿಸಿತು. ಆ ಮೂಲಾಗ್ರವಾಗಿ ಹಸ್ತಪ್ರತಿಯನ್ನು ಓದಿ ಮುನ್ನುಡಿಗಾಗಿ ಮೊದಲು ಮಾಡಿದೆ.

**ಭಾರತಂ ಪಂಚಮೋ ವೇದಃ** ಸುಪರಿಚಿತವಾದ ಸುಭಾಷಿತ, ಮಹಾಭಾರತವು ಭಾರತೀಯ ಸಂಸ್ಕೃತಿಯ ನೆಲೆಗಟ್ಟು. ಇದರ ಇತಿವೃತ್ತ, ಪಾತ್ರಗಳು ಎಲ್ಲವೂ ಭಾರತೀಯ ಸಂಸ್ಕೃತಿಯ ನಾಗರೀಕತೆಯ ಪ್ರತೀಕವಾಗಿ ನಿಲ್ಲುತ್ತವೆ. ಪ್ರಸಕ್ತ ವಿದ್ಯಮಾನದಲ್ಲಿ ಪಾಶ್ಚಾತ್ಯ ನಾಗರೀಕತೆಯ ಸೋಗು ಹಾಕಿ, ಆಧುನೀಕತೆಯ ಮೆರುಗಿನಲ್ಲಿ ಸ್ವಂತಿಕೆಯನ್ನು ಕಳೆದುಕೊಂಡಿರುವ ಭಾರತೀಯ ಜನಾಂಗಕ್ಕೆ ನಿಜವಾದ ನಾಗರೀಕತೆ ಯಾವುದು? ಅದರ ಸ್ವರೂಪವೆಂಥದು? ಮುಂತಾದ ಪ್ರಶ್ನೆಗಳಿಗೆ ಸಮರ್ಥ ಉತ್ತರ ನೀಡುತ್ತದೆ, ವ್ಯಾಸಪ್ರಣೀತ ಮಹಾಭಾರತ.

ಮಹಾಭಾರತಕ್ಕೆ ಅನೇಕ ವ್ಯಾಖ್ಯಾನಗಳು ರಚಿತವಾಗಿವೆ. ಇಂದಿಗೂ ಈ ಗ್ರಂಥದ ಬಗೆಗಿನ ವಿಮರ್ಶೆ ನಡೆಯುತ್ತಲೇ ಇದೆ. ವ್ಯಕ್ತಿಯ ಕನ್ನಡಕದ ಮೇರೆಗೆ ಮಹಾಭಾರತವು ಹಲವಾರು ರೂಪ ತಳೆದು ತೋರಿದೆ. ಇದರ ಕೆಲವು ಪಾತ್ರಗಳ ಬಗ್ಗೆ, ಘಟನೆಗಳ ಬಗ್ಗೆ ಪೂರ್ವಾಗ್ರಹಪೀಡಿತ ದೃಷ್ಟಿಯಿಂದಾಗಿ ಹಲಕೆಲವು ತಪ್ಪುಕಲ್ಪನೆಗಳುಂಟಾಗಿವೆ. ಅವುಗಳ ಚಿಕಿತ್ಸೆಗೆ ಶ್ರೀಮನ್ ಮಧ್ವಾಚಾರ್ಯರ "ಮಹಾಭಾರತ ತಾತ್ಪರ್ಯ ನಿರ್ಣಯ" ವು ಧನ್ವಂತರಿ. ಶ್ರೀಮದಾಚಾರ್ಯರು ಮಹಾಭಾರತದ ಬಗೆಗೆ ಉಂಟಾಗಬಹುದಾದ ಸಂಶಯ-ಕುತರ್ಕಗಳೆಲ್ಲವನ್ನು ವಿವೇಚಿಸಿ, ಸಮರ್ಥ ಪರಿಹಾರಗಳನ್ನು ನೀಡಿದ್ದಾರೆ. "ತಾತ್ಪರ್ಯ ನಿರ್ಣಯ"ದ ಬಗ್ಗೆ ಉಪಲಬ್ಧ ವ್ಯಾಖ್ಯಾನಗಳಲ್ಲಿ ವೈಜ್ಞಾನಿಕ ನಿಲುವನ್ನು ಹೊಂದಿದ ಗ್ರಂಥಗಳು ವಿರಳ. ಈ ನಿಟ್ಟಿನಲ್ಲಿ ಶ್ರೀಯುತ ಆರ್.ಎಚ್. ಕುಲಕರ್ಣಿಯವರು ಸಮರ್ಥ ಪ್ರಯತ್ನ ಕೈಕೊಂಡಿದ್ದಾರೆ. ಅವರಿಂದ ಅನುವಾದಿತ ಭಾರತ ಪ್ರಕರಣವು 'ತಾತ್ಪರ'ಯ ನಿರ್ಣಯ'ದ ವೈಜ್ಞಾನಿಕ ವಿಮರ್ಶೆಯನ್ನು ಒಳಗೊಂಡಿದೆ. ಕಸ್ತೂರಿ ಕನ್ನಡದಲ್ಲಿ ರಚಿತವಾಗಿರುವ ಈ ಕೃತಿ ಆಚಾರ್ಯಮಧ್ವರ ನಿರ್ಣಯಗ್ರಂಥವನ್ನು ಜನಸಾಮಾನ್ಯನಿಗೆ ತೀರಸಮೀಪವಾಗಿಸಿದೆ. ಇದು ಕೇವಲ ಪಂಡಿತರ ಸೊತ್ತಲ್ಲ; ಜನಸಾಮಾನ್ಯರ ಸಂಪತ್ತು ಎಂಬ ಮಾತನ್ನು ನಿಜವಾಗಿಸಿದೆ.

ಲೇಖಕರು ಹಲವಾರು ವಿಷಯಗಳ ಬಗ್ಗೆ ಆಮೂಲಾಗ್ರವಾಗಿ ಚಿಂತನೆಗೈದಿದ್ದಾರೆ ಎಂಬುದಕ್ಕೆ ಇದು ಸಾಕ್ಷಿ. ಮಹಾಭಾರತವು ಒಂದು ಇತಿಹಾಸವೆ? ಅಥವಾ ಪುರಾಣವೆ? ಎಂಬ ಸಂಗತಿ. ಇದು ಹಲವಾರು ಸಂವತ್ಸರಗಳಿಂದ ಚಿಂತಕರನ್ನು ಕಾಡುತ್ತಿರುವ ಸಮಸ್ಯೆ. ಆಧುನಿಕ ಇತಿಹಾಸವು ಆಂಗ್ಲರ ದೃಷ್ಟಿಕೋನದ ಮೇರೆಗೆ ರಚಿಸಲ್ಪಟ್ಟಿದ್ದು, ಅದು ಕೇವಲ ಅರಸರ ಜನನ-ಮರಣ, ಸಂಧಿ-ವಿಗ್ರಹ ಮೊದಲಾದ ಸೀಮಿತ ಅಂಶಗಳ ವರದಿ ಮಾತ್ರ. ಆದರೆ ಮಹಾಭಾರತವು ತಾತ್ಕಾಲೀನ ಭಾರತದ ಸಮಸ್ತ ಚಿತ್ರಣ. ಅಷ್ಟೇ ಅಲ್ಲ, ಅಂದಿನ, ಇಂದಿನ, ಮುಂದಿನ, ಎಂದೆಂದಿನ ಜೀವನ ಮೌಲ್ಯಗಳ ಸಮಗ್ರ ದರ್ಶನ. ನಿಜವಾದ ಅರ್ಥದಲ್ಲಿ ಅದುವೇ ಇತಿಹಾಸ.

ಮನುಜಮಾತ್ರದ ಪಲವು ಕಾರ್ಯಗಳು ಈ ಕೃತಿಯಲ್ಲಿ ಬಂದಿರುವುದೂ ಉಂಟು. ಅವುಗಳನ್ನು ಭಗವಂತನ ಭಕ್ತಿಯ ಉಪಾಸಕ ಸಹಜವಾಗಿ ಸಂಬುತ್ತಾನೆ. ಅಲ್ಲಿ ಸಂಶಯಕ್ಕೆ ಎಡೆಯೇ ಇಲ್ಲ, ಈ ದೃಷ್ಟಿಯಿಂದ ಇದು ಪುರಾಣವೂ ಹೌದು. ಈ ತೆರನಾದ ವಿಶ್ಲೇಷಣೆ ಶ್ರೀಯುತರ ಸೂಕ್ಷ್ಮದೃಷ್ಟಿಯ ಅವಗಾಹನೆಯ ಪ್ರತೀಕವಾಗಿ ಬಿಂಬಿತವಾಗುತ್ತದೆ.

ತಾತ್ಪರ್ಯನಿರ್ಣಯವು ಮಹಾಭಾರತದ ಹೊಳಹನ್ನರಿಯಲು ದಿವ್ಯಸಾಧನ. ಆರೋಪಕ್ಕೊಳಗಾಗಿರುವ ಪಾತ್ರಗಳನ್ನು, ಘಟನೆಗಳನ್ನು ವಿಮರ್ಶೆಯ ಒರೆಗಲ್ಲಿಗೆ ಹಚ್ಚಿ ನಿರ್ದೋಷವಾಗಿಸಿದ್ದಾರೆ, ಶ್ರೀಮದಾಚಾರ್ಯರು. ಆ 'ತಾತ್ಪರ್ಯ ನಿರ್ಣಯ'ದ ವೈಜ್ಞಾನಿಕ ಚಿಂತನೆ. ಈ ಗ್ರಂಥದಲ್ಲಿ ಇಲ್ಲಿದೆ. ಮಹಾಭಾರತದ ಉನ್ನತೋನ್ನತ ಪಾತ್ರಗಳೂ ಪಟ್ಟ ಪಾಡಿನ ಚಿತ್ರೀಕರಣ ಇಲ್ಲಿ ಉಂಟು. ಮೇರುಸದೃಶ ವ್ಯಕ್ತಿತ್ವದ ಶಂತನು, ಭೀಷ್ಮ, ದ್ರೋಣರಂತಹ ಮಹಾನುಭಾವರೂ ಸಾಂಸಾರದ ಎಳೆಗೆ ಸಿಲುಕಿ ಜರ್ಝರಿತರಾದ ದೃಶ್ಯಗಳು ಓದುಗರನ್ನು ಮೂಕವಾಗಿಸುತ್ತವೆ.

ಶಂತನುವಿನ ಹಿನ್ನೆಲೆಯು ಅಜಾತುರ್ಯದಿಂದಲಾದರೂ ದೊಡ್ಡವರ ಅಪಮಾನವಾದರೆ ಅದು ಅನರ್ಥದ ಬೀಜ ಎಂದು ಸಾರುತ್ತದೆ.

ಭೀಷ್ಮರಾದರೋ ಪಿತಾಮಹರು. ಮಹಾಜ್ಞಾನಿಗಳು. ಭಗವಂತನ ಆರಾಧಕರು. ಆದರ್ಶ ಪುರುಷರು. ಆದರೇನು? ಪೂರ್ವಜನ್ಮದಲ್ಲಿ ದ್ಯುವಸುವಾಗಿದ್ದಾಗ ಮಡದಿ ಮೇಲಣ ಮೋಹದಿಂದ, ಅವಳಾಸೆಯ ಪೂರೈಕೆಗಾಗಿ ವಸಿಷ್ಠರ ವಸುವನ್ನು ಅಪಹರಿಸಿದ ಹೀನಸ್ಥಿತಿಗೆ ಗುರಿಯಾಗಿ ಶಾಪದ ಆಹಾರವಾದರು. ಅಲ್ಲದೆ ವಸುಗಳಾಗಿದ್ದವರು ಮಾನವರಾಗಿ ಕುರುವಂಶದ ಆಗುಹೋಗುಗಳಿಗೆ, ದುರ್ಯೋಧನಾದಿಗಳು ಮಾಡಿದ ಅನ್ಯಾಯ ಪರಂಪರೆಗೆ ಮೂಕಸಾಕ್ಷಿಯಾಗಿ ನಿಲ್ಲಬೇಕಾಯಿತು. ಇದೆಂಥ ಘೋರಶಿಕ್ಷೆ!

ಇನ್ನು ದ್ರೋಣರೋ ಅಸ್ತ್ರ ವಿದ್ಯಾವೇತ್ತರು, ಸರ್ವಶಾಸ್ತ್ರ ಪಾರಂಗತರು. ಆದರೆ ಬಡತನದ ಸಂಕಲೆ, ಮಗುವಿನ ಮೇಲಿನ ಮೋಹ ಈ ಎಳೆಗಳು ಅವರನ್ನೂ ಬಂಧಿಸದೆ ಬಿಡಲಿಲ್ಲ.

ಜೀವನದ ಹೆಜ್ಜೆ ಹೆಜ್ಜೆಗೂ ಎದುರಾಗುವ ಸಮಸ್ಯೆಗಳಿಗೆ ಉತ್ತರ ಇಲ್ಲಿದೆ. ಉದಾಹರಣೆಗೆ, ವರುಣನ ವೃತ್ತಾಂತ, ಅದರಿಂದ ತಿಳಿದುಬರುವ ನೀತಿ, ದೇವವ್ರತನ ಭೀಷ್ಮ ಪ್ರತಿಜ್ಞಾ ಪ್ರಸಂಗದಿಂದ ಉಕ್ತವಾಗುವ ಸುತನ ನಿಜವಾದ ರೀತಿ, ವಿಚಿತ್ರವೀರ್ಯನ ಉದಾಹರಣೆಯ ಮುಖಾಂತರ ಗೋಚರವಾಗುವ ವಿಷಯಭೋಗಕ್ಕಿರಬೇಕಾದ ಮಿತಿ, 'ನತೆ ಸುದಾನ್ಯತೆ ಸಮಃ ಸುರೇಷು ಕೇಚಿದೇವ ಚ' ಎಂಬಲ್ಲಿ ಕುಂತಿಯ ಪತಿಭಕ್ತಿ ಈ ಎಲ್ಲವುಗಳ ಬಗ್ಗೆ ಶ್ರೀಯುತ ಕುಲಕರ್ಣಿಯವರ ಸಾರಾಸಾರ ವಿವೇಚನೆಯ ಫಲವಾಗಿ 'ತಾತ್ಪರ್ಯ ನಿರ್ಣಯ'ವು ನೀತಿ ಸಂಹಿತೆಯಾಗಿ ನಿಲ್ಲುತ್ತವೆ.

ಅಲ್ಲದೆ ಕುಮತಿಗಳ ದೋಷಾರೋಪಣೆಗೆ ಆಹಾರವಾಗಿರುವ, ಕುಂತಿಯು ದೇವತೆಗಳಿಂದ ಮಕ್ಕಳನ್ನು ಪಡೆದ ಬಗ್ಗೆ ಮತ್ತು ದ್ರೋಣರು ಏಕಲವ್ಯ ಹಾಗೂ ಕರ್ಣರಿಗೆ ವಿದ್ಯೆ ಕಲಿಸದಿರುವುದರ ಕಾರಣ, ಮುಂತಾದ ಹಲಕೆಲವು ಸಂಗತಿಗಳು ಅತ್ಯಂತ ಸಮರ್ಪಕ ವೆನಿಸುವಂತೆ, ಸಂದೇಹಗಳಿಗೆ ಆಸ್ಪದ ವೀಯದಂತೆ ವಿವೇಚಿತವಾಗಿದೆ. ಶ್ರೀಯುತರು ಆಚಾರ್ಯರ ಒಂದೊಂದು ಶ್ಲೋಕದಿಂದಲೂ, ಒಂದೊಂದು ಶಬ್ದದಿಂದಲೂ ವಿಮರ್ಶಿಸುತ್ತ ಕುಂತಿಯ ವ್ಯಕ್ತಿತ್ವವನ್ನು ಎತ್ತಿ ಹಿಡಿದಿದ್ದಾರೆ. ಅಂದಿನ, ಇಂದಿನ ಅನೇಕ ಸಾಮಾಜಿಕ ಸನ್ನಿವೇಶಗಳನ್ನು ಮುಂದಿಟ್ಟು ಆಧುನಿಕ ವಿಮರ್ಶಕರನ್ನು ಪ್ರಶ್ನಿಸಿದ್ದಾರೆ. ಮೂಲವನ್ನು ಅರಿಯುವತ್ತ ಅವರನ್ನು ಪ್ರೇರೇಪಿಸಿದ್ದಾರೆ.

"ಅಯುಕ್ತ ಮುಕ್ತ ದಾಂಸ್ತತೋ ಭವಂಸ್ತಥಾಪಿ ಕೇವಲಃ

ಅಲಂಪ್ಯಮೇವ ಮೇ ತತೋ ವದಸ್ವ ಪುತ್ರನಂ ಸುರಮ್"

ಎಂಬ ಶ್ಲೋಕದ ವಿವರಣೆಯ ಕುಂತಿಯ ಬಗೆಗಿನ ಆಕ್ಷೇಪಗಳ ಸಮರ್ಥ ನಿವಾರಣೆ.

ಏಕಲವ್ಯ ಹಾಗೂ ಕರ್ಣರ ಪ್ರಸಂಗಗಳನ್ನು ಕೇವಲ ಜಾತೀಯ ಹಿನ್ನೆಲೆಯಲ್ಲಿ ಕಂಡು ದ್ರೋಣರ ಬಗ್ಗೆ ಆಕ್ಷೇಪಗಳನ್ನು ಎತ್ತುವವರಿಗೆ ಸಮಾಧಾನವೂ ಇಲ್ಲಿ ಉಂಟು. ಲೇಖಕರು ಸಾಮಾಜಿಕ ಹಿನ್ನೆಲೆ, ವೈಜ್ಞಾನಿಕ

ದೃಷ್ಟಿಕೋನ, ಮನೋವೈಜ್ಞಾನಿಕ ವಿಚಾರ, ದ್ರೋಣರ ಹೃದಯವೈಶಾಲ್ಯ ಇವುಗಳನ್ನು ಎತ್ತಿತೋರಿ ದ್ರೋಣರ ನಡತೆ ಯೋಗ್ಯ ಎಂದು ಸಾಧಿಸಿದ್ದಾರೆ.

ಶ್ರೀಯುತರ ಶೈಲಿ ಸರಳ, ಸುಂದರ ಅಷ್ಟೇ ತೀಕ್ಷ್ಣ, ಹರಿತ. ಅನುವಾದ ಬಹು ಕಠಿಣ. ಪರಕಾಯ ಪ್ರವೇಶದ ಹಾಗೆ ಅದು. ಬೇರೆಯವರ ಅಭಿಪ್ರಾಯ ಹಾಗೂ ಸ್ವಂತ ಅಭಿಪ್ರಾಯ ಎರಡರ ಸಮ್ಮಿಲನದೊಡನೆ ಹೊರಬರಬೇಕು. ಅನುವಾದಿತಕೃತಿ, ಮೂಲಗ್ರಂಥಕ್ಕೆ ಅಪಚಾರವಾಗಬಾರದು. ಎರಡೂ ಭಾಷೆಗಳಲ್ಲಿಯೂ ಪ್ರಭುತ್ವ ಇದ್ದಾಗ ಮಾತ್ರ ಇದು ಸಾಧ್ಯ. ಇಂಥ ಅಸಿಧಾರಾವ್ರತವನ್ನು ಶ್ರೀಯುತರು ಸಮರ್ಥವಾಗಿ ಪೂರೈಸಿದ್ದಾರೆ. ಇದಕ್ಕೆ ಸಾಕ್ಷಿ ನಿರಂತರವಾಗಿ ಪ್ರಕಟಿತವಾಗುತ್ತಿರುವ ಇವರ ಕೃತಿಗಳ ಸರಮಾಲೆ.

'ಮಧ್ವಮತಾಬ್ಧಿಯಲಿ ಮೀನಾಗಿರಲುಬೇಕು' ದಾಸವರ್ಯರ ನುಡಿ. ನಿರ್ಣಯ ಗ್ರಂಥದ ಈ ವಿವೇಚನಾತ್ಮಕ ಅಧ್ಯಯನದಲ್ಲಿ ಮಧ್ವಮತದ ಶ್ರೇಷ್ಠ ಸಿದ್ಧಾಂತಗಳ ಜಯಪತಾಕೆ ರಾರಾಜಿಸಿದೆ. ಶ್ರೀಮತದ ಸಿದ್ಧಾಂತಗಳಾದ ಹರಿಸರ್ವೋತ್ತಮತ್ವ, ಪಂಚಭೇದ, ತಾರತಮ್ಯ, ಅಮಲಾಭಕ್ತಿ, ಮುಕ್ತಿಯ ನೈಜ ಸುಖಾನುಭೂತಿ ಈ ಎಲ್ಲವುಗಳ ಪ್ರತಿಫಲನ ಇಲ್ಲಿದೆ. "ಮಧ್ವಮತದ ಸಿದ್ಧಾಂತದ ಪದ್ಧತಿ ಬಿಡಬೇಡಿ ಬಿಟ್ಟು ಕೆಡಬೇಡಿ" ಎಂಬ ಧ್ವನಿ ಧ್ವನಿಸುತ್ತಲಿದೆ. ಒಟ್ಟಿನಲ್ಲಿ ಹಲವಾರು ದೃಷ್ಟಿಗಳ ಚಿಂತನ ಮಂಥನದಿಂದ ಹೊರಬಂದ ಈ ಕೃತಿ ಲೇಖಕರ ಪ್ರಯತ್ನಕ್ಕೆ ಯಶೋದಾಯಿ. ವೈಚಾರಿಕ, ವೈಜ್ಞಾನಿಕ, ವಿಮರ್ಶಾತ್ಮಕ ತಳಹದಿಯ ಗ್ರಂಥಮಾಲಿನಲ್ಲಿ ಇದಕ್ಕೊಂದು ಅಪೂರ್ವಸ್ಥಾನ.

ತಾಂತ್ರಿಕ ಯುಗದ ಪ್ರಸ್ತುತ ಸನ್ನಿವೇಶದಲ್ಲಿ ಆಧ್ಯಾತ್ಮವಾಗಸವು ಬರಿದಾಗುತ್ತಿದೆಯೇನೋ ಎಂಬ ಸಂಶಯದ ಸುಳಿ ಸುಳಿಯುತ್ತಿರುವಾಗ ಶ್ರೀ ಜಯತೀರ್ಥರ ಈ ಪುಣ್ಯಭೂಮಿಯಲ್ಲಿ ಆಧ್ಯಾತ್ಮ ದೀವಿಗೆಯನ್ನು ಬೆಳಗಿಸಲು ಮುಂದೆ ಬಂದಿದ್ದಾರೆ ಶ್ರೀಯುತರು. ಇವರು ಹಚ್ಚಿದ ಆಧ್ಯಾತ್ಮದೀಪ ನಂದಾದೀಪವಾಗಿ ನಿರಂತರ ಬೆಳಗಲಿ, ಸರ್ವರ ಜೀವನದ ಬೆಳಕಾಗಲಿ ಎಂದು ಆಶಿಸುವೆ.

ಹಿರಿಯರಾದ ಶ್ರೀ ಆರ್.ಎಚ್.ಕುಲಕರ್ಣಿಯವರು ಈ ಪ್ರೌಢಗ್ರಂಥಕ್ಕೆ ಮುನ್ನುಡಿ ಬರೆಯುವುದಕ್ಕೆ ಪಾತ್ರಳಲ್ಲದಿದ್ದರೂ ಅವಕಾಶ ಕಲ್ಪಿಸಿದುದಕ್ಕಾಗಿ ನಾನು ಅವರಿಗೆ ಚಿರಋಣಿ. ನನ್ನ ಈ ತೊದಲ್ನುಡಿಯನ್ನು ಜನತಾಜನಾರ್ದನನು ಸ್ವೀಕರಿಸಲೆಂದು ಪ್ರಾರ್ಥಿಸುತ್ತೇನೆ.

ಶ್ರೀ ಕಟಾಕ್ಷಚ್ಛಟಾಲಕ್ಷ್ಯಃ ಪಕ್ಷಿಗಃ ಪುಷ್ಕರೇಕ್ಷಣಃ।

ಸ್ವಪಕ್ಷ ಕಲ್ಪವೃಕ್ಷೋಽಯಂ ರಕ್ಷತಾತ್ ಕೇಶವಸ್ಸದಾ॥

ನನ್ನ ಕುಲದೈವ ಶ್ರೀ ಚೆನ್ನಕೇಶವನು ಶ್ರೀಯುತರಿಗೆ ಆಯುರಾರೋಗ್ಯಗಳನ್ನಿತ್ತು, ಅವರಿಂದ ಇಂತಹ ಹಲವಾರು ಕೃತಿಗಳು ಹೊರಬರಲು ಅನುಗ್ರಹಿಸಲಿ ಎಂದು ಹಾರೈಸುವೆ.

ಮಾರ್ಗಶಿರ ಪೌರ್ಣಮಿ
೯-೧೨-೯೨

ಕು.ಜ್ಯೋತ್ಸ್ನಾ ಅನಂತ ಆದ್ಯ
ಎಮ್.ಎ.(ಸಂಸ್ಕೃತ)
ಅತಿಥಿ ಉಪನ್ಯಾಸಕಿ B.T. ಸಂಸ್ಕೃತ ಅಧ್ಯಯನ ವಿಭಾಗ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

ಶ್ರೀ ಹರಿಃ ಓಂ

**ಆಧ್ಯಾತ್ಮ ಬಂಧುಗಳೇ**

ಮಹಾಭಾರತ ತಾತ್ಪರ್ಯ ನಿರ್ಣಯ ಭಾಗ ನಾಲ್ಕು ಭಾರತ ಪ್ರಕರಣ ತಡವಾಗಿ ತಮ್ಮ ಕೈಸೇರುವಂತಾಯಿತು. ಅದಕ್ಕಾಗಿ ಮೊದಲು ಕ್ಷಮೆ ಕೇಳುತ್ತೇನೆ.

**ತಡವಾದುದಕ್ಕೆ ಕಾರಣಗಳು:**

೧. **ಸಾಹಿತ್ಯದ ಅಭಾವ:** ಸುಮಾರು ೧೯೮೭ ರಿಂದ ಪ್ರಯತ್ನ ನಡೆದಿದೆ ರಾಮಾಯಣ ಪ್ರಕರಣದವರೆಗೆ ಸಾಹಿತ್ಯ ದೊರೆಯಿತು. ಭಾರತದ ಭಾಗ ದೊರೆಯಲು ಕಷ್ಟವಾಯಿತು. ಸಂಸ್ಕೃತದ ಒಂದೆರಡು ಕೃತಿಗಳು. ಕನ್ನಡದಲ್ಲಿ ದಿ. ಶ್ರೀ ತಂತ್ರಿಯವರ ಕೃತಿ ಅಲ್ಲದೆ ಶ್ರೀಶ್ರೀ ವಾದಿರಾಜರ ಗದ್ಯಾನುವಾದ ಇವು ಬಿಟ್ಟರೆ ಅವ್ಯಕ್ತಿಗಳು ದೊರೆಯಲಿಲ್ಲ. ಅವೂ ಲೊಲದಾಕ್ ಮಾಡಿಸಿ ತರಿಸಬೇಕಾಯಿತು.

೨ **ಹೆಚ್ಚುತ್ತಿರುವ ಬೆಲೆಗಳು:** ದೊಡ್ಡ ದೊಡ್ಡ ಸಂಸ್ಥೆಗಳು ತತ್ತರಿಸುತ್ತಿರುವಾಗ ನಿವೃತ್ತ ಬಡವಾಯಿ ಅಧ್ಯಾಪಕನ ಅವಸ್ಥೆ ಏನು?

೩. **ಅಚ್ಚಾಗುವ ಗ್ರಂಥಗಳ ವಿತರಣೆಯ ಸಮಸ್ಯೆ:** ಇದುವರೆಗೆ ಬಲವಿದ್ದಿತು. ಓಡಾಡುವ ಶಕ್ತಿಯೂ ಇದ್ದಿತು. ಈಗ ಅವು ಉಳಿದಿಲ್ಲ.

ಈ ಮೂರು ಕಾರಣಗಳಿಂದ ತಡವಾಗಿದೆ.

ದೊರೆತಷ್ಟು ಸಾಹಿತ್ಯದಿಂದಲೇ ಅನುವಾದ ಕಾರ್ಯ ಮುಂದುವರೆದಿದೆ. ಹಸ್ತಪ್ರತಿ ಸಿದ್ಧವಾಯಿತು. ಪರಿಶೀಲಿಸಿ ಸಲಹೆ ನೀಡುವವರಿಲ್ಲ. ಇದುವರೆಗೆ ಹಿರಿಯರಾದ ಶ್ರೀ ವಾದಿರಾಜಾಚಾರ್ಯ ಅಗ್ನಿಹೋತ್ರಿಗಳು ಅನುಗ್ರಹಿಸುತ್ತ ಬಂದಿದ್ದಾರೆ. ಆದರು ನನಗಿಂತ ಹಿರಿಯರು. ಅವರಿಗೆ ಕೇಳಲು ಮನಸ್ಸಾಗಲಿಲ್ಲ. ಅಷ್ಟರಲ್ಲಿ ನಾಲ್ಕಾರು ವರ್ಷಗಳ ಹಿಂದೆ ಶ್ರೀಶ್ರೀಶ್ರೀ ಸತ್ಯಪ್ರಮೋದ ಶ್ರೀ ಪಾದಂಗಳವರು ಇಲ್ಲಿ ಚಾತುರ್ಮಾಸ್ಯ ವ್ರತ ಕೈಗೊಂಡಿದ್ದರು. ಅವರಿಗೆ ವಿನಂತಿಸಿದೆ. ಹಸ್ತ ಪ್ರತಿ ನೋಡಿ ಸಂತೋಷಗೊಂಡು, ತಮ್ಮಲ್ಲಿಯ ಶಿಷ್ಯರಲ್ಲಿ ಯೋಗ್ಯರಾದವರನ್ನು ಕರೆದು ಪರಿಶೀಲಿಸಲು ಆಜ್ಞೆಯಿತ್ತರು. ಕಾರ್ಯ ನೆರವೇರಿತು. ಪರಿಶೀಲನೆ ಸಲಹೆಗಳೊಂದಿಗೆ ಆಶೀರ್ವಾದಗಳು ಲಭಿಸಿದವು. ಕಾರ್ಯ ಸುಗಮವಾಯಿತು.

ಮುಂದೆ ಶ್ರೀಶ್ರೀ ಅದಮಾರು ಮಠದ ಶ್ರೀಶ್ರೀ ವಿಶ್ವಪ್ರಿಯ ತೀರ್ಥ ಶ್ರೀಪಾದಗಳು ಇಲ್ಲಿಗೆ ಆಗಮಿಸಿದ್ದರು. ಅವರಿಗೂ ತೋರಿಸಿ ಅನುಗ್ರಹಕ್ಕಾಗಿ ಪ್ರಾರ್ಥಿಸಿದೆ. ಅವರು ತುಷ್ಟರಾಗಿ ಅಕ್ಷಯ ಸಂಪತ್ತು ಇತ್ತು ಹರಿಸಿದ್ದಾರೆ.

ನಂತರ ಫುತ್ತಿಗೆ ಮಠದ ಶ್ರೀಶ್ರೀ ಸುಗುಣೇಂದ್ರ ತೀರ್ಥರು ಇಲ್ಲಿಗೆ ದಯಪಾಲಿಸಿದ್ದರು. ಅವರಿಗೂ ಹಿಂದಿನ ಪ್ರತಿಗಳನ್ನು ಅರ್ಪಿಸಿ, ಈ ಪ್ರತಿಯನ್ನು ತೋರಿಸಿ ಆಶೀರ್ವಾದಕ್ಕಾಗಿ ಪ್ರಾರ್ಥಿಸಿದೆ. ಅದರೂ ಆನಂದಿಸಿ ಆಶೀರ್ವಾದ ವಿತ್ತಿದ್ದಾರೆ.

ಹೀಂತು ಈ ಕಾರ್ಯಕ್ಕೆ ಯತಿತ್ರಯಗಳವರ ಅನುಗ್ರಹವಾಗಿದೆ ಎಂದು ಹೆಮ್ಮೆಯಿಂದ ಹೇಳಬಲ್ಲೆ ಅವರೆಲ್ಲರಿಗೂ ನನ್ನ ಮೊದಲ ಕೃತಜ್ಞತೆಗಳು.

**ಹೆಚ್ಚುತ್ತಿರುವ ಬೆಲೆಗಳು:** ಭಗವಂತನ ಪ್ರೇರಣೆಯಿಂದ ಭಕ್ತವೃಂದವು ನನ್ನ ಹಿಂದಿನ ಕೃತಿಗಳನ್ನು ಖರೀದಿಸಿ ಸಹಕರಿಸಿದೆ. ಜೊತೆಯಲ್ಲು ಶ್ರೀನಿವಾಸನ (T.T.D ಯವರ) ಅನುಗ್ರಹವೂ ಆಗಿದೆ. ಇದರಿಂದ ಸ್ವಲ್ಪ ಸಮಾಧಾನವಾಗಿದೆ. T.T.D ಸಂಸ್ಥೆ ಮತ್ತು ಭಕ್ತವೃಂದವನ್ನು ಮರೆಯಲಾರೆ. ಅವರಿಗೂ ಧನ್ಯವಾದಗಳನ್ನು ಅರ್ಪಿಸದೆ ಇದ್ದರೆ ನನ್ನ ಕರ್ತವ್ಯ ಚ್ಯುತಿಯಾದೀತು.

**ಅಚ್ಚಾದ ಪುಸ್ತಕಗಳ ವಿತರಣೆ:** ನನ್ನದು ಲಾಭ-ಹಾನಿಯಿಲ್ಲದ ವ್ಯವಹಾರ. ಇದು ದೊಡ್ಡ ಸಮಸ್ಯೆ. ಏನು ಮಾಡಲಿ ಎಂದು ಯೋಚಿಸುತ್ತ ಮಲಗಿದೆ. ಮಾರನೆಯ ದಿನ ಶ್ರೀ ಹರಿಯ ಪ್ರೇರಣೆಯಿಂದಲೇ ನನ್ನ ಹಿಂದಿನ ಓದುಗರಿಗೆ ಈ ವಿಷಯ ತಿಳಿಸಿ, ಪತ್ರ ಬರೆದೆ. ೩ ಜನ ಆಸಕ್ತ ಭಕ್ತರ ವಿಳಾಸ ಕಳಿಸಲು ಕೋರಿದೆ. ಎಲ್ಲರೂ ಸಹಕರಿಸಿದರು ಅವರಿಗೆ "ಧ್ಯಾನಾವ ತಾರ" Book¥Post ಮೂಲಕ ಕಳಿಸಿ ಸದಸ್ಯರಾಗಲು ವಿನಂತಿಸಿದೆ. ಅವರು ತಾವು ಸದಸ್ಯರಾದದ್ದಲ್ಲದೆ, ತಮ್ಮ ಮಿತ್ರರ ಹೆಸರುಗಳನ್ನಿತ್ತು ಸಹಕರಿಸಿದರು. ಭಗವಂತನ ಮಹಿಮೆ ತಿಳಿಯದು. ಎಲ್ಲರೂ ಸಹಕರಿಸಿದ್ದಾರೆ. ಸದಸ್ಯರ ಸಂಖ್ಯೆಯು ಎಣಿಕೆ ಮೀರಿ ಬೆಳೆಯುತ್ತಿದೆ. ಆದರೂ ಗುರಿಮುಟ್ಟಿಲ್ಲ. ಪೂರ್ಣ ಆಗುವದೆಂಬ ವಿಶ್ವಾಸ ನನಗಿದೆ. ಸಹಕಾರ ತೋರಿದ ಎಲ್ಲ ಸದಸ್ಯರಿಗೂ ಮನಃಪೂರ್ವಕ ಅಭಿನಂದನೆಗಳು.

ಈ ದಾರಿ ಸವೆದ ಮೇಲೆ ಪ್ರೆಸ್ಸಿಗಾಗಿ ಪರದಾಟ. ಕನ್ನಡದ ದೊಡ್ಡಗ್ರಂಥ ಮೇಲಾಗಿ ಸಂಸ್ಕೃತದ ಶ್ಲೋಕಗಳು ಈ ಭಾಗದಲ್ಲಿ ತೃಪ್ತಿಕರ ಕಾರ್ಯ ಕಷ್ಟಸಾಧ್ಯ. ಪತ್ರಮುಖೇನ ಪ್ರಯತ್ನಿಸಿದೆ.

ಶ್ರೀ ಕೃಷ್ಣನ ಅನುಗ್ರಹವೋ ಎಂಬಂತೆ ಬೃಂದಾವನ ಪ್ರೆಸ್ಸಿನ ಡೈರೆಕ್ಟರ್ ಶ್ರೀ H.M.ಕೌಜಗಿ-ಕೌಜಲಗಿ ಅವರು ಅನಾಯಾಸ ಮನೆಗೆ ಬಂದಿದ್ದರು. ಅವರ ಮುಂದೆ ಸಮಸ್ಯೆಯಿಟ್ಟಾಗ, ಹಸ್ತ ಪ್ರತಿ ನೋಡಿ ಸಂತೋಷಿಸಿ ಈ ಕಾರ್ಯ ನನಗೊಪ್ಪಿತು. ಪಂಡಿತರಿಂದ ಪರಿಶೀಲಿಸಿ ಪ್ರಿಂಟಾದ ಪುಸ್ತಕಗಳನ್ನೇ ತಮಗೆ ತಲುಪುವಂತೆ ಮಾಡುತ್ತೇನೆ" ಎಂದೂ ಕುರುಡನಿಗೆ ಕಣ್ಣು ಬಂದಾಯಿತು. ಒಪ್ಪಿದೆ ಪ್ರತಿಯನ್ನು ಒಪ್ಪಿಸಿಯೇಬಿಟ್ಟೆ.

**ಮುನ್ನುಡಿಗಾಗಿ ಪರದಾಟ:** ತಿಲಕವಿಲ್ಲದೆ ಹಣೆ ಶೋಭಿಸುವುದೇ? ಇಷ್ಟು ದೊಡ್ಡ ಗ್ರಂಥ ಮೇಲಾಗಿ ಗಹನ ವಿಷಯ. ಇದನ್ನು ಓದಿ ಮುನ್ನುಡಿ ಬರೆಯಲು ಯಾರೂ ಸಿದ್ಧರಾಗಲಿಲ್ಲ. ಕೊನೆಗೆ ಪ್ರೆಸ್ಸಿನ ಕರಡನ್ನು ತಿದ್ದಿದ ಶ್ರೀ.K ಗೋಪಿನಾಥರು, ಅವರು ಪಂಡಿತರಾದರೂ ಸಲಿಗೆಯಿಂದ ಚಿ|| ಎಂದು ಬರೆಯುತ್ತಿದ್ದೇನೆ. ತಂದೆಯಂತೆ ಭಾವಿಸುತ್ತಾರೆ. ಅವರು ಮಳಖೇಡದ ದರ್ಶನದ ನಿಮಿತ್ತ ಇಲ್ಲಿಗೆ ಬಂದಿದ್ದರು. ಅವರನ್ನು ವಿಚಾರಿಸಿದೆ. ಅವರು ಒಪ್ಪಿದರು. ಅಷ್ಟೇ ಅಲ್ಲ, ಇದೇ ಗ್ರಂಥವನ್ನು ತಮ್ಮ ಮಿತ್ರರ ಮುಂದೆ ಓದಿ ಚರ್ಚಿಸಿ, ಮಥಿಸಿ ವಿಮರ್ಶೆಯಿಂದ ಕೂಡಿದ ಒಂದು 'ಮಥಿತಾರ್ಥ'ವನ್ನೇ ಕಳಿಸಿದ್ದಾರೆ. ಅಂಥವರಿಗೆ ಆಶೀರ್ವಾದಿಸಬೇಕಾಗಿ ಬಂದುದು ನನ್ನ ಭಾಗ್ಯ. ಅವರಿಗೆ ಪರಮಾತ್ಮನು ಅಷ್ಟೈಶ್ವರ್ಯಗಳನಿತ್ತು ಕಾಪಾಡಲಿ ಎಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ.

ಈ ಮಧ್ಯೆ ನನ್ನ ಹಳೆಯ ಮಿತ್ರರು ಮನೆಗೆ ಬಂದಿದ್ದರು. ಅವರ ಮುಂದೆ ನನ್ನ ಸಮಸ್ಯೆಯಿಟ್ಟೆ ಅದಕ್ಕೆ ಅವರು ನನ್ನ ಮಗಳೇ ಸಂಸ್ಕೃತ M.A. ಆದನಂತರ, ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದಾಳೆ. (ಆಕೆಯ ಪ್ರತಿಭೆಗೆ ತಕ್ಕಂತೆ ಸುವರ್ಣ ಪದಕವೂ ಲಭಿಸಿದೆ.) ಆಕೆಯಿಂದ ಈ ಕಾರ್ಯ ಮಾಡಿಸುತ್ತೇನೆ. ಹೊಸಬಳು ಅನುಭವವಿಲ್ಲ, ತಮ್ಮ ಮಾರ್ಗದರ್ಶನ ಅಗತ್ಯವೆಂದರು ಬಡವನಿಗೆ ಭಾಗ್ಯವೂ ದೊರೆತಂತಾಯಿತು. ಕೂಡಲೆ ನನ್ನ ಕೃತಿಗಳಿಗೆ ದೊಡ್ಡವರು ಬರೆದ ಮುನ್ನುಡಿಗಳನ್ನು ಅವಲೋಕಿಸಲು ಕೊಟ್ಟೆ ಜೊತೆಯಲ್ಲಿ ಪ್ರಿಂಟಾದ ಪ್ರತಿಯನ್ನೂ ಯಿಟ್ಟೆ ಕೆಲವೇ ದಿನಗಳಲ್ಲಿ ಅವರು ನನ್ನ ಊಹೆಗೆ ಮೀರಿದ ಸುಂದರವಾದ, ವಿಮರ್ಶಾತ್ಮಕವಾದ ಮುನ್ನುಡಿಯನ್ನಿತ್ತು ಕೃತಿಗೆ ತಿಲಕವನ್ನಿಟ್ಟು ಶುಭ ಕೋರಿದ್ದಾರೆ. ಮೊದಲೇ ಆಚಾರ್ಯರ ಮನೆತನ. ಪರಂಪರೆಯ ಸಂಸ್ಕೃತಿ. ಕೇಳಬೇಕೆ?.

ಈ ರೀತಿ ಸಹಕರಿಸಿದ ಮಿತ್ರರಾದ ಶ್ರೀ ಅನಂತಪದ್ಮನಾಭ ಜಾಗೀರದಾರ ಮತ್ತು ಅವರ ಪುತ್ರಿ ಚಿ||ಕುಮಾರಿ "ಜ್ಯೋತ್ಸ್ನಾ" ಅವರಿಗೂ ಅನಂತ ಅತಿಶಯ ಸೌಭಾಗ್ಯಗಳನ್ನೀಯಲಿ ಎಂದು ಆನಂದತೀರ್ಥರಂತರ್ಗತ ಶ್ರೀ ಹರಿಯಲ್ಲಿ ಪ್ರಾರ್ಥಿಸುತ್ತೇನೆ.

ಈ ನನ್ನ ಕಾರ್ಯದಲ್ಲಿ "ಪ್ರೋ. S.H. ಶಿಂಗಟಾಲೂರು, ಸರಕಾರಿ ಮಹಾವಿದ್ಯಾಲಯ ಮತ್ತು ಶ್ರೀ ಮೂರ್ತಿ ಆನಂದ ಪ್ರಿಂಟರ್ಸ್, ಬೆಂಗಳೂರು, ಇವರು ಸಾಹಿತ್ಯ ಒದಗಿಸಿ, ಶ್ರಮವಹಿಸಿ ಝೆರಾಕ್ಸ್‌ಮಾಡಿ ಕಳಿಸಿದ್ದಾರೆ. ಅವರ ಸಹಕಾರಕ್ಕಾಗಿ ಅವರಿಬ್ಬರಿಗೂ ಕೃತಜ್ಞತೆಗಳು.

ನನ್ನ ಕಾರ್ಯವನ್ನು ನೋಡಿ ಮೆಚ್ಚಿ, ತಾವಾಗಿಯೇ ಉತ್ಸಾಹದಿಂದ ಶ್ರೀ ವ್ಯಾಸರು ಮತ್ತು ಶ್ರೀ ಮಧ್ವರ ಫೋಟೋವನ್ನು ಸಿದ್ಧಪಡಿಸಿ ಬ್ಲಾಕ್ ಮಾಡಿಸಿ, ಭಕ್ತಿಯಿಂದ ಕಾಣಿಕೆಯಿತ್ತು ಶ್ರೀ ಕೆ.ರಾಘವೇಂದ್ರರಾವ್, ಮೈಸೂರು ಅವರ ಉಪಕಾರವನ್ನು ಮರೆಯಲಾರೆ.

ಅಚ್ಚುಕಟ್ಟಾಗಿ ಜನ ಮೆಚ್ಚುವಂತೆ ಸುಂದರವಾಗಿ ಮುದ್ರಿಸಿಕೊಟ್ಟ ಬೃಂದಾವನ ಮುದ್ರಣದ ನಿರ್ದೇಶಕರು ಅವರ ಸಿಬ್ಬಂದಿವರ್ಗಕ್ಕೂ, ಶ್ರೀ P.R.M. ದೇಸಾಯಿ ಅವರಿಗೂ ಧನ್ಯವಾದಗಳು.

ಹಿಂದಿನ ಕೃತಿಗಳನ್ನು ಖರೀದಿಸಿ ಸಹಕರಿಸಿದ ಸದಸ್ಯರು ಇದನ್ನು ಖರೀದಿಸಿ, ಕನಿಷ್ಠ ಇನ್ನೊಬ್ಬ ಸದಸ್ಯನನ್ನಾಗಿ ಮಾಡಿದರೆ, ``Each One Teach One" ಎಂಬ ತತ್ವದಂತೆ ನನ್ನ ಗುರಿಮುಟ್ಟಲು ಸಾಧ್ಯವಿದೆ. ಅದರಿಂದ ಇನ್ನುಳಿದ ಕೃತಿಗಳು ಹೊರಬಂದು ಈ ಜ್ಞಾನಯಜ್ಞಕಾರ್ಯ ಪೂರ್ತಿಗೊಳ್ಳುತ್ತದೆ. ಎಲ್ಲರೂ ಅಪವೃತ ಸ್ಥಾನಕ್ಕೆ ಯೋಗ್ಯರು ಆಗುತ್ತಾರೆ. ಆ ಭಾಗ್ಯವು ಕೂಡಿಬರಲಿ ಎಂದು ಭಗವಂತನಲ್ಲಿ ಪ್ರಾರ್ಥನೆ.

ಶ್ರೀ ಶ್ರೀನಿವಾಸನ ಅನುಗ್ರಹದಿಂದ ಶ್ರೀ ವ್ಯಾಸಮಹಾಭಾರತ ತಾತ್ಪರ್ಯ ನಿರ್ಣಯ ಅನುವಾದದ ಕಾರ್ಯ ಇದುವರೆಗೆ ಯಶಸ್ವಿಯಾಗಿ ಮುಂದುವರಿದಿದೆ ಎಂದು ಹರ್ಷಿಸಿ, ಆ ಕರುಣಾಕರನ ಕರುಣೆಗೆ ವಂದಿಸಿ ಕೃತಜ್ಞೆಗಳನ್ನು ಸಲ್ಲಿಸುತ್ತೇನೆ.

ಸರ್ವಂ ಶುಭಂ ಮಂಗಳಂ

ಸಾಹಿತ್ಯ ಸದನ C/o ವೆಂಕಟಾದ್ರಿ
ಕಲ್ಬುರ್ಗಿ
ದಿ.೧೩-೨-೧೯೯೩.

ಭಕ್ತರ ಭಕ್ತ
**ಆರ್. ಎಚ್. ಕುಲಕರ್ಣಿ**

## ಹರಿಃ ಓಂ

## ಶ್ರೀ ಗುರುಭ್ಯೋ ನಮಃ

**ವ್ಯಾಸಂ ವಸಿಷ್ಟನಪ್ತಾರಂ ಶಕ್ತೇಃ ಪೌತ್ರಮಕಲ್ಮಷಮ್।**
**ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಮ್॥**

ಶ್ರೀ ವ್ಯಾಸರು ವಸಿಷ್ಟರ ವಂಶಜರು, ಶಕ್ತಿ ಋಷಿಯ ಮೊಮ್ಮಕ್ಕಳು ಮತ್ತು ಕಲ್ಮಷ ರಹಿತರು, ಪರಾಶರರಿಗೆ ಮಕ್ಕಳೂ ಅಹುದು, ಶುಕರಿಗೆ ತಾತ (ಪಿತ)ರೂ ಅಹುದು. ತಪೋನಿಧಿಗಳೂ ಆದ ಇಂಥ ವ್ಯಾಸರಿಗೆ ವಂದಿಸುವೆನು.

ಈ ಒಂದು ಚಿಕ್ಕ ಪದ್ಯದಲ್ಲಿ ಶ್ರೀ ವ್ಯಾಸರ ಸಂಕ್ಷಿಪ್ತ ಪರಿಚಯವಿದೆ ಎಂದರೆ ತಪ್ಪಾಗಲಾರದು.

**ಭೂಪಾಯತ್ರ ಪುರೂರವಾಃ ಪ್ರಶ್ರುತಯೋ।**
**ಜಾತಾ ವಿರೋಧನ್ವಯೋ।**
**ಯದ್ವಾದ್ಯ ಭಾರತಾದಯಃ ಕುರುಮುಖಾ।**
**ಭೀಷ್ಮಂಬಿಕೆಯಾದಯಃ॥**
**ಭೂಭಾರಕ್ಷಯಾಕಾಂಕ್ಷಿಭಿಃ ಸುಮರೇ।**
**-ರಭ್ಯಾರ್ಥತಿಃ॥**
**ಸ್ತತ್ರಾವಿರ್ಭವಿತುಂ ಸಹಾಮುರವರ್ರ್ಯೈಃ॥**
**-ರಿಚ್ಛನ್ ಹರಿಃ ಪಾತುಮಾಮ್॥**

**(ಭಾವಸಂಗ್ರಹ)**

ಯಾವ ವಂಶದಲ್ಲಿ ಸುಪ್ರಸಿದ್ಧನಾದ, ನಿರ್ವೈರಿ ಪುರೂರವನು ಜನಿಸಿದನೋ, ಯಾವ ಮನೆತನದಲ್ಲಿ ಭರತ ಮುಂತಾದ ಕುರುಶ್ರೇಷ್ಠರು ಅವತರಿಸಿದರೋ, ಯಾವ ಮನೆತನದಲ್ಲಿ ಭೀಷ್ಮ, ಅಂಬಿಕೆ ಮೊದಲಾದವರು ಪ್ರಸಿದ್ಧರಾಗಿ, ಭೂ ಭಾರವ ಇಳುಹಲು ಆಕಾಂಕ್ಷಿತರಾಗಿ ಸನ್ನದ್ಧರಾದರೋ ಅಂಥ ದೇವತೆಗಳ ಪ್ರಾರ್ಥನೆಯನ್ನು ಮನ್ನಿಸಿ ಅದೇ

ಮನೆತನದಲ್ಲಿ ಮುರವೈರಿಯಾದ ಶ್ರೀಹರಿಯು ಆವಿರ್ಭವಿಸಲಿಚ್ಛಿಸಿದನು. ಆ ಶ್ರೀಹರಿಯು ನಮ್ಮನ್ನು ರಕ್ಷಿಸಲಿ.

ಮೇಲಿನ ಶ್ಲೋಕದಲ್ಲಿ ಶ್ರೀ ಶ್ರೀ ವಾದಿರಾಜರು ೧೧ನೆಯ ಅಧ್ಯಾಯದ ಸಾರವನ್ನಿತ್ತು, "ಶ್ರೀಹರಿ"ಯ ಪ್ರಾದುರ್ಭಾವಕ್ಕೆ ಪೀಠಿಕೆಯನ್ನು ರೂಪಿಸುತ್ತ, ಅಂತಹ ಶ್ರೀಹರಿಯು ನಮ್ಮನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದ್ದಾರೆ.

## ಹರಿಃ ಓಂ

## ಶ್ರೀ ಗುರುಭ್ಯೋ ನಮಃ

## ಅಥ ಏಕಾದಶೋಽಧ್ಯಾಯಃ

**ಹರಿಃ ಓಂ॥ ಓಂ ಶಶಾಂಕ ಪುತ್ರದಭವತ್ಪುರೂರವಾಃ**
**ತಸ್ಯಾಯುರಾಯೋರ್ನಹುಷೋ ಯಯಾತಿಃ।**
**ತಸ್ಯಾಸ ಪತ್ನೀಯುಗಲಂ ಸುತಾಶ್ಚ**
**ಪಂಚಾಭವನ್ ವಿಷ್ಣು ಪದೈಕ ಭಕ್ತಾಃ ॥೧॥**

ಚಂದ್ರನ ಮಗನ ಉದರದಲ್ಲಿ 'ಪುರೂರವ' ಎಂಬ ರಾ
ಅವನ ಮಗನೇ 'ಆಯು!' ಅವನ ಮಗನೇ 'ನಹುಷ
ಹೊಟ್ಟೆಯಲ್ಲಿ ಪ್ರಸಿದ್ಧನಾದ 'ಯಯಾತಿ' ರಾಜನು ಜನಿ
ರಾಜನಿಗೆ ಇಬ್ಬರು ಹೆಂಡಂದಿರು. ಅವರಿಗೆ ಐದುಜನ ಮಕ್ಕಳಿದ್ದರು. ಅವರೆಲ್ಲರು ಶ್ರೀ ವಿಷ್ಣುವಿನ ಪರಮ ಭಕ್ತರಾಗಿದ್ದರು.

**ಅತ್ರಿಸ್ತು ಬ್ರಹ್ಮಣಃ ಪುತ್ರಃ ಶಶಾಂಕಸ್ತತ್ಸುತಃ ಸ್ಮೃತಃ ।**

ಅತ್ರಿ ಋಷಿಯು ಬ್ರಹ್ಮನ ಕಣ್ಣಿನಿಂದ ಹುಟ್ಟಿದನು. ಆತನ ಮಗನೇ ಶಶಾಂಕನು. ಶಶಾಂಕನಾರು? ಎಂಬುದು ಈ ವಾಕ್ಯದಿಂದ ಸ್ಪಷ್ಟವಾಗುತ್ತದೆ.

ವಿ.ವಿ. ಭಾರತ ಸಂಸ್ಕೃತಿಯ ಆಕರ ಗ್ರಂಥಗಳು ಎರಡು. ಒಂದು 'ರಾಮಾಯಣ' ಮತ್ತೊಂದು 'ಮಹಾಭಾರತ'. ಇವುಗಳಲ್ಲಿ

ರಾಮಾಯಣವು ಸೂರ್ಯವಂಶಕ್ಕೆ ಮೀಸಲಾಗಿದ್ದರೆ ಮಹಾಭಾರತವು ಚಂದ್ರವಂಶಕ್ಕೆ ಪ್ರಸಿದ್ಧವಾಗಿದೆ.

ದೇವಗಣಗಳಲ್ಲಿ ಅನೇಕ ಪ್ರಸಿದ್ಧ ದೇವತೆಗಳಿರುವಾಗ, ಈ ಸೂರ್ಯ ಚಂದ್ರರಿಗೆ ಏಕೆ ಇಷ್ಟು ಮಹತ್ವ ದೊರೆಯಿತು? ಪರಮಾತ್ಮನು ಈ ವಂಶಗಳಲ್ಲೇ ಅವತರಿಸಲು ಏಕೆ ನಿಶ್ಚಯಿಸಿದನು?

ಸೂರ್ಯ-ಚಂದ್ರರು ಜಗತ್ತಿಗೆ ಆವರಿಸಿದ ಕತ್ತಲೆಯನ್ನು ಕಳೆಯುತ್ತಾರೆ. ಪರಮಾತ್ಮನಿಗೆ, ಜಗತ್ತಿನಲ್ಲಿ (ಜನರ ಮನದಲ್ಲಿ) ಆವರಿಸಿದ ಅಜ್ಞಾನ ಮತ್ತು ಅಧರ್ಮ ಎಂಬ ಕತ್ತಲೆಗಳನ್ನು ಕಳೆಯಬೇಕಾಗಿದೆ. ಅದಕ್ಕಾಗಿ ಆತನು ಈ ವಂಶಗಳನ್ನು ಆಯ್ದುಕೊಂಡನು. ಅದ್ದರಿಂದಲೇ ಸೂರ್ಯ-ಚಂದ್ರರಿಗೆ ಈ ಮಹತ್ವ ದೊರೆಯಿತು. ಅವರು ಆರೋಗ್ಯಪ್ರದರೂ ಆದರು.

ಈ ಮನೆತನಗಳಲ್ಲಿ ಅನೇಕ ಚಕ್ರವರ್ತಿಗಳು ಪ್ರಸಿದ್ಧ ಪುರುಷರಾಗಿದ್ದಾರೆ. ಅಂತೆಯೇ "ರಾಜಪುತ್ರ ಕ್ಷದೇವತಾ" ಎಂಬ ಮಾತು ರೂಢಿಯಲ್ಲಿ ಬಂದಿತು.

ಮುಂದಿನ ಶ್ಲೋಕಗಳಲ್ಲಿ 'ಶ್ರೀಮದಾಚಾರ್ಯರು' ಚಂದ್ರವಂಶ ವೃಕ್ಷದ ಬೆಳವಣಿಗೆಯನ್ನು ವಿವರಿಸುತ್ತಾರೆ.

**ಯದುಂ ಚ ತುರ್ವಸುಂ ಚೈವ**
**ದೇವಯಾನೀ ವ್ಯಜಾಯತೇ। ತ**
**ದ್ರುಹ್ಯುಂ ಚಾನುಂ ಚ ಪೂರುಂ ಚ**
**ಶರ್ಮಿಷ್ಠಾ ವಾರ್ಷಪರ್ವಣಿ ॥೨॥**

ಯಯಾತಿಯ ಒಬ್ಬ ಹೆಂಡತಿ ದೇವಯಾನಿ. ಆಕೆಯ ಹೊಟ್ಟೆಯಲ್ಲಿ ಯದು ಮತ್ತು ತುರ್ವಸು ಎಂಬ ಇಬ್ಬರು ಮಕ್ಕಳು ಆದರು. ಇನ್ನೊಬ್ಬ ಹೆಂಡತಿ ಶರ್ಮಿಷ್ಠೆ. ಆಕೆಯು ದ್ರುಹ್ಯ, ಅನು ಮತ್ತು ಪೂರು ಎಂಬ ಮೂರು ಮಕ್ಕಳನ್ನು ಹೆತ್ತಳು. ಇವಳು 'ವೃಕ್ಷಪರ್ವ' ಎಂಬ (ದಾನವ) ರಾಜನ ಮಗಳು.

ವಿ.ಪಿ. ದೇವಯಾನಿ ಶುಕ್ರಾಚಾರ್ಯರ ಮಗಳು, ಶರ್ಮಿಷ್ಠೆ ವೃಕ್ಷಪರ್ವನ ಮಗಳು ವರ್ಗಗಳು ಬೇರೆ ಬೇರೆ ವಿವಾಹ ಹೇಗೆ ಸಾಧ್ಯ? ಬಾಗವತದಲಿ

ಇದರ ಸ್ಪಷ್ಟೀಕರಣ ಸಾಕಷ್ಟು ಬಂದಿದೆ. ಅಂತೆಯೇ ಆಚಾರ್ಯರು ಅದನ್ನು ಇಲ್ಲಿ ಕೈ ಬಿಟ್ಟಿದ್ದಾರೆ. ಇಲ್ಲಿ ಮನೆತನವನ್ನು ತಿಳಿಸುವುದು ಮುಖ್ಯ ಉದ್ದೇಶವಾಗಿದೆ.

**ಯದೋರ್ವಂಶೇ ಚಕ್ರವರ್ತೀ**
**ಕಾರ್ತವೀರ್ಯೋರ್ಜುನೋऽಭವತ್।**
**ವಿಷ್ಣೋರ್ದತ್ತಾತ್ರೇಯ ನಾಮ್ನಃ**
**ಪ್ರಸಾದಾದ್ಯೋಗವೀರ್ಯವಾನ್ ॥೩॥**

ಯದು ವಂಶದಲ್ಲಿ 'ಕಾರ್ತವೀರ್ಯ' ಎಂಬ ಪ್ರಸಿದ್ಧ ಚಕ್ರವರ್ತಿಯಾದನು. ಆತನಿಗೆ ವಿಷ್ಣುವಿನ ಅವತಾರನಾದ ದತ್ತಾತ್ರೇಯನ ಸಂಪೂರ್ಣ ಅನುಗ್ರಹವಿದ್ದಿತು. ಪರಮಾತ್ಮನ ಪ್ರಸಾದದಿಂದಲೇ ಆತನು ಬಹು ಪರಾಕ್ರಮಿಯಾಗಿದ್ದನು, ಜೊತೆಯಲ್ಲಿ ಯೋಗಸಾಧನೆಯನ್ನೂ ಮಾಡಿದ್ದನು.

ವಿ.ವಿ. ಇಲ್ಲಿ ಆಚಾರ್ಯರು 'ವಂಶೇ' ಎಂಬ ಪದವನ್ನು ಬಳಸಿ, ಕಾರ್ತವೀರ್ಯಾರ್ಜುನನು ಯದುವಂಶಕ್ಕೆ ಸೇರಿದವನು. ಯದು ರಾಜನ ಮಗನಲ್ಲವೆಂದು ಸ್ಪಷ್ಟ ಪಡಿಸಿದ್ದಾರೆ.

**ತಸ್ಯಾನ್ವವಾಯೋಯಾದವೋ ಬಭೂವುರ್ವಿಷ್ಣುಸಂಶ್ರಯಾಃ ।**
**ಪುರೋರ್ವಂಶೇ ತು ಭರತಃ ಚಕ್ರವರ್ತೀ ಹರಿ ಪ್ರಿಯಃ ॥೪॥**

ಆ ಕಾರ್ತವೀರ್ಯನ ವಂಶದಲ್ಲಿಯೇ ಯಾದವರ ವಂಶವು ಪ್ರಸಿದ್ಧಿಯನ್ನು ಪಡೆಯಿತು. ಪುರುವಂಶದಲ್ಲಿ ಭರತನೆಂಬ ಬಹು ಪ್ರಸಿದ್ಧ ಚಕ್ರವರ್ತಿಯಾದನು. ಅವನು ಪರಮಭಕ್ತನಾದುದರಿಂದ ಶ್ರೀಹರಿಗೆ ಬಹು ಪ್ರಿಯನಾಗಿದ್ದನು.

**ತದ್ವಂಶಜಃ ಕುರುರ್ನಾಮ ಪ್ರತೀಪೋऽಭೂತ್ತದನ್ವಯಃ।**
**ಪ್ರತೀಪಸ್ಯಾ ಭವನ್ ಪುತ್ರಾಸ್ತ್ರಯಸ್ತ್ರೇತಾಗ್ನಿ ವರ್ಚಸಃ ॥೫॥**

ಆ ಭರತನವಂಶದಲ್ಲಿ 'ಕುರು' ಎಂಬ ರಾಜನಾದನು. ಅವನ ಅನ್ವಯದಲ್ಲಿ 'ಪ್ರತೀಪ'ನು. ಆ ಪ್ರತೀಪನಿಗೆ ಮೂರು ಜನ ಮಕ್ಕಳಾದರು. ಅವರು ಮೂರು ಅಗ್ನಿಗಳಂತೆ ವರ್ಚಸ್ಸು ಉಳ್ಳವರಾಗಿದ್ದರು.

**ದೇವಪಿರಥ ಬಾಹ್ಲೀಕೋ ಗುಣಜ್ಯೇಷ್ಠಶ್ಚ ಶಂತನುಃ।**
**ತ್ವಗ್ದೋಷಯುಕ್ತೋ ದೇವಾಪಿರ್ಜಗಾಮ ತಪಸೇವನಮ್ ॥೬॥**

ದೇವಾಪಿ, ಬಾಹ್ಲೀಕ ಮತ್ತು ಶಂತನು ಇವರೇ ಆ ಮೂರು ಮಕ್ಕಳು. ಶಂತನು ಗುಣಗಳಿಂದ ಶ್ರೇಷ್ಠನಾಗಿದ್ದನು. ದೇವಾಪಿ, ಚರ್ಮರೋಗದಿಂದ (ತ್ವಗ್ದೋಷ) ಪೀಡಿತನಾದ ಕಾರಣ ತಪಸ್ಸಿಗಾಗಿ ವನಕ್ಕೆ ನಡೆದನು.

ವಿ.ವಿ. ವರ್ಚಸ್ಸಿನಲ್ಲಿ ದೇವಾಪಿ, ಬಾಹ್ಲೀಕ ಮತ್ತು ಶಂತನು ಇವರು ಆಹವನೀಯ, ಗಾರ್ಹಪತ್ಯ ಮತ್ತು ದಕ್ಷಿಣಾಗ್ನಿ ಇವರಿಗೆ ಸಮಾನರಾಗಿದ್ದರು. ಆ ಅಗ್ನಿಗಳ ಅವತಾರಗಳೇ ಇವರು ಎಂದೂ ಹೇಳುವುದುಂಟು.

**ವಿಷ್ಣೋಃ ಪ್ರಸಾದಾತ್ಸ ಕೃತೇಯುಗೇ ರಾಜಾ ಭವಿಷ್ಯತಿ ।**
**ಪುತ್ರಿಕಾಪುತ್ರತಾಂ ಯತೋ ಬಾಹ್ಲೀಕೋ ರಾಜಸತ್ತಮಃ ॥೭॥**

ವಿಷ್ಣು ಪ್ರಸಾದದ ಬಲದಿಂದ ಅವನು (ದೇವಾಪಿ) ಪುನಃ ಕೃತಯುಗದಲ್ಲಿ ರಾಜನಾದನು. ಬಾಹ್ಲೀಕನು 'ಪುತ್ರಿಕಾಪುತ್ರನ್ಯಾಯ' ದಂತೆ ಮಾತಾಮಹನ (ಅಜ್ಜನ) ಮನೆತನದಲ್ಲಿ ರಾಜನಾದನು.

ವಿ.ವಿ. 'ಪುತ್ರಿಕಾಪುತ್ರಕ' ಎಂದರೆ

**ಅಪುತ್ರೇಣ ಮಾಯೊಕನ್ಯಾದೀಯತೇ ತವ ಭೋ ವರ ।**
**ಏತಸ್ಯಾಂ ಜಾಯತೇ ಪುತ್ರೀ ಸ ಮೇ ಪುತ್ರೋ ಭವಿಷ್ಯತಿ ॥೮॥**

ನನಗೆ ಪುತ್ರರಿಲ್ಲದ ಪ್ರಯುಕ್ತ, ಹೇ, ರಾಜನ್! ನಾನು ನಿನಗೆ ಈ ಕನ್ಯೆಯನ್ನು ಕೊಡುತ್ತಿದ್ದೇನೆ. ಮುಂದೆ ಇವಳ ಉದರದಲ್ಲಿ ಹುಟ್ಟಿದ ಮಗುವೇ ನನಗೆ ಪುತ್ರನಾಗುತ್ತಾನೆ. ಅವನೇ 'ಪುತ್ರಿಕಾಪುತ್ರನು'. ಈ ಪದ್ಧತಿ ಹಿಂದೆ ರಾಜರಲ್ಲಿದ್ದಿತು. ಇಂದಿಗೂ ಆ ಪದ್ಧತಿ ಕೆಲವೆಡೆ ಈಗಲೂ ರೂಢಿಯಲ್ಲಿದೆ.

ಬಾಹ್ಲೀಕನು ಯಾರು?

**ಹಿರಣ್ಯಕಶಿಪೋಃ ಪುತ್ರಃ ಪ್ರಹ್ಲಾದೋ ಭಗವತ್ಪ್ರಿಯಃ । (ತ್ವರಃ) ।**
**ವಾಯುನಾ ಚ ಸಮಾವಿಷ್ಟೋ ಮಹಾಬಲಸಮನ್ವಿತಃ॥೯॥**

ಹಿರಣ್ಯಕಶಿಪುವಿನ ಮಗ ಪ್ರಹ್ಲಾದನು. ಅವನು ಭಗವಂತನಿಗೆ ಅತಿ ಪ್ರಿಯವಾಗಿದ್ದನು. ಅವನೇ ಇಂದು ವಾಯುವಿನಿಂದ ಸಮಾವಿಷ್ಟನಾಗಿ ಬಾಹ್ಲೀಕನಾಗಿ ಅವತರಿಸಿದ್ದಾನೆ. ಮಹಾಬಲಶಾಲಿಯೂ ಆಗಿದ್ದಾನೆ.

(ದೈವಭಕ್ತಿ ಇವನಿಗೆ ತಂದೆಯಿಂದ ದೈವದತ್ತವಾಗಿ ಬಂದಿದೆ ಎಂದರೆ ಆಶ್ಚರ್ಯವಲ್ಲ.)

ಬಾಹ್ಲೀಕನ ಪ್ರತಾಪ ಮತ್ತು ಆತನ ಅವತಾರಕ್ಕೆ ಕಾರಣ.

**ಯೇನೈವ ಜಾಯಮಾನೇನ ತರಸಾ ಭೂರ್ವಿದಾರಿತಾ।**
**ಭೂಭಾರ ಕ್ಷಪಣೇ ವಿಷ್ಣೋ ರಂಗತಾಮಾಪ್ತು ಮೇವ ಸಃ ॥೯॥**
**ಪ್ರತೀಪ ಪುತ್ರತಾಮಾಪ್ಯ ಬಾಹ್ಲೀಕೇಷ್ವ ಭವತ್ಪತಿ: ।**
**ರುದ್ರೇಷು ಪತ್ರತಾಪಾಖ್ಯಃ ಸೋಮದತ್ತೋಽಸ್ಯ ಚಾತ್ಮಜಃ ॥೧೦॥**

ಬಾಹ್ಲೀಕನು ಹುಟ್ಟುವ ಕಾಲದಲ್ಲಿ ಭೂಮಿಯು ನಡುಗಿ ತಾನಾಗಿಯೇ ಸೀಳಿತು. ಶ್ರೀ ವಿಷ್ಣುವು ಭೂಭಾರವ ಇಳುಹಲು ಅವತರಿಸಿದಾಗ, ಅಂಗಭೂತನಾಗಿ ಹುಟ್ಟಿ ಸೇವೆ ಸಲ್ಲಿಸಿ ಕೃತಾರ್ಥನಾಗಬೇಕೆಂದು ಪ್ರಹ್ಲಾದನೇ ಬಾಹ್ಲೀಕನಾಗಿ ಹುಟ್ಟಿದನು. ಅವರ ಮಗನೇ ಸೋಮದತ್ತನು. ಅವನೂ ಸಾಮಾನ್ಯನಲ್ಲ. ಏಕಾದಶರುದ್ರರಲ್ಲಿ 'ಪತ್ರತಾಪ' ನೆಂದ ರುದ್ರನೇ ಇವನು.

**ಅಜೈಕಪಾದಹಿರ್ಬುಧ್ನಿರ್ವಿರೂಪಾಕ್ಷ ಇತಿ ತ್ರಯಃ ।**
**ರುದ್ರಾಣಾಂ ಸೋಮದತ್ತಸ್ಯ ಬಭೂವಃ ಪ್ರಥಿಸ್ಸುತಾ: ॥೧೧॥**
**ವಿಷ್ಣೋ ರೇವಾಂಗತಾಮಾಪ್ತುಂ ಭೂರಿರ್ಭೂರಿಶ್ರವಾಃ ಶಲಃ ।**
**ಶಿವಾದಿ ಸರ್ವರುದ್ರಾಣಾಮಾವೇಶಾ ದ್ವರ ತಸ್ತಥಾ ॥೧೨॥**
**ಭೂರಿಶ್ರವಾ ಅತಿಬಲಸ್ತತ್ರಾಸೀತ್ಪರ ಮಾಸ್ತ್ರವಿತ್ ॥**
**ತದರ್ಥಂ ಹಿ ತಪಶ್ಚೀರ್ಣಂ ಸೋಮದತ್ತೇನ ಶಂಭವೇ ॥೧೩॥**

ಏಕಾದಶ ರುದ್ರರ ಪೈಕಿ ಅಜೈಕಪಾದ, ಅಹಿರ್ಬುಧ್ನಿ ಮತ್ತು ವಿರೂಪಾಕ್ಷ ಈ ಮೂವರು ಸೋಮದತ್ತನಿಗೆ ಪ್ರಸಿದ್ಧ ಮಕ್ಕಳಾಗಿ ಜನಿಸಿದರು. ಅವರೇ 'ಭೂರಿ, ಭೂರಿಶ್ರವ ಮತ್ತು ಶಲ್ಯ'ರು. ಅವರು ಕೂಡ

ವಿಷ್ಣುಕಾರ್ಯಕ್ಕಾಗಿಯೇ ಅಂಗಭೂತರಾಗಿ ಅವತರಿಸಿದರು. ಸರ್ವರೂ ರುದ್ರಾಂಶರಿಂದ ಯುಕ್ತರಾಗಿದ್ದರು. ಸೋಮದತ್ತನು ಶಂಭುವನ್ನು ಕುರಿತು ಹೆಚ್ಚು ತಪಸ್ಸು ಮಾಡಿದ ಕಾರಣ ಭೂರಿಶ್ರವನಲ್ಲಿ ರುದ್ರದೇವರ ವಿಶಿಷ್ಟ ಅನುಗ್ರಹವಿದ್ದಿತು. ಕಾರಣ ಆತನು ಶ್ರೇಷ್ಠನು, ಬಲಶಾಲಿಯು, ಉತ್ತಮ ಅಸ್ತ್ರಜ್ಞನೂ ಆಗಿದ್ದನು.

ಭೂರಿಶ್ರವನ ವೈಶಿಷ್ಟ್ಯ

**ದತ್ತೋ ವರಶ್ಚ ತೇನಾಸ್ಯ ತ್ವತ್ತ್ವತೀ ಹಾಭಿಭೂತಿಕೃತ್ ।**
**ಬಲವೀರ್ಯಗುಣೋಪೇತೋ ನಾಮ್ನಾ ಭೂರಿಶ್ರವಾಃ ಸುತಃ॥೧೪॥**
**ಭವಿಷ್ಯತಿ ಮಾಯಾವಿಷ್ಟೋ ಯಜ್ಞಶೀಲ ಇತಿ ಸ್ಮಹ ।**
**ತೇನ ಭೂರಿಶ್ರವಾ ಜಾತಃ ಸೋಮದತ್ತ ಸುತೋ ಬಲೀ ॥೧೫॥**

ಹಿಂದೆ ಸೋಮದತ್ತನು ರುದ್ರನನ್ನು ಕುರಿತು ತಪಸ್ಸು ಮಾಡಿದಾಗ, ರುದ್ರನು, "ನಿನಗೆ ಪ್ರತಾಪಶಾಲಿಯು, ಬಲವೀರ್ಯನು ಮತ್ತು ಯಜ್ಞಶೀಲನು ಆದ ಉತ್ತಮ ಮಗ ಹುಟ್ಟುತ್ತಾನೆ. ಅವನಲ್ಲಿ ನನ್ನ ಸಂಪೂರ್ಣ ಆವೇಶವಿರುತ್ತದೆ. ಅವನೇ ಭೂರಿಶ್ರವನು" ಎಂದು ವರವನ್ನು ದಯಪಾಲಿಸಿದ್ದನು. ಅವನೇ ಈಗ ಸೋಮದತ್ತನಿಗೆ ಬಲಾಢ್ಯನಾದ ಮಗನಾಗಿ ಹುಟ್ಟಿದ್ದಾನೆ.

'ಶಂತನು', ಆತನ ಮೂಲ ಸ್ವರೂಪ.

**ಪೂರ್ವೋ ದಧೇಸ್ತೀರ ಗತೇऽಬ್ಜ ಸಂಭವೇ।**
**ಗಂಗಾಯುತಃ ಪರ್ವಣಿ ಘೂರ್ಣಿತೋऽಬ್ಧಿಃ।**
**ಅವಾಕ್ಷಿಪತ್ತಸ್ಯ ತನೌ ನಿಜೋದ ಬಿಂದುಂ**
**ಶಶಾಪೈನ ಮಥಾಬ್ಜಯೋನಿಃ ॥೧೬॥**

ಒಂದು ದಿನ ಕಮಲಸಂಭವರಾದ ಬ್ರಹ್ಮದೇವರು ಪೂರ್ವದಲ್ಲಿರುವ ಸಮುದ್ರ ತೀರಕ್ಕೆ ಹೋಗಿದ್ದರು. ವರುಣನು ಗಂಗೆಯೊಡನೆ ಕ್ರೀಡಿಸುತ್ತಿದ್ದನು. ಸಮುದ್ರವು ಗರ್ಜಿಸುತ್ತ ತೆರೆಗಳಿಂದ ಹೊಯಿದಾಡುತ್ತಿದ್ದಿತು. ಹತ್ತಿರದಲ್ಲಿದ್ದ ಬ್ರಹ್ಮನ ಮೇಲೆ ನೀರಿನ ಹನಿಗಳು

ಸಿಡಿದವು. ಅವನಿಗೆ ನೀರಿನ ಅಭಿಷೇಕವಾಯಿತು. ಬ್ರಹ್ಮನು ಕೋಪಗೊಂಡು ಶಾಪವಿತ್ತನು.

**ಮಹಾಭಿಷಜಾ ನಾಮ ನರೇಶ್ವರಸ್ತ್ವಂ**
**ಭೂತ್ವಾ ಪುನಃ ಶಂತನು ನಾಮ ಧೇಯಃ।**
**ಜನಿಷ್ಯಸೇ ವಿಷ್ಣುಪದೀ ತಥೈಷಾ**
**ತತ್ರಾಪಿ ಭಾರ್ಯಾ ಭವತೋ ಭವಿಷ್ಯತಿ ॥೧೭॥**

ನೀನು ಮಹಾಭಿಷಕ್ ಎಂಬ ರಾಜನಾಗುವಿ. ಪುನಃ ಶಂತನು ಎಂಬ ಅರಸನಾಗಿ ಹುಟ್ಟುವಿ. ವಿಷ್ಣು ಪದದಲ್ಲಿ ಭಕ್ತಿಯುಳ್ಳವನಾಗುವಿ, ವಿಷ್ಣುಪಾದದಲ್ಲಿ ಜನಿಸಿದ ಗಂಗೆಯು ಮಾತ್ರ ನಿನಗೆ ನಿಜರೂಪದಿಂದಲೇ ಭಾರ್ಯೆಯಾಗುವಳು.

ವಿ.ವಿ. ಈ ಘಟನೆಯಿಂದ ನಾವು ಕೆಲವು ವಿಷಯಗಳನ್ನು ಅರಿಯಬಹುದು.

೧. ದೊಡ್ಡವರ ಎದುರಿನಲ್ಲಿ ನಮ್ಮ ಇತಿ ಮಿತಿಗಳನ್ನು (ಮರ್ಯಾದೆ) ಮೀರಿ ವರ್ತಿಸಬಾರದು. ವರುಣನೇ ಸಾಕ್ಷಿ.

೨. (೧). ಬ್ರಹ್ಮನ ಶಾಪ – ಮೊದಲು ಅಭಿಷೇಕವಾಯಿತು. ಕಾರಣ ವರುಣನು 'ಮಹಾಭಿಷಕ್' ರಾಜನಾದನು. ಪುನಃ ಪಶ್ಚಾತ್ತಾಪದಿಂದ ಶಾಂತನಾದನು. ಕಾರಣ 'ಶಂತನು' ಆಗಿ ಒಳ್ಳೆಯ ರಾಜನಾದನು (ಶಾಂತ +ತನು)

(೨). ಪಶ್ಚಾತ್ತಾಪವು ಮಾಡಿದ ತಪ್ಪನ್ನು ತಿದ್ದಿ, ಒಳ್ಳೆಯ ಫಲವನ್ನು ಕೊಡುತ್ತದೆ.

೩. ದೇವತೆಗಳಲ್ಲಿ ನಿಯತ 'ಪತಿ–ಪತ್ನಿತ್ವ' ಇರುತ್ತದೆ. ಅದು ತಪ್ಪುವುದಿಲ್ಲ. ವರುಣನು ಭೂಲೋಕದಲ್ಲಿ ಜನಿಸಿದರೂ ಕೂಡ ಗಂಗೆಯೇ ಪತ್ನಿಯಾಗಬೇಕಾಯಿತು.

೪. ವರುಣನ ತಪ್ಪಿಗಾಗಿ ಗಂಗೆಗೆ ಭೂಮಿಗೆ ಬರಬೇಕಾಯಿತು.

೫. ಬ್ರಹ್ಮನ ಶಾಪದಿಂದ ವರುಣನು ಎರಡೂ ಸಲ ರಾಜನಾದನು ಅವನಿಗೆ ಶಾಪದಿಂದ ಶಿಕ್ಷೆ ಏನಾಯಿತು?

ದೇವತೆಗಳಿಗೆ ಭೂಲೋಕಕ್ಕೆ ಬರುವುದೆಂದರೇನೇ ದೊಡ್ಡ ಶಿಕ್ಷೆ. ಅದನ್ನು ವರುಣನು ಅನುಭವಿಸಬೇಕಾಯಿತು.

ಶಾಂತೋ ಭವತ್ಯೇವ ಮಯೋದಿತಸ್ತ್ವಂ
ತನುತ್ವ ಮಾಪ್ತೋಽಥ ತತಶ್ಚ ಶಂತನುಃ ।
ಇತೀರಿತಃ ಸೋಽಪಿ ನೃಪೋ ಬಭೂವ
ಮಹಾಭಿಷಜಾ ನಾಮ ಹರೇ ಪದಾಶ್ರಯಃ ॥೧೮॥

'ಶಾಂತನಾಗು' ಎಂದು ನಾನು ಹೇಳಿದ ಕೂಡಲೆ ನೀನು ಶಾಂತನಾಗಿರುವಿ. ಕಾರಣ ನೀನು 'ಶಂತನು' ಎಂಬ ಹೆಸರಿನಿಂದ ಹುಟ್ಟು! ಎಂದು ಬ್ರಹ್ಮನು ಹೇಳಿದನು. ಇದರ ಪರಿಣಾಮವಾಗಿ ಸಮುದ್ರರಾಜ ವರುಣನು 'ಮಹಾಭಿಷಜಾ' ಎಂಬ ರಾಜನಾಗಿ ಹುಟ್ಟಿದನು. ಅವನು ಹರಿಪದವನ್ನೇ ಆಶ್ರಯವನ್ನಾಗಿ ಮಾಡಿಕೊಂಡು ಒಳ್ಳೆಯ ಭಕ್ತನಾಗಿದ್ದನು.

ಇದು ವರುಣನ ಮೊದಲ ಜನ್ಮ. ಬ್ರಹ್ಮನ ಶಾಪದ ಮೊದಲಭಾಗ.

'ಮಹಾಭಿಷಜಾ' ಶಂತನು ಆದದ್ದು.

ಸ ತತ್ರ ಭುಕ್ತ್ವಾ ಚಿರಕಾಲ ಮುರ್ವಿಂ
ತನುಂ ವಿಹಾಯಾಪ ಸದೋ ವಿಧಾತುಃ ।
ತತ್ರಾಪಿ ತಿಷ್ಠನ್ ಸುರವೃಂದ ಸನ್ನಿಧೌ
ದದರ್ಶ ಗಂಗಾಂ ಶ್ಲಥಿತಾಂಬರಾಂ ಸ್ವಕಾಮ್ ॥೧೯॥

'ಮಹಾಭಿಷಕ್' ಬಹುಕಾಲ ರಾಜ್ಯವಾಳಿ ತನ್ನ ದೇಹವನ್ನು ತ್ಯಜಿಸಿ, ಬ್ರಹ್ಮಲೋಕದಲ್ಲಿ ದೇವತೆಗಳ ಸಭೆಗೆ ಹೋದನು. ಅಲ್ಲಿ ದೇವತೆಗಳ ಸನ್ನಿಧಿಯಲ್ಲಿದ್ದ ಶ್ಲಥಿತಾಂಬರಳಾದ ತನ್ನ ಪತ್ನಿ ಗಂಗಾದೇವಿಯನ್ನು ವರುಣನು ನೋಡಿದನು.

ಅವಾಙ್ಮುಖೇಷು ದ್ಯುಸದತ್ಸು ಗಂಗಾಂ
ನಿರೀಕ್ಷಮಾಣಂ ಪುನರಾತ್ಮ ಸಂಭವಃ ।
ಉವಾಚ ಭೂಮೌ ನೃಪತಿರ್ಭವಾಶು
ಶಪ್ತೋ ಯಥಾ ತ್ವಂ ಹಿ ಪುರಾಮಯ್ಯೆವ ॥೨೦॥

ಎಲ್ಲ ದೇವತೆಗಳೂ ಕೆಳಮುಖರಾಗಿ ಕುಳಿತಿದ್ದರೂ, ವರುಣನು ಮಾತ್ರ ಹಾಗೆಯೇ ನೋಡುತ್ತಿದ್ದನು.ಇದನ್ನು ಕಂಡ ಬ್ರಹ್ಮನು ನಾನು ನಿನಗೆ ಮೊದಲೇ ಶಾಪವಿತ್ತಂತೆ. ಕೂಡಲೆ ನೀನು ಭೂಲೋಕದಲ್ಲಿ ರಾಜನಾಗಿ ಹುಟ್ಟು ಎಂದು ಹೇಳಿದನು.

ವಿ.ವಿ. ಯಾವಾಗಲು ಸಭೆಗೆ ಬಂದು ಮರ್ಯಾದೆ ಇರುತ್ತದೆ. ಇದು ದೇವತೆಗಳ ಸಭೆ. ಬ್ರಹ್ಮನ ಅಧಿಷ್ಠಾನ. ಇಲ್ಲಿ ಮಹಾಭಿಷಕ್ ತನ್ನ ಎಲ್ಲೆಯನ್ನು ಮೀರಿ ನಡೆದುಕೊಂಡನು. ದೊಡ್ಡವರಿಗೆ ಅಗೌರವ ತೋರಿದನು. ಅದಕ್ಕಾಗಿ ಅವನು ಭೂಲೋಕಕ್ಕೆ ಮರಳಿದನು. ಅವನಿಗೆ ಅದೇ ಯೋಗ್ಯ ಶಿಕ್ಷೆಯಾಯಿತು.

**ಇತೀ ರಿತಸ್ತತ್ ಕ್ಷಣತಃ ಪ್ರತೀಪಾತ್**
**ಬಭೂವ ನಾಮ್ನಾ ನೃಪತಿಶ್ಚ ಶಂತನುಃ ।**
**ಅವಾಪ್ಯ ಗಂಗಾಂ ದಯಿತಾಂ ಸ್ವಕೀಯಾಂ**
**ತಯಾ ಮುಮೋದಾಬ್ದಗಣಾನ್ ಬಹೂಂಶ್ಚ ॥೨೧॥**

ಈ ರೀತಿ ಶಾಪಕ್ಕೊಳಗಾದ 'ಮಹಾಭಿಷಕ್' ಕೂಡಲೇ ಭೂಲೋಕದಲ್ಲಿ ಪ್ರತೀಪ ರಾಜನಿಗೆ ಮಗನಾಗಿ ಹುಟ್ಟಿದನು. ಅವನೇ ಶಂತನು. ಅವನು ತನ್ನ ನಿಯತ ಪತ್ನಿಯಾದ ಗಂಗಾದೇವಿಯನ್ನು ಪಡೆದು, ಆಕೆಯೊಡನೆ ಬಹು ವರ್ಷಗಳ ವರೆಗೆ ಆನಂದದಿಂದ ಕಾಲ ಕಳೆಯುಹತ್ತಿದನು.

ಇಲ್ಲಿ ಕಥಾಂತರವಾಗುತ್ತದೆ. ಅದಕ್ಕಾಗಿ ಆಚಾರ್ಯರು, ಶ್ಲೋಕದ ಪ್ರಾರಂಭದಲ್ಲಿ 'ಅಥ' ಎಂಬ ಶಬ್ದವನ್ನು ಬಳಸಿದ್ದಾರೆ. ಇಲ್ಲದಿದ್ದಲ್ಲಿ ಶಂತನುವಿನ ಚರಿತ್ರೆಯನ್ನು ನೇರವಾಗಿ ಹೇಳಬಹುದಾಗಿದ್ದೀತು ಆಚಾರ್ಯರ ಉದ್ದೇಶ ಕೇವಲ ಕಥೆ ಹೇಳುವುದಲ್ಲ. ಅದರ ಮೂಲ ಮತ್ತು ಪರಿಣಾಮವನ್ನು ತಿಳಿಸುವುದೇ ಅವರ ಮುಖ್ಯ ಉದ್ದೇಶ ಆಗಿದೆ. (ಲೇಖಕ)

## ಭೀಷ್ಮಾಚಾರ್ಯರ ಹುಟ್ಟಿನ ಹಿನ್ನಲೆ

ಅಥಾಷ್ಟಮೋ ವಸುರಾಸೀದ್ದ್ಯುನಾಮಾ
ವರಾಂಗಿ ನಾಮ್ನ್ಯಸ್ಯ ಬಭೂವ ಭಾರ್ಯಾ ।
ಬಭೂವ ತಸ್ಯಾಶ್ಚ ಸಖೀ ನೃಪಸ್ಯ
ಸುವಿಂದ ನಾಮ್ನೋ ದಯಿತಾ ಸನಾಮ್ನಿ ॥೨೨॥

ಎಂಟು ಜನ ವಸುಗಳಲ್ಲಿ 'ದ್ಯು' ಎಂಬುವವನು ಒಬ್ಬ ವಸು. ಅವನು ಎಂಟನೆಯವನು. ಅವನಿಗೆ 'ವರಾಂಗಿ' ಎಂಬ ಹೆಂಡತಿಯಿದ್ದಳು. ಅಲ್ಲಿಯೇ ಸುವಿಂದನೆಂಬ ರಾಜನಿದ್ದನು. ಅವನ ಹೆಂಡತಿ ವರಾಂಗಿಗೆ ಸಖಿಯಳಾದಳು. ಅವಳ ಹೆಸರೂ ಅದೇ ಆಗಿತ್ತು.

('ಏಕಃನಾಮ ಸದಾಪ್ರೀತಿ' ಎಂಬಂತೆ ಅವರಲ್ಲಿ ಸಖ್ಯ ಅತಿಯಾಗಿ ಬೆಳೆಯಿತು.)

ತಸ್ಯಾ ಜರಾಮೃತಿ ವಿಧ್ವಂಸ ಹೇತೋಃ
ವಸಿಷ್ಠಧೇನುಂ ಸ್ವಮೃತಂ ಕ್ಷರಂತೀಮ್ ।
ಜರಾಪಹಾಂ ನಂದಿನಿ ನಾಮಧೇಯಾಂ
ಬದ್ಧುಂ ಪತಿಂ ಚೋದಯಾಮಾಸದೇವೀ ॥೨೩॥

ತನ್ನ ಸಖಿಯ ಮುಪ್ಪು ಮತ್ತು ಮರಣಗಳನ್ನು ಧ್ವಂಸಗೊಳಿಸುವ ಹೇತುವಿನಿಂದ, ವಸಿಷ್ಠರಲ್ಲಿರುವ ನಂದಿನಿ ಎಂಬ ಆಕಳನ್ನು ಬಂಧಿಸಿ ತರಲು ತನ್ನ ಪತಿಗೆ ಪ್ರಚೋದಿಸಿದಳು. ಆ ಆಕಳು ಅಮೃತಕ್ಕೆ ಸಮವಾದ ಹಾಲುಗರೆಯುತ್ತಿತ್ತು. ಅದರಿಂದ ತನ್ನ ಉದ್ದೇಶ ಫಲಿಸ ಬಹುದೆಂದು ಅವಳು ಬಗೆದಿದ್ದಳು.

ತಯಾ ದ್ಯುನಾಮಾ ಸ ವಸುಃ ಪ್ರಚೋದಿತೋ
ಭ್ರಾತೃಸ್ನೇಹಾತ್ ಸಪ್ತಭಿರನ್ವಿತೋ ಪರೈಃ ।
ಬಬಂಧ ತಾಂ ಗಾಮಥ ತಾನ್ ಶಶಾಪ–
–ವಸಿಷ್ಠ ಸಂಸ್ಥಃ ಕಮಲೋದ್ಭವಃ ಪ್ರಭುಃ ॥೨೪॥

ತನ್ನ ಪತ್ನಿಯಿಂದ ಪ್ರಚೋದಿತನಾದ 'ದ್ಯು', ತನ್ನ ಅಣ್ಣಂದಿರಿಗೂ ಪ್ರಚೋದಿಸಿದನು. ಭ್ರಾತೃ ಸ್ನೇಹದಿಂದ ಅವರೆಲ್ಲರೂ ಒಪ್ಪಿದರು. ಏಳು ಜನ ಮತ್ತು ತಾನು ಕೂಡಿ ಆಕಳನ್ನು ಬಂಧಿಸಿದರು. ಆಗ ವಸಿಷ್ಠರಲ್ಲಿರತಕ್ಕ ಪ್ರಭುವಾದ ಬ್ರಹ್ಮನು ಅವರೆಲ್ಲರಿಗೂ ಶಾಪವಿತ್ತನು.

**ಅಷ್ಟವಸುಗಳು.**

**ದ್ರೋಣಃ, ಪ್ರಾಣೋ, ಧ್ರುವೋ, ಅರ್ಕೋ,**
**ಅಗ್ನಿರ್ದೋಷಾ ದ್ಯು, ವಸು, ವಿಭಾವಸುಃ ।**
**ವಸುಷ್ವೇ ತೇಷು ಭೀಷ್ಮಃ ಪ್ರಾಕ್ ಬ್ರಹ್ಮಯುಕ್ತೋ**
**ದ್ಯು ನಾಮಕಃ ।**

೧. ದ್ರೋಣ ೨. ಪ್ರಾಣ ೩. ಧ್ರುವ ೪. ಅರ್ಕ ೫. ಅಗ್ನಿ ೬. ದೋಷಾ ೭. ದ್ಯು ೮ ವಿಭಾವಸು. ಇವರು ಅಷ್ಟವಸುಗಳು.

ಇವರಲ್ಲಿ

**ವಸು ಸಪ್ತಕಯುಗ್ಭೀಷ್ಮಃ ಬ್ರಹ್ಮಾವೇಶೀದ್ಯುನಾಮಕಃ ॥**

'ದ್ಯು' ನಾಮಕ 'ವಸು'ವಿನಲ್ಲಿ ಏಳೂ ಜನರ ಬಲ, ಅಲ್ಲದೆ ಬ್ರಹ್ಮನ ಆವೇಶಬಲವೂ ಇದ್ದೀತು.

ಇಲ್ಲಿ ಒಂದು ಪ್ರಶ್ನೆ ವಸುಗಳಲ್ಲಿ ಕೆಲವರು ವಸಿಷ್ಠರಿಗಿಂತ ಶ್ರೇಷ್ಠರಿದ್ದಾರೆ. ವಸಿಷ್ಠರು ಅವರಿಗೆ ಶಾಪವನ್ನು ಕೊಡಬಲ್ಲರೇ?
ಆಚಾರ್ಯರು ಇಂಥ ಪ್ರಶ್ನೆ ಬರಬಹುದೆಂದು ಮೊದಲೇ ತಿಳಿದಿದ್ದರು. ಅದಕ್ಕಾಗಿಯೇ ಅವರು "ವಸಿಷ್ಠ ಸಂಸ್ಥ" ಎಂಬ ಪದವನ್ನು ಬಳಸಿ ಸ್ಪಷ್ಟ ಪಡಿಸಿದ್ದಾರೆ. ವಸಿಷ್ಠರು ನಿಮಿತ್ತ ಮಾತ್ರ, ಶಾಪ ಕೊಟ್ಟವನು ಬ್ರಹ್ಮನೇ ಎಂದು ತಿಳಿಯಬೇಕು.
ಬ್ರಹ್ಮನ ಶಾಪ

ಎಂತಹ ದೊಡ್ಡ ಮನೆತನದ ಹುಡುಗನಾದರೂ ತಪ್ಪು ಮಾಡಿದಾಗ ಅವನನ್ನು ಎಲ್ಲರೂ ಬೈಯುತ್ತಾರೆ. ಇದು ಲೋಕಾರೂಢಿ.

**ಅಧರ್ಮವೃತ್ತಾಃ ಪ್ರಿಯಾತ ಮಾನುಷೀಂ**
**ಯೋನಿಂ ದ್ರುತಂ ಯತ್ಕೃತೇ ಸರ್ವ ಏವ ।**

**ಧರ್ಮಾಚ್ಯುತಾ ಸ ತಥಾಪ್ಯಾಯುರಾಪ್ಯತಾ–**

**ಮನ್ಯೇಪುನಃ ಕ್ಷಿಪ್ರಮಥೋ (ತೋ) ವಿಮೋಕ್ಷ್ಯಥ ॥೨೫॥**

ನೀವೆಲ್ಲರೂ ಅಧರ್ಮದಲ್ಲಿ ಪ್ರವೃತ್ತರಾದ ಪ್ರಯುಕ್ತ ಮಾನವರಾಗಿ ಹುಟ್ಟಿರಿ. ಯಾವನು ನಿಮ್ಮನ್ನು ಈ ಅಧರ್ಮದಲ್ಲಿ ತೊಡಗಿಸಿದನೋ, ಅವನಿಗೆ ನಿಮ್ಮೆಲ್ಲರ ಆಯು ಮತ್ತು ಪಾಪ ದೊರೆಯಲಿ. ನಿಮಗೆಲ್ಲರಿಗೂ ಕ್ಷಿಪ್ರದಲ್ಲಿಯೇ ಮೋಕ್ಷವು ದೊರೆಯಲಿ. ಮಾನವ ಜನ್ಮದಿಂದ ಮುಕ್ತರಾಗಿರಿ.

ವರಾಂಗಿಗೆ ಇತ್ತ ಶಿಕ್ಷೆ.

**ಪ್ರಚೋದಯಾಮಾಸ ಚ ಯಾ ಕುಮಾರ್ಗೇ**

**ಪತಿಂ ಹಿ ಸಾಂಬೇತಿ ನರೇಷು ಜಾತಾ।**

**ಅಭರ್ತೃಕಾ ಪುಂಸ್ತ ಸಮಾಶ್ರಯೇಣ**

**ಪತ್ಯುರ್ಮೃತೌ ಕಾರಣತ್ವಂ ವ್ರಜೇತ ॥೨೬॥**

ಯಾವಳು ಈ ಕುಮಾರ್ಗದಲ್ಲಿ ತನ್ನ ಪತಿಯನ್ನು ಪ್ರಚೋದಿಸಿದಳೋ, ಅವಳು 'ಅಂಬಾ' ಎಂಬ ನಾಮದಿಂದ ಮಾನವನಲ್ಲಿ ಜನಿಸಲಿ. ಅವಳಿಗೆ ಗಂಡನಿಲ್ಲದಂತಾಗಲಿ. ಪುಂಸ್ತ್ವದ ಆಶ್ರಯದಲ್ಲಿ ಪತಿಯ ಮರಣಕ್ಕೆ ಕಾರಣಳಾಗಲಿ.

(ಎಂತಹ ನಿರ್ದುಷ್ಟವಾದ ಶಾಪ!)

"ದ್ಯು" ಎಂಬ ವಸುವಿಗೆ ಇತ್ತ ಶಾಪ.

**ಭವತ್ವಸೌ ಬ್ರಹ್ಮಚರ್ಯೈಕನಿಷ್ಠೋ**

**ಮಹಾನ್ ವಿರೋಧಶ್ಚ ತಯೋರ್ಭವೇತ।**

**ಸ ಗರ್ಭ ವಾಸಾಷ್ಟಕ ದುಃಖಮೇವ**

**ಸಮಾಪ್ನು ತಾಂ ಶರತಲ್ಪೇ ಶಯಾನಃ ॥೨೭॥**

"ಎಲೈ ವಸುವೇ ನೀನು ನೈಷ್ಟಿಕ ಬ್ರಹ್ಮಚಾರಿಯಾಗು. ನಿಮ್ಮಿಬ್ಬರ (ದ್ಯು ಮತ್ತು ವರಾಂಗಿ) ಮಧ್ಯೆ ಮಹಾನ್ ವಿರೋಧವುಂಟಾಗಲಿ. ಶರತಲ್ಪದಲ್ಲಿ

ಮಲಗಿದಾಗ ನಿನಗೆ, ಎಂಟು ಗರ್ಭವಾಸಗಳ ದುಃಖ ಸಂಭವಿಸಲಿ." (ಇದು ವಸಿಷ್ಠರ ಮುಖದಿಂದ ಬ್ರಹ್ಮನ ಶಾಪ)

ವಿ.ವಿ. ಅಬ್ಬ! ಎಂತಹ ಶಾಪ! ವಿಜ್ಞಾನದ ಬಲದಿಂದ ಇಂದು ಮಾನವನು 'ವಿಧಿಲಿಖಿತ' ಒಂದು ಮೂಢನಂಬಿಕೆ ಎನ್ನುತ್ತಿದ್ದಾನೆ. ಅಷ್ಟೇ ಅಲ್ಲ. ತನ್ನ ಪ್ರಯತ್ನದಿಂದ ಅದನ್ನು ಅಳಿಸಬಲ್ಲೆ ಎಂಬ ಮಟ್ಟಕ್ಕೂ ಮುಟ್ಟಿದ್ದಾನೆ. ಅವನು ಮೇಲಿನ ವಾಕ್ಯಗಳನ್ನು, ಉಂಟಾದ ಘಟನೆಗಳನ್ನೂ ಗಮನಿಸಲಿ ಎಂದು ಲೇಖಕನ ನಮ್ರ ವಿನಂತಿ.

ಕಳ್ಳತನ ಮಹಾ ಅಪರಾಧ. ಅಜ್ಞಾನಿಗಳಾದ ಮಾನವರು ಮಾಡಿದರೂ ಶಿಕ್ಷೆಯುಂಟು. ಜ್ಞಾನಿಗಳಾದ ದೇವತೆಗಳಿಂದ ಆ ಅಪರಾಧವಾದರೆ ಅದಕ್ಕೆ ಶಿಕ್ಷೆಯಿಲ್ಲವೇ? ಸಾಮಾನ್ಯನ ತಪ್ಪಿಗೆ ಒಂದೆ ಶಿಕ್ಷೆ. ಅದನ್ನೇ ತಿಳಿದ ವಕೀಲನು ಮಾಡಿದರೆ ಎರಡುಪಟ್ಟು ಶಿಕ್ಷೆ. ಅದನ್ನೇ ಇಲ್ಲಿ ಬ್ರಹ್ಮನು ಮಾಡಿದ್ದಾನೆ.

ತಪ್ಪು ಮಾಡಿದವನು 'ದ್ಯು' ಅವನಿಗೆ ಶಿಕ್ಷೆಯಾಗಲಿ. ಉಳಿದವರಿಗೇಕೆ?

"ಕೊಲೆಗಡುಕನಿಗೆ ಸಹಾಯ ಮಾಡಿದವನೂ ಕೊಲೆಗಡುಕನೇ". ಇದು ಕಾನೂನಿನ (ನ್ಯಾಯದ) ನಿಯಮ. ನ್ಯಾಯನಿಷ್ಠನಾದ ಬ್ರಹ್ಮನು ಅದನ್ನೇ ಮಾಡಿದ್ದಾನೆ. ಆದರೂ ದಯತೋರಿ ಉಳಿದವರಿಗೆ ಅಲ್ಪಶಿಕ್ಷೆಯನ್ನು ವಿಧಿಸಿದ್ದಾನೆ.

**ಮೃತ್ಯಷ್ಟಕೋತ್ಥಾಮಪಿ ವೇದನಾಂ ಸ**
**ಪ್ರಾಪ್ನೋತು ಶಸ್ತ್ರೈರ್ಬಹುಧಾ ನಿಕೃತ್ತಃ।**
**ಇತೀರಿತಾಸ್ತೇ ಕಮಲೋದ್ಭವಂ ತಂ**
**ಜ್ಞಾತ್ವಾ ಸಮುತ್ಸೃಜ್ಯ ಚ ಗಾಂ ಪ್ರಣೇಮುಃ ॥೨೮॥**

"ಮರಣ ಕಾಲದಲ್ಲಿ ನಿನಗೆ ಎಂಟು ಜನರ ವೇದನೆ ಉಂಟಾಗಲಿ, ಕೊನೆಯಲ್ಲಿ ಅನೇಕ ಶಸ್ತ್ರಾಸ್ತ್ರಗಳ ಬಾಧೆಯೂ ಲಭಿಸಲಿ." ಎಂದ ಬ್ರಹ್ಮನ ಮಾತುಗಳನ್ನು ಕೇಳಿದ ವಸುಗಳು, ಕಟ್ಟಿದ ಆಕಳನ್ನು ಬಿಟ್ಟು ಋಷಿಗೆ ನಮಿಸಿ, ಅಂತರ್ಗತ ಬ್ರಹ್ಮನಿಗೆ ಹೀಗೆ ಪ್ರಾರ್ಥಿಸಿದರು.

**ನ ಮಾನುಷಂ (ಷ್ಟಿಂ) ಗರ್ಭಮಹಾಪ್ನುಮೋ ವಯಂ**
**ಬವತಯಂ ಸರ್ವವಿತ್ ಕೀರ್ತಿಮಾಂಶ ।**

**ಮಹಾಸ್ತ್ರವೇತ್ತಾ ಭವದಂಶಯುಕ್ತಃ**

**ತಥಾ ಬಲಿಂ ನೋऽಖಿಲಾನಾ ಮುಪೈತು ॥೨೯॥**

"ನಮಗೆ ಮಾನವನಲ್ಲಿ ಗರ್ಭವಾಸವು ಬೇಡ. ಇವನು, (ನಮ್ಮ ತಮ್ಮನು) ಸರ್ವವನ್ನು ತಿಳಿದವನು ಮತ್ತು ಕೀರ್ತಿವಂತನಾಗಿ ಮಹಾ ಅಸ್ತ್ರ ವೇತ್ತನಾಗಲಿ, ಜೊತೆಯಲ್ಲಿ ನಮ್ಮೆಲ್ಲರ ಬಲವು ಇವನಿಗೆ ಲಭಿಸಲಿ. ಎಲ್ಲಕ್ಕೂ ಮಿಗಿಲಾಗಿ ನಿನ್ನ ಅಂಶದಿಂದ ಯುಕ್ತನಾಗಿರಲಿ".

ಇದು ಏಳು ವಸುಗಳ ಪ್ರಾರ್ಥನೆ. ಇಲ್ಲಿ ಭ್ರಾತೃಬಂಧುತ್ವ ಮತ್ತು ಅಂತಃಕರಣವನ್ನು ನಾವು ಕಾಣುತ್ತೇವೆ.

**ಇತೀರಿತೇऽತಸ್ತ್ವಿತ್ಯುದಿತಾಃ ಸ್ವಯಂ ಭುವಾ**

**ವಸಿಷ್ಠ ಸಂಸ್ಥೇನ ಸುರಾಪಗಾಂಯಯುಃ ।**

**ಊಚುಸ್ತಥೈನಾ ಮುದರೇ ವಯಂ ತೇ**

**ಜಾಯೇಮಹೀ ಕ್ಷಿಪ್ರಮಸ್ಮಾನ್‌ಹನತ್ವಮ್ ॥೩೦॥**

ವಸಿಷ್ಠಾಂತರ್ಗತ ಬ್ರಹ್ಮನು, 'ಆಗಲಿ' ಎಂದನು.

ನಂತರ ಅವರು ಭಾಗೀರಥಿ (ಸುರಾಪಗಾ) ಯ ಹತ್ತಿರ ಬಂದು, "ನಾವೆಲ್ಲರು ನಿನ್ನ ಉದರದಲ್ಲಿ ಜನಿಸುತ್ತೇವೆ. ಹುಟ್ಟಿದ ಕೂಡಲೆ ನಮ್ಮನ್ನು ನೀನು ಕೊಂದು ಬಿಡು" ಎಂದು ವಿನಂತಿಸಿದರು.

**ಇತೀರಿತಾ ಸಾ ವರಮಾಶು ವವ್ರೇ**

**ತೇಭ್ಯೋऽಪ್ಯ ಪಾಪತ್ವಮಥ ಪ್ರಿಯ ತ್ವಮ್।**

**ತೇಷಾಂ ತಥೈ (ಸದ್ಯೆ) ವಾತ್ಮನ ಏಕಮೇಷಾಂ**

**ದೀರ್ಘಾಯುಷಂ ತಾನ್ ಸುಷುವೇಥ ಶಂತನೋಃ॥ ೩೧॥**

ಈ ರೀತಿ ಕೇಳಿದ ಆ ಗಂಗೆಯು, ನೀವು ಹೇಳಿದಂತೆ ನಡೆದರೆ ಪಾಪ ಘಟಿಸುವುದು ಮತ್ತು ಅಪ್ರಿಯತ್ವವುಂಟಾಗುವುದು. ಅದಾಗದಿರಲಿ ಎಂದಾಗ ವಸುಗಳು ಒಪ್ಪಿದರು ಅದರ ಪರಿಣಾಮ' ಅವರಲ್ಲಿ ಒಬ್ಬನು ದೀರ್ಘಾಯುವಾಗಿ ಉಳಿದುಕೊಂಡನು.

ಅವನೇ ಶಂತನುವಿನ ಪಸಿದ ಮಗನು.

ವಿ.ವಿ. ಇಲ್ಲಿ 'ಪಾಪ' ಮತ್ತು ಅಪ್ರೀತಿಗೆ ಕಾರಣಗಳೇನು? ಹುಟ್ಟಿದ ಮಕ್ಕಳನ್ನು (ಕಾರಣವಿಲ್ಲದೆ) ಕೊಂದರೆ ಭ್ರೂಣಹತ್ಯ ಅಥವಾ ಶಿಶುಹತ್ಯ - ಇವು ಪಾಪವಲ್ಲವೇ?

ಒಬ್ಬನು ಇನ್ನೊಬ್ಬನನ್ನು ಕೊಂದಾಗ ಪರಸ್ಪರರಲ್ಲಿ ಅಪ್ರೀತಿ ಉಂಟಾಗುವುದು ಸ್ವಾಭಾವಿಕ. ಅವು ಆಗದಿರಲಿ ಎನ್ನುವುದೇ ಗಂಗೆಯ ವಿಚಾರ.

**ಅವಿಘ್ನ ತಸ್ಮಾನ್ ವಿನಿಹಂ ತುಮೇವ**
**ಪುರಾ ಪ್ರತೀ ಪಸ್ಯ ಹಿ ದಕ್ಷಿಣೋರುಮ್।**
**ಸಮಾಶ್ರೀತಾ ಕಾಮಿನೀ ವತ್ತ ಕಾಮಾ**
**ತತ್ಪುತ್ರಭಾರ್ಯಾ ಭವಿತುಂ ವಿಡಂಬನಾತ್ ॥ ೩೧॥**

ತಾನು ಮಾಡುವ ಹನನ ಕಾರ್ಯಗಳಲ್ಲಿ ವಿಘ್ನಗಳು ಬಾರದಿರಲಿ, ಎನ್ನುವ ದೃಷ್ಟಿಯಿಂದ, ಅಕಾಮಿನಿಯಾದ ಗಂಗಾದೇವಿಯು, ಕಾಮಿನಿಯಂತೆ ವಿಡಂಬನಾಮಾಡುತ್ತ, ಪ್ರತೀಪರಾಜನ ಮಗನಿಗೆ ಪತ್ನಿಯಾಗಬೇಕೆಂಬ ಆಶೆಯಿಂದ ಅವನ ಬಲ ತೊಡೆಯ ಮೇಲೆ ಕುಳಿತಳು.

ಇಲ್ಲಿ ಆಚಾರ್ಯರು 'ಅವಿಘ್ನ' ಮತ್ತು 'ವಿಡಂಬನ' ಎರಡು ಪದಗಳನ್ನು ಬಹು ಮಾರ್ಮಿಕವಾಗಿ ಬಳಸಿದ್ದಾರೆ. ಅವುಗಳ ವೈಶಿಷ್ಟ್ಯದತ್ತ ಗಮನಿಸೋಣ.

೧. 'ಅವಿಘ್ನ' - ವಿಘ್ನ ಬಾರದಿರಲಿ

ಶಂತನು ತನ್ನ ನಿಯತ ಪತಿ ಶಂತನು ತನ್ನ ಪತಿಯಾಗಲು, ಪ್ರತೀಪರಾಯನಿಂದ ವಿಘ್ನ ಬಾರದಿರಲಿ ಎಂದು

೨. 'ವಿಡಂಬಾತ್' ಗಂಗಾದೇವಿಯು ಕಾಮುಕಳಲ್ಲ, ಆದರೂ ಕಾಮುಕಳಂತೆ ನಟಿಸಿದ್ದಾಳೆ. ಶಂತನುವನ್ನು ಮದುವೆಯಾಗುವ ಇಚ್ಛೆಯಿಂದಲೇ ಪ್ರತೀಪರಾಯನ ಬಲ ತೊಡೆಯ ಮೇಲೆ ಕುಳಿತಿದ್ದಾಳೆ. ನಿಯತ ಪತಿತ್ವ ತಪ್ಪುವುದಿಲ್ಲ ಎಂದು ತಾನು ಬಲ್ಲವಳಾದರೂ, ಆಕೆ ಈ ರೀತಿ ವರ್ತಿಸಿದಳು. ಮುಂದಾಗುವ ವಿಚಾರಗಳೆಲ್ಲವನ್ನೂ ತಾನು ಅರಿತವಳಾದರೂ, ತನ್ನ ವಿಚಾರಗಳನ್ನು ಪ್ರತೀಪರಾಯನಿಗೆ ತಿಳಿಸಿ ಆತನಿಂದ ವಚನವನ್ನು ಪಡೆದಿದ್ದಾಳೆ. ಇವೆಲ್ಲವೂ ವಿಡಂಬನಗಳೇ ಅಲ್ಲವೇ?

ಪುರುಷರ ಎಡ ತೊಡೆಯ ಮೇಲೆ ಪತ್ನಿಗೆ ಅಧಿಕಾರ

ಬಲತೊಡೆಯ ಮೇಲೆ ಮಗಳು ಅಥವಾ ಸೊಸೆಗೆ ಅಧಿಕಾರ! ಎಂಬ ಭಾರತೀಯ ಸಂಸ್ಕೃತಿಯನ್ನು ಆಚಾರ್ಯರು ಎತ್ತಿ ತೋರಿದ್ದಾರೆ.

**ತೇನೈವ ಚೋಕ್ತಾ ಭವ ಮೇ ಸುತಸ್ಯ**
**ಭಾರ್ಯಾ ಹತೋ ದಕ್ಷಿಣೋರು ಸ್ಥಿತಾಸಿ।**
**ಭಾಗೋ ಹಿ ದಕ್ಷೋ ಮಹಿತುಃ ಸ್ನುಷಾಯಾ**
**ಭಾರ್ಯಾಭಾಗೋ ನಾಮ ಇತಿ ಪ್ರಸಿದ್ಧಃ॥೩೩॥**

"ನೀನು ಯಾವ ಇಚ್ಛೆಯಿಂದ ನನ್ನ ಬಲತೊಡೆಯ ಮೇಲೆ ಕುಳಿತಿರುವಿಯೋ, ಅದರಂತೆ ನೀನು ನನ್ನ ಮಗನಿಗೆ ಹೆಂಡತಿಯಾಗು. ಬಲ ತೊಡೆಯಲ್ಲಿ ಕೂಡತಕ್ಕವಳು ಮಗಳು ಇಲ್ಲವೆ ಸೊಸೆಯಾಗಬೇಕು. ಎಡತೊಡೆ–ಹೆಂಡತಿಗೆ ಮೀಸಲು" ಇದು ಪ್ರಸಿದ್ಧವಾದ ನಿಯಮ.

ಪ್ರತೀಪನು, ತಾನು ರಾಜನಾದರೂ ಆ ನಿಯಮವನ್ನು ಅರಿತು ಆಚರಿಸಿದ್ದಾನೆ. ಇದೇ ಸಂಸ್ಕಾರ.

## ಗಂಗಾದೇವಿಯ ಷರತ್ತುಗಳು

**ಉವಾಚ ಸಾ ತಂ ನ ತು ಮಾಂ ಸುತಸ್ತೇ**
**ಕಾಸೀತಿ ಪೃಚ್ಛೇನ್ನ ತು ಮಾಂ ನಿವಾರಯೇತ್ ।**
**ಅಯೋಗ್ಯ ಕರ್ತ್ರೀ ಮಪಿ ಕಾರಣಂ ಚ**
**ಮತ್ಕರ್ಮಣೋ ನೈವ ಪೃಚ್ಛೇತ್ ಕದಾಚಿತ್ ॥೩೪॥**

"ನಿನ್ನ ಮಗನು– ೧. ನೀನು ಯಾರು ಎಂದು ಕೇಳಬಾರದು.

೨. ನಾನು ಅಯೋಗ್ಯ ಕಾರ್ಯಗಳನ್ನು ಮಾಡಿದರೂ ತಡೆಯಬಾರದು.

೩. ನನ್ನ ಕಾರ್ಯಗಳಿಗೆ ಕಾರಣಗಳನ್ನು ಕೇಳಬಾರದು" ಎಂದು ಗಂಗಾದೇವಿಯು ಹೇಳಿದಳು

**ಯದಾ ತ್ರಯಾಣಾಮಪಿ ಚೈಕಮೇಷ**
**ಕರೋತಿ ಗಚ್ಛೇಯಮಹಂ ವಿಸೃಜ್ಯ ।**
**ತದಾ ತ್ವದೀಯಂ ಸುತ ಮಿತ್ಯುದೀರಿತೇ**
**ತಥೇತಿ ರಾಜಾಪ್ಯ ವದತ್ ಪ್ರತೀಪಃ ॥೩೫॥**

ಮೂರರಲ್ಲಿ ಒಂದನ್ನು ಕೂಡ ಕೇಳಿ ತಡೆ ಉಂಟು ಮಾಡಿದರೆ, ನಾನು ನಿನ್ನ ಮಗನನ್ನು ಬಿಟ್ಟು ಹೋಗುತ್ತೇನೆ, ಎಂದು ಹೇಳಿದಾಗ ಪ್ರತೀಪರಾಜನು 'ಹಾಗೆಯೇ ಆಗಲಿ' ಎಂದು ಹೇಳಿದನು.

**ತಥೈವ ಪುತ್ರಾಯ ಚ ತೇನ ತದ್ವಚೋ**
**ಯಥೋಕ್ತ ಮುಕ್ತಂ ವಚನಾದ್ಧ್ಯುನದ್ಯಾಃ ।**
**ಕನೀಯಸೇ ಸಾ ಹ್ಯವದತ್ ಸುತಸ್ತೇ**
**ನಾನ್ಯಃ ಪತಿಃ ಶಂತನುರೇವ ಮೇ ವ್ರತಃ ॥೩೬॥**

"ನಿನ್ನ ಕೊನೆಯಮಗನಾದ 'ಶಂತನು' ವಿಗೇ ನಾನು ವಧುವಾಗತಕ್ಕವಳು, ಅನ್ಯ ಮಕ್ಕಳಿಗಲ್ಲ. ಅವನೇ ನನ್ನ ಪತಿ. ಇದು ನನ್ನ ವ್ರತ" ಎಂದು ಗಂಗಾದೇವಿ ಪ್ರತೀಪರಾಜನಿಗೆ ಸ್ಪಷ್ಟವಾಗಿ ಹೇಳಿದಳು.

ವಿ.ವಿ. ಗಂಗಾದೇವಿ ಇಷ್ಟು ಸ್ಪಷ್ಟವಾಗಿ ಮತ್ತು ವಿವರವಾಗಿ ಹೇಳಿದರೂ, ಹಿರಿಯರನ್ನು ಬಿಟ್ಟು ಕಿರಿಯರಿಗೆ ಹೇಗೆ? ಎಂದು ಪ್ರತೀಪರಾಜನು ಯೋಚಿಸಲಿಲ್ಲ. ಅತನು ತಕ್ಷಣ ಒಪ್ಪಿಯೇ ಬಿಟ್ಟ. ಇದೇ ಪರಮಾತ್ಮನ ಮಾಯೆ. ಏಕೆಂದರೆ, 'ಶಂತನು' ವರುಣ. ಗಂಗೆ ಅವನಿಗೆ ನಿಯತ ಪತ್ನಿ. ಅದು ತಪ್ಪುವಂತಿಲ್ಲ. ಅಂತೆಯೇ ಪ್ರತೀಪನು ಮಾಯೆಗೊಳಗಾದನು –

**ತತಸ್ತು ಸಾ ಶಂತನು ತೋಽಷ್ಟ ಪುತ್ರಾನ್**
**ಅವಾಪ್ಯ ಸಪ್ತ ನ್ಯಹನತ್ತಥಾಷ್ಟಮಮ್ ।**
**ಗಂತುಂ ತತೋ ಮತಿ–ಮಾಧಾಯ ಹಂತು–**
**ಮಿಹ್ಯೋದ್ಯೋಗಂ ಸಾಪಿ ಮೃಷಾ ಚಕಾರ ॥೩೭॥**

ಶಂತನುವಿನಲ್ಲಿ ಆಕೆ ಎಂಟು ಮಕ್ಕಳನ್ನು ಪಡೆದಳು. ಏಳು ಮಕ್ಕಳನ್ನು ಕೊಂದಳು. ತನ್ನ ಮೂಲ ರೂಪವನ್ನು ಹೊಂದಲು ಸ್ನಾನಕ್ಕೆ ಹೋಗುವ

ಇಚ್ಛೆಯಿಂದ ಎಂಟನೆಯ ಮಗುವನ್ನು ಕೂಡ ಕೊಲ್ಲುವಂತೆ ವ್ಯರ್ಥ ಪ್ರಯತ್ನ ಮಾಡಿದಳು.

ಇಲ್ಲಿ ಶ್ರೀಮದಾಚಾರ್ಯರು, 'ಮೃಷಾ' ಎಂಬ ಪದವನ್ನು ಬಳಸಿ ಗಂಗಾದೇವಿಯ ನಿಜವಾದ ಅಭೀಷ್ಟೆಯನ್ನು ಸೂಚಿಸಿದ್ದಾರೆ. ಅಂದರೆ ಆಕೆ, ನಿಜವಾಗಿಯೂ ಕೊಲ್ಲಲು ಉದ್ಯುಕ್ತಳಾಗಿರಲಿಲ್ಲ. ಏಕೆಂದರೆ ಒಬ್ಬ ಮಗನು ದೀರ್ಘಾಯುವಾಗಲಿ ಎಂದು ತಾನೇ ಹೇಳಿಕೊಂಡಿದ್ದಳು.

ಈ ಕೆಳಗಿನ ಪದ್ಯದಲ್ಲಿ ಶ್ರೀಮದಾಚಾರ್ಯರು, ಗಂಗಾದೇವಿಯು, ಪತಿಯಾದ ಶಂತನು ಚಕ್ರವರ್ತಿಯನ್ನು ಯಾವ ಕಾರಣಗಳಿಗಾಗಿ ತ್ಯಜಿಸಿದಳು ಎಂಬುದನ್ನು ತೋರಿಸಿದ್ದಾರೆ.

**ಅವಸ್ಥಿತಿರ್ನಾತಿ ಸುಖಾಯ ಮಾನುಷೇ**
**ಯತಃ ಸುರಾಣಾಮತ ಏವ ಗಂತುಮ್ ।**
**ಐಚ್ಛನ್ನ ತಸ್ಯಾ ಹಿ ಬಭೂವ ಮಾನುಷೋ**
**ದೇಹೋ ನರೋತ್ಥೋ ಹಿ ತದಾಸ ಶಂತನೋಃ ॥೩೮॥**

೧. ದೇವತೆಗಳಿಗೆ ಮಾನವ ಶರೀರಗಳೊಂದಿಗೆ ಹೆಚ್ಚು ಸುಖ ದೊರೆಯಲಾರದು.

ಗಂಗಾದೇವಿಯು ದೇವತಾ ಶರೀರದಿಂದಲೇ ಬಂದಿದ್ದಳು. ಬ್ರಹ್ಮನಿಂದ ಗಂಗಾದೇವಿಗೆ ಶಾಪವಿರಲಿಲ್ಲ. ಅಲ್ಲದೆ, "ಮ ಮಾನುಷಂ ಗರ್ಭಮವಾಪ್ನು ಮೋ ವಯಂ" ಎಂದು ವಸುಗಳೇ ಬ್ರಹ್ಮನನ್ನು ಕುರಿತು ಪ್ರಾರ್ಥಿಸಿ ವರ ಪಡೆದಿದ್ದರು. ಕೇವಲ ನಿಯತ ಪತ್ನಿ ಎನ್ನುವ ವ್ಯಕ್ತಿಯಿಂದ ಶಂತನೊಂದಿಗೆ ಸಂಬಂಧ ಬೆಳೆದಿತ್ತು.

'ಶಂತನು' ಪ್ರತೀಪರಾಜನ ಹೊಟ್ಟೆಯಲ್ಲಿ ಮಾನವನಾಗಿ ಹುಟ್ಟಿದ್ದನು. ಕಾರಣ ಅವರು ಬಹಳ ದಿನಗಳವರೆಗೆ ಹೊಂದಿಕೊಂಡಿರಲು ಸಾಧ್ಯವಿರಲಿಲ್ಲ.

೨. ದೇವತೆಗಳು, ಯಾವುದೋ ಕಾರ್ಯದ ನಿಮಿತ್ತ ಭೂಲೋಕದಲ್ಲಿ ಬಂದಿರುತ್ತಾರೆ. ಆ ಕಾರ್ಯ ಮುಗಿದ ಕೂಡಲೇ ಅವರು ಇಲ್ಲಿರಬಾರದು. ಇದು ಅವರ ಧರ್ಮ. ಗಂಗಾದೇವಿಯು ಆ ಧರ್ಮವನ್ನು ಪಾಲಿಸಿದ್ದಾಳೆ.

೩. ದೇವತೆಗಳು ಗುಪ್ತವಾಗಿದ್ದು ತಮ್ಮ ಕಾರ್ಯವನ್ನು ಸಾಧಿಸುತ್ತಾರೆ. ಗುಟ್ಟು ರಟ್ಟಾದರೆ ಅವರು ಅಲ್ಲಿರುವುದಿಲ್ಲ. ಅಂತೆಯೇ ಗಂಗೆಯು ಶಂತನು ಚಕ್ರವರ್ತಿಯನ್ನು ತೊರೆದಳು.

**ತಾಂ ಪುತ್ರ ನಿಧನೋದ್ಯುಕ್ತಾಂ ನ್ಯವಾರಯತ ಶಂತನುಃ ।**
**ಕಾಸಿ ತ್ವಂ ಹೇತುನಾ ಕೇನ ಹಂಸಿ ಪುತ್ರಾನ್ನೃಶಂಸವತ್ ॥೭೯॥**
**ರೂಪಂ ಸುರವರಸ್ತ್ರೀಣಾಂ ತವ ತೇನ ನ ಪಾತಕಮ್ ।**
**ಭವೇತ್ ಕರ್ಮ ತ್ವದೀಯಂ ತನ್ಮಹತ್ಕಾರಣ ಮತ್ರ ಹಿ ॥೮೦॥**

ಮಗುವನ್ನು ಕೊಲ್ಲಲು ಉದ್ಯುಕ್ತಳಾದ ಅವಳನ್ನು ತಡೆದು, ಶಂತನು, ನೀನು ಯಾರು? ಏನು ಕಾರಣದಿಂದ ಈ ಮಗುವನ್ನು ರಾಕ್ಷಸಿಯಂತೆ ಕೊಲ್ಲುತ್ತಿರುವಿ? ಎಂದು ಒಂದೇ ಉಸುರಿನಲ್ಲಿ ಕೇಳಿದನು.

'ರಾಕ್ಷಸಿ' ಎಂಬ ಪದಕ್ಕೆ ಸಂಶಯ ವ್ಯಕ್ತ ಮಾಡಿ ಶಂತನು ಪುನಃ ಹೀಗೆಂದನು. ನಿನ್ನ ರೂಪವನ್ನು ನೋಡಿದರೆ ಶ್ರೇಷ್ಠಳಾದ ದೇವತಾ ಸ್ತ್ರೀಯಂತೆ ಕಾಣುವಿ. ಆದ್ದರಿಂದ ಪಾಪ ಕಾರ್ಯ ಮಾಡಬಾರದು.

ಆದರೂ ನೀ ಮಾಡುವ ಕಾರ್ಯವು ಮಹಾ ಪಾಪಕರವಾದದ್ದು. ಆದ್ದರಿಂದ ನಿನ್ನ ಈ ಕಾರ್ಯಕ್ಕೆ ಯಾವುದೋ ಮಹತ್ತರವಾದ ಕಾರಣ ಇರಲೇಬೇಕು.

**ತತ್ಕರಣಂ ವದ ಶುಭೇ ಯದಿ ಮಚ್ಛ್ರೋತ್ರ ಮರ್ಹಸಿ ।**
**ಇತೀ ರಿತಾವದತ್ ಸರ್ವಂ ಪ್ರಯಯೌ ಚ ಸುರಾಪಗಾ ॥೮೧॥**

"ಹೇ ಶುಭಗೇ, ನನ್ನಿಂದ ಕೇಳಲು ಯೋಗ್ಯವಾಗಿದ್ದರೆ ನಿನ್ನ ಕಾರ್ಯಕ್ಕೆ ಕಾರಣಗಳನ್ನು ಹೇಳು." ಎಂದು ಕೇಳಿದಾಗ, ಆ ಗಂಗಾದೇವಿಯು ಸರ್ವವಿಚಾರವನ್ನು ಹೇಳಿ ಅಲ್ಲಿಂದ ಹೊರಟು ಹೋದಳು.

ಇವಾದ ನಂತರ ಗಂಗಾದೇವಿಯು ಗಂಡನ ಮನೆಯಲ್ಲಿ ಕೆಲವು ಕಾಲ ನಿಲ್ಲಬಹುದಾಗಿತ್ತಲ್ಲ? ಎಂಬ ಪ್ರಶ್ನೆಗೆ ಆಚಾರ್ಯರ ಉತ್ತರ.

**ನಧರ್ಮೋ ದೇವತಾನಾಂ ಹಿ ಜ್ಞಾತಾವಾಸ ಶ್ಚಿರಂ ನೃಷು ।**
**ಕಾನಡಾಗೇವ ಹಿ ಸುರಾ ನಪು ವಾಸಂ ಪ್ರಕುರ್ವತೇ ॥೮೨॥**

ಕಾರಣಾಪಗಮೇ ಯಾಂತಿ ಧರ್ಮೋಽಪ್ಯೇಷಾಂ ತಥಾವಿಧಃ।
ಅದೃಶ್ಯತ್ವಮಸಂ ಸ್ಪರ್ಶೋ ಹ್ಯ ಸಂಭಾಷಣ ಮೇವ ಚ ॥೪೩॥
ಸುರೈರಪಿ ನೃಜಾತೈಸ್ತು ಗುಹ್ಯ ಧರ್ಮೋ ದಿವೌಕಸಾಮ್ ।
ಅತಃ ಸಾ ವರುಣಂ ದೇವಂ ಪೂರ್ವಭರ್ತಾರಮಪ್ಯಮುಮ್॥೪೪॥
ನೃಜಾತಂ ಶಂತನುಂ ತ್ಯಕ್ತ್ವಾ ಪ್ರಯಯೌ ವರುಣಾಲಯಮ್।
ಸುತಮಷ್ಟಮ ಮಾದಾಯ ಭರ್ತುರೇವಾಭ್ಯ (ಪ್ಯ) ನುಜ್ಞಯಾ ।
ವಧೋದ್ಯೋಗಾನ್ನಿವೃತ್ತಾ ಸಾ ದದೌ ಪುತ್ರಂ ಬೃಹಸ್ಪತೇ ॥೪೫॥

ದೇವತೆಗಳಿಗೆ ನರರ ಮಧ್ಯೆ ಜ್ಞಾತ ವಾಸವಾಗಿರುವುದೇ ಅಧರ್ಮ. ಆದರೂ ಕಾರಣದ ಮೂಲಕ ಅವರು ನರರ ಮಧ್ಯೆ ವಾಸಿಸುತ್ತಾರೆ. ಆದರೂ ಅವರು ಅದೃಶ್ಯರಾಗಿರುತ್ತಾರೆ. ಇತರರ ಜೊತೆ ಸಂಸ್ಪರ್ಶವಾಗಲಿ ಸಂಭಾಷಣೆಯಾಗಲಿ ಇರುವುದಿಲ್ಲ. ದೇವತೆಗಳಿಗೂ ನರರ ಮಧ್ಯೆದಲ್ಲಿ ಹುಟ್ಟಿದಾಗ ಕೆಲವು ಗುಹ್ಯ ಧರ್ಮಗಳಿರುತ್ತವೆ. ಆದ್ದರಿಂದ ಗಂಗಾದೇವಿಯು, ವರುಣನು ಪೂರ್ವದಲ್ಲಿ ಪತಿಯಾಗಿದ್ದರೂ, ಇಂದು ನರನಾಗಿ ಹುಟ್ಟಿದ ಶಂತನು ಚಕ್ರವರ್ತಿಯನ್ನು ತ್ಯಜಿಸಿ ವರುಣ ಲೋಕಕ್ಕೆ ನಡೆದಳು. ಪತಿಯ ಅಜ್ಞೆಯನ್ನು ಪಡೆದು, ಎಂಟನೆಯ ಮಗುವನ್ನು ಕೊಲ್ಲದೆ ತನ್ನ ಜೊತೆಯಲ್ಲಿ ತಂದು ಬೃಹಸ್ಪತ್ಯಾಚಾರ್ಯರ ಕೈಯಲ್ಲಿಟ್ಟಳು. (ಒಪ್ಪಿಸಿದಳು)

ವಿ.ವಿ. " ದೇವತೆಗಳು ಮಾಡುವ ಕಾರ್ಯಗಳು ಮೇಲು ನೋಟಕ್ಕೆ ಅವು ಅಧರ್ಮದಂತೆ ಕಂಡರೂ, ಅವು ಅವರಿಗೆ ಧರ್ಮಗಳೇ". ಎಂದು ಶ್ರೀಮದಾಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ಅನೇಕ ಸಲ ಸ್ಪಷ್ಟ ಪಡಿಸಿದ್ದಾರೆ.

ದೇವ ವ್ರತೋಽಸಾವನುಶಾಸನಾಯ
ಮಾತ್ರಾ ದತ್ತೋ ದೇವ ಗುರೌ ಶತಾರ್ಧಮ್ ।
ಸಂವತ್ಸರಾಣಾಮಖಿಲಾಂಶ್ಚ ವೇದಾನ್
ಸಮಭ್ಯ ಸತ್ತದ್ವಶಗಾಂತರಾತ್ಮಾ ॥೪೬॥

ದೇವವ್ರತನನ್ನು ಅವನ ತಾಯಿ ಕರೆದು ತಂದು ಶಿಕ್ಷಣಕ್ಕಾಗಿ ದೇವ ಗುರುಗಳಾದ ಬೃಹಸ್ಪತ್ಯಾಚಾರ್ಯರಿಗೆ ಒಪ್ಪಿಸಿದಳು. ಅಲ್ಲಿ ದೇವವ್ರತನು ಐವತ್ತು ವರ್ಷ (ದೇವ ಮಾನದಿಂದ) ಎಲ್ಲ ವೇದಗಳನ್ನು ಅರ್ಥಸಹಿತವಾಗಿ ಚೆನ್ನಾಗಿ ಅಭ್ಯಾಸ ಮಾಡಿದನು. ಅಂತರಾತ್ಮನನ್ನು ದರ್ಶನ ಕೊಳ್ಳುವ ಮಾರ್ಗವನ್ನು ಸರಿಯಾಗಿ ತಿಳಿದುಕೊಂಡನು.

**ತತಶ್ಚ ಮಾತ್ರಾ ಜಗತಾಂ ಗರೀಯ**
**ನ್ಯನಂತ ಪಾರೇಽಖಿಲ ಸದ್ಗುಣಾರ್ಣವೇ ।**
**ರಾಮೇ ಭೃಗೂಣಾ ಮಧಿಪೇ ಪ್ರದತ್ತಃ**
**ಶುಶ್ರಾವ ತತ್ತ್ವಂ ಚ ಶತಾರ್ಧ ವರ್ಷಮ್ ॥೪೭॥**

ಅಲ್ಲಿಂದ ದೇವವ್ರತನ ತಾಯಿ, ಮಗುವನ್ನು ಕರೆದು ತಂದು, ಜಗತ್ತಿಗೆ ಶ್ರೇಷ್ಠನಾದ ಅನಂತ, ಅಪಾರ, ಸಕಲ ಸದ್ಗುಣಗಳಿಗೆ ಆಗರನಾದ, ಭೃಗುವಂಶಕ್ಕೆ ಅಧಿಪತಿಯಾದ ಪರಶುರಾಮನ ಹತ್ತಿರ ಬಿಟ್ಟಳು. ಅಲ್ಲಿ ದೇವವ್ರತನು ಪುನಃ ಐವತ್ತು ವರ್ಷ ಅನೇಕ ತತ್ತ್ವಗಳನ್ನು ಸಚ್ಛಾಸ್ತ್ರಗಳನ್ನು ಚೆನ್ನಾಗಿ ಕೇಳಿ ತಿಳಿದುಕೊಂಡನು.

**ಸ ಪಂಚ ವಿಂಶತ್ ಪುನರಬ್ದಿಕಾನಾ**
**ಮಸ್ತ್ರಾಣಿ ಚಾಭ್ಯಸ್ಯಯ ಪತೇ ರ್ಭೃಗೂಣಾಮ್ ।**
**ಮಾತ್ರಾ ಸಮಾನೀಯ ತಮೇ ನಿಜೇ ತು**
**ಸಂಸ್ಥಾಪಿತಃ ಪ್ರಾರ್ಪಯಿತುಂ ಸ್ವಪಿತ್ರೇ ॥೪೮॥**

ಆ ದೇವವ್ರತನು ಪುನಃ ಇಪ್ಪತ್ತೈದು ವರ್ಷ ಪರಶುರಾಮನ ಹತ್ತಿರ ಅಸ್ತ್ರ ವಿದ್ಯೆಗಳನ್ನು ಕಲಿತನು. ನಂತರ ತಾಯಿಯಾದ ಗಂಗಾದೇವಿಯು ಮಗನನ್ನು ಅವನ ತಂದೆಯಾದ ಶಂತನುವಿಗೆ ಒಪ್ಪಿಸುವುದಕ್ಕಾಗಿ ಗಂಗಾತೀರದ ತಟದಲ್ಲಿ ತಂದು ಬಿಟ್ಟಳು.

ವಿ.ವಿ. ಇಲ್ಲಿಯ ವರೆಗೆ ಶ್ರೀಮದಾಚಾರ್ಯರು, ಶಂತನು ಯಾರು? ಅವನ ಮೂಲಸ್ವರೂಪವೇನು? ಅವನು ಭೂಲೋಕಕ್ಕೆ ಬರಲು ಕಾರಣಗಳಾವವು? ಗಂಗಾದೇವಿಯು ಏಳು ಮಕ್ಕಳನ್ನು ಏಕೆ ಕೊಂದಳು? ದೇವವ್ರತನು ದೀರ್ಘಾಯು, ಶಾಸ್ತ್ರವೇತ್ತ ಮತ್ತು ಬಲಶಾಲಿಯಾಗಲು ಕಾರಣಗಳನ್ನು

ತಿಳಿಸಿ ಇನ್ನು ಮುಂದೆ ದೇವವ್ರತನ ಚರಿತ್ರೆಯನ್ನು ತಿಳಿಸುತ್ತಾರೆ. ಇದರಿಂದ ಓದುಗರಿಗೆ ಸಂಶಯ ಮತ್ತು ಅನುಮಾನಕ್ಕೆ ಕಾರಣಗಳೇ ಉಳಿಯಲಾರವು.

**ಸ ತತ್ರ ಬಧ್ವಾ ಶರಪಂಜರೇಣ**
**ಗಂಗಾ ವಿಜಹ್ರೇಽಸ್ಯ ಪಿತಾ ತದೈವ ।**
**ವ್ರಜನ್ ಮೃಗಾರ್ಥೀ ತೃಷಿತೋಽವ(ವಿ) ಲೋಕಯನ್**
**ಗಂಗಾಮತೋಯಾಮ ಭವತ್ ಸುವಿಸ್ಮಿತಃ ॥೪೯॥**

ಅಲ್ಲಿ ದೇವವ್ರತನು ತನ್ನ ಬಾಣಗಳ ಪಂಜರದಿಂದ ಒಂದು ಒಡ್ಡನ್ನೇ ನಿರ್ಮಿಸಿ ಗಂಗಾ ಪ್ರವಾಹವನ್ನೇ ತಡೆಗಟ್ಟಿದನು. ಅದೇ ಸಮಯದಲ್ಲಿ ಅವನ ತಂದೆ ಬೇಟೆಗಾಗಿ ಅಲ್ಲಿಗೆ ಬಂದಿದ್ದನು. ಅವನಿಗೆ ನೀರಡಿಕೆಯಾಯಿತು. ನೀರಿಗಾಗಿ ಹುಡುಕಿದನು. ಗಂಗೆಯಲ್ಲಿ ಅತ್ಯಲ್ಪ ನೀರಿರುವುದನ್ನು ಕಂಡು ಅವನು ಆಶ್ಚರ್ಯಪಟ್ಟನು.

**"ಭಾಗೀರಥೀಮಲ್ಪಜಲಾಂ ಶಂತನುರ್ದೃಷ್ಟವಾನ್ನೃಪ"**

ಎಂಬ ಭಾರತದ ವಾಕ್ಯವು ಈ ಭಾವನೆಯನ್ನು ಪುಷ್ಟೀಕರಿಸುತ್ತದೆ.

ವಿ.ವಿ. ದೇವವ್ರತನು ಕೇವಲ ಆಟವಾಡುತ್ತ ಬಾಣಗಳಿಂದ ಆ ಒಡ್ಡನ್ನು ಕಟ್ಟಿದ್ದನು.

"ತಂದೆಯು ಕಾರಣಾಂತರದಿಂದ ಮಗನ ವಿದ್ಯೆಯ ಕಡೆಗೆ ಅಲಕ್ಷ್ಯ ಮಾಡಿದರೂ, ತಾಯಿಯು ಮನಸ್ಸು ಮಾಡಿದರೆ ಅದನ್ನು ಪೂರೈಸಬಲ್ಲಳು" ಎಂಬುದನ್ನು ವಾಚಕರು ಗಮನಿಸಬೇಕಾಗಿ ನಮ್ರ ವಿನಂತಿ.

**ಸ ಮಾರ್ಗಯಾಮಾಸ ತತೋಽಸ್ಯಹೇತುಂ**
**ಜ್ಞಪ್ತ್ಯೈ: ತದಾ ಸ್ವಂ ಚ ದ ದರ್ಶಸೂನುಮ್ ।**
**ಕ್ರೀಡಂತಮಸ್ತ್ರೇಣ ಬಭೂವ ನೋಽಪಿ**
**ಪಶ್ಚಾದದೃಶ್ಯ: ಪಿತೃದರ್ಶನಾದನು ॥೫೦॥**

ಆ ರಾಜನು, ನದಿಯಲ್ಲಿ ಅಲ್ಪಜಲವಿರುವ ಕಾರಣವನ್ನು ಅರಿಯಲು ತೀರದುದ್ದಕ್ಕೂ ನಡೆದನು. ಅಲ್ಲಿ ಅಸ್ತ್ರಗಳಿಂದ ಆಟ ಆಡುತ್ತಿರುವ

ಮಗುವನ್ನು ಕಂಡನು. ತಂದೆಯನ್ನು ಕಂಡ ತತ್ಕ್ಷಣದಲ್ಲಿಯೇ ಆ ಮಗು ಅದೃಶ್ಯವಾಯಿತು.

**ಮೀಮಾಂಸಮಾನಂ ತಮವೇಕ್ಷ್ಯ (ವಾಪ) ಗಂಗಾ**
**ಸುತಂ ಸಮಾದಾಯ ಪತಿಂ ಜಗಾದ (ಚ)**
**ಅಯಂ ಸುತಸ್ತೇ ಪರಮಾಸ್ತ್ರವೇತ್ತಾ**
**ಸಮರ್ಪಿತೋ ವೀರ್ಯಬಲೋಪಪನ್ನಃ ॥೫೧॥**

ಇವನಾರು? ಎಲ್ಲಿ ಹೋದನು ಎಂದು ಯೋಚಿಸುತ್ತಿರುವಾಗ ಶಂತನುವನ್ನು ಕಂಡು, ಗಂಗಾದೇವಿಯು ತಾನಾಗಿಯೇ ಮಗನನ್ನು ಕರೆದು ತಂದು, "ಇವನು ನಿನ್ನ ಮಗನು. ಶ್ರೇಷ್ಠವಾದ ಅಸ್ತ್ರವಿದ್ಯೆಗಳನ್ನು ಕಲಿತಿದ್ದಾನೆ. ಬಲವೀರ್ಯಗಳನ್ನು ಹೊಂದಿದ್ದಾನೆ. ಈತನನ್ನು ನಿನಗೆ ಸಮರ್ಪಿಸುತ್ತಿದ್ದೇನೆ" ಎಂದು ಹೇಳಿ ಒಪ್ಪಿಸಿದಳು.

**ಅಸ್ಯಾಗ್ರಜಾಃ ಸ್ವಾಂ ಸ್ಥಿತಿ ಮೇವ ಯಾತಾ**
**ಹರೇಃ ಪದಾಂಭೋಜ ಸುಪಾವಿತೇ ಜಲೇ।**
**ತನೂರ್ಮದೀಯೇ ಪ್ರಣಿಧಾಯ ತಸ್ಮಾತ್ (ತ್ವಂ)**
**ತಾನ್ ಮಾ ಶುಚೋಽನೇನ ಚ ಮೋದಮಾನಃ ॥೫೨॥**

ಇವನ ಅಣ್ಣಂದಿರು, ಪರಮಾತ್ಮನ ಪಾದಕಮಲಸ್ಪರ್ಶದಿಂದ ಪುನೀತವಾದ ನನ್ನ ಜಲದಲ್ಲಿ (ಗಂಗೆಯಲ್ಲಿ ತಮ್ಮ ದೇಹವನ್ನು ಪರಿತ್ಯಾಗ ಮಾಡಿದ ಮೂಲಕ ಮೂಲ ರೂಪವನ್ನು ಹೊಂದಿದ್ದಾರೆ. ಅದಕ್ಕಾಗಿ ನೀನು ಅವರಿಗಾಗಿ ಶೋಕಿಸಬೇಡ. ಇವನನ್ನೇ ಪಡೆದು ನೀನು ಆನಂದವನ್ನು ಹೊಂದು" ಎಂದು ಹೇಳಿದಳು.

**ಇತಿ ಪ್ರದಾಯಾಶುಮದೃಶ್ಯ ತಾಮಗಾತ್**
**ಗಂಗಾ ತಮಾದಾಯ ಯಯೌ ಗೃಹಂ ಸ್ವಕಮ್ ।**
**ರಾಜಾಭಿಷಿಚ್ಯಾಥ ಚ ಯೌವರಾಜ್ಯೇ**
**ಮುಮೋದ ತತ್ಸದ್ಗುಣ ತರ್ಪಿತೋ ಭೃಶಮ್ ॥೫೩॥**

ಈ ರೀತಿಯಾಗಿ ಮಗುವನ್ನು ಕೊಟ್ಟು ಗಂಗಾದೇವಿಯು ಅದೃಶ್ಯಳಾದಳು. ರಾಜನು ಅವನನ್ನು ತನ್ನ ಮನೆಗೆ ಕರೆದು ತಂದು ಯುವರಾಜನನ್ನಾಗಿ ಮಾಡಿದನು. ಅವನ ಸದ್ಗುಣಗಳಿಗೆ ಬಹಳಷ್ಟು ಪ್ರೀತನಾಗಿ ಆನಂದದಿಂದ ಕಾಲಕಳೆಯುತ್ತಿದ್ದನು.

**ಪುನಃ ಸ ಪಿತ್ರಾನುಮತೋ ಬೃಹಸ್ಪತೇರವಾಪ**
**ವೇದಾನ್ ಪುರುಷಾಯುಷೋಽರ್ಧತಃ ।**
**ರಾಮಾತ್ರಥಾಸ್ತ್ರಾಣಿ ಪುನಸ್ತವಾಪ**
**ತಾವದ್ಭಿರ ಬ್ದೈಸ್ತ್ರಿ ಶತೈಶ್ಚ ತತ್ತ್ವಮ್ ॥೫೮॥**

ಆ ದೇವವ್ರತನು ಪುನಃ ತಂದೆಯ ಅನುಮತಿಯನ್ನು ಪಡೆದು ಬೃಹಸ್ಪತ್ಯಾಚಾರ್ಯದಲ್ಲಿ ಮತ್ತೆ ಐವತ್ತು ವರ್ಷ ವೇದಾಧ್ಯಯನ ಮಾಡಿದನು. ಅಷ್ಟೇವರ್ಷ ಪುನಃ ಪರಶುರಾಮನ ಹತ್ತಿರ ಬಂದು ಅಸ್ತ್ರವಿದ್ಯೆಯನ್ನು ಕಲಿತನು. ಅಲ್ಲದೆ ಮೂರು ನೂರು ವರ್ಷ ತತ್ತ್ವಗಳನ್ನು ಚೆನ್ನಾಗಿ ತಿಳಿದುಕೊಂಡನು.

**ಸ ಸರ್ವವಿತ್ತಂ ಸಮವಾಪ್ಯರಾಮಾತ್**
**ಸಮಸ್ತ ವಿದ್ಯಾಧಿಪತೇರ್ಗುಣಾರ್ಣವಾತ್ ।**
**ಪಿತುಃ ಸಮೀಪಂ ಸಮುಪಾಪ್ಯ ತಂ ಚ**
**ಶುಶ್ರೂಷಮಾಣಃ ಪ್ರಮುಮೋದ ವೀರಃ ॥೫೫॥**

ಆ ದೇವವ್ರತನು, ಸರ್ವಸಂಪತ್ಪರಿತನಾದ, ಸಮಸ್ತ ವಿದ್ಯೆಗಳಿಗೆ ಸ್ವಾಮಿಯಾದ, ಸಕಲ ಗುಣಗಳಿಗೆ ಆಗರನಾದಂಥ ಪರಶುರಾಮರ ಬಳಿಗೆ ಬಂದು ಎಲ್ಲವನ್ನು ಅರಿತುಕೊಂಡನು. ಅಲ್ಲಿಂದ ಆ ವೀರನು ತಂದೆಯ ಹತ್ತಿರ ಬಂದು ಅವರ ಸೇವೆಯನ್ನು ಮಾಡುತ್ತ ಆನಂದದಿಂದ ಇರಹತ್ತಿದನು.

**ಕೃಪಾದಿಗಳ ಉತ್ಪತ್ತಿಯ ಪೀಠಿಕೆ.**

**ಯದ್ವೈವ ಗಂಗಾ ಸುಷುವೇಽಷ್ಟಮಂ ಸುತಂ**
**ತದ್ವೈವ ಯಾತೋ ಮೃಗಯಾಂ ಸ ಶಂತನುಃ ।**

**ಶರದ್ವತೋ ಜಾತಮಪಶ್ಯದುತ್ತಮಂ**
**ವನೇ ವಿಸೃಷ್ಟಂ ಮಿಥುನಂ ತ್ವಯೋನಿಜಮ್ ॥೫೭॥**

ಯಾವ ಸಮಯದಲ್ಲಿ ಗಂಗಾದೇವಿಯು ಎಂಟನೆಯ ಮಗುವನ್ನು ಹೆತ್ತಳೋ, ಅದೇ ಕಾಲಕ್ಕೆ ಆ ಶಂತನು ರಾಜನು ಬೇಟೆಗಾಗಿ ವನಕ್ಕೆ ಹೋಗಿದ್ದನು. ಅಲ್ಲಿ ಶರದ್ವತ ಋಷಿಯಿಂದ ಉತ್ಪನ್ನವಾದ ಅಯೋನಿಜ, ಅವಳಿ (ಗಂಡು ಮತ್ತು ಹೆಣ್ಣು) ಉತ್ತಮ ಮಕ್ಕಳನ್ನು ಕಂಡನು.

**'ಅಯೋನಿಜ'ಗೆ ಕಾರಣಗಳು.**

**ಶರದ್ವಾಂಸ್ತು ತಪ: ಕುರ್ವನ್ ದದರ್ಶ ಸಹಸೋರ್ವಶೀಮ್ ।**
**ಚಸ್ಕಂದ ರೇತಸ್ತಸ್ಯಾಥ ಶರಸ್ತಂಬೇ ತತೋಽಭವತ್ ॥೫೭॥**
**ವಿಷ್ಕಂಭೋನಾಮ ರುದ್ರಾಣಾಂ ಭೂಭಾರ ಹರಣೇಂಽಗತಾಮ್।**
**ಹರೇ: ಪ್ರಾಪ್ತುಂ ತಥಾ ತಾರಾ ಭಾರ್ಯಾಯಾಹಿ ಬೃಹಸ್ಪತೇ॥೫೮॥**

ಶರದ್ವಾಸ ಋಷಿಗಳು ತಪಸ್ಸು ಮಾಡುತ್ತ ಕುಳಿತಿದ್ದರು. ಆಗ ಅವರು ಆಕಸ್ಮಾತ್ತಾಗಿ ಊರ್ವಶಿಯನ್ನು ಕಂಡರು. ಅವರ ರೇತಸ್ಸು ಅಲ್ಲಿಯೇ ಹತ್ತಿರದಲ್ಲಿದ್ದ ಬಿದಿರುಗಳ ಸಾಲಿನಲ್ಲಿ ಬಿದ್ದಿತು. ಆ ರೇತಸ್ಸಿನ ನಿಮಿತ್ತದಿಂದ ರುದ್ರಗಣದಲ್ಲಿ ಪ್ರಸಿದ್ಧನಾದ ವಿಷ್ಕಂಭನೆಂಬ ರುದ್ರನು, ಬೃಹಸ್ಪತಿ ಹೆಂಡತಿಯಾದ ತಾರಾದೇವಿಯರು, ಅಲ್ಲಿ ಅವಳಿಯಾಗಿ ಹೊರಬಂದರು. ಅವರಿಬ್ಬರದೂ ಶ್ರೀಹರಿಯು, ಭೂಭಾರ ಇಳುಹುವ ಕಾರ್ಯದಲ್ಲಿ ಅಂಗಭೂತರಾಗಿ ಬಂದು ಸೇವೆ ಸಲ್ಲಿಸಿ ಕೃತಾರ್ಥರಾಗಬೇಕೆಂದು ಅವರ ಮುಖ್ಯ ಉದ್ದೇಶವಾಗಿತ್ತು.

**ತಾವುಭೌ ಶಂತನುರ್ದೃಷ್ಟ್ವಾ ಕೃಪಾವಿಷ್ಟ: ಸ್ವಕಂ ಗೃಹಮ್ ।**
**ನಿನಾಯ ನಾಮ ಚಕ್ರೇಽಥ ಕೃಪಾಯಾ ವಿಷಯೌ ಯತ: ॥೫೯॥**
**ಕೃಪ: ಕೃಪೀತಿ–ಸ ಕೃಪಸ್ತಪ್ತೋ ವಿಷ್ಣೋಶ್ಚಚಾ (ಕಾ) ರ ಹ।**
**ತಸ್ಯ ಪ್ರೀತಸ್ತದಾ ವಿಷ್ಣು: ಸರ್ವ ಲೋಕೇಶ್ವರೇಶ್ವರ: ॥೬೦॥**

ಆ ಎರಡೂ ಮಕ್ಕಳನ್ನು ಶಂತನು ನೋಡಿದನು. ದಯೆಯಿಂದ ಕೂಡಿದವನಾಗಿ ಅವುಗಳನ್ನು ತನ್ನ ಮನೆಗೆ ತಂದನು. ಅವನ (ಅರಸನ)

ಕೃಪಾದೃಷ್ಟಿಗೆ ಪಾತ್ರರಾದ ಪ್ರಯುಕ್ತ ಅವುಗಳಿಗೆ ಕೃಪಾ, ಕೃಪಿ ಎಂದೇ ಹೆಸರಿಡಲಾಯಿತು. ಮುಂದೆ ಆ ಕೃಪನು, ಅತಿ ಭಕ್ತಿಯಿಂದ ಶ್ರೀವಿಷ್ಣುವಿನ ಕೃಪೆಗಾಗಿ ತಪಸ್ಸು ಮಾಡಿದನು. ಸರ್ವಲೋಕಗಳಿಗೆ ಒಡೆಯನಾದ, ಸರ್ವೇಶ್ವರನಾದ ಶ್ರೀ ವಿಷ್ಣುವು ಆತನ ತಪಸ್ಸಿಗೆ ಸಂಪ್ರೀತನಾದನು.

**ಪ್ರಾದಾದೇಷ್ಯತ್ಸಪ್ತ ಋಷಿತ್ವಮಾಯು : ಕಲ್ಪಾಂತಮೇವ ಚ ।**
**ಸ ಶಂತನುಗೃಹೇ ತಿಷ್ಠನ್ ದೇವವ್ರತ ಸಖಾ ಭವತ್ ॥೬೧॥**

ಶ್ರೀಹರಿಯು ಪ್ರೀತನಾಗಿ ಆ ಕೃಪನಿಗೆ ಮುಂದೆ ಆಗಬಹುದಾದ ಸಪ್ತ ಋಷಿಗಳಲ್ಲಿ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟನು. ಅಲ್ಲದೆ ಒಂದು ಕಲ್ಪದವರೆಗೆ (ವೈವಸ್ವತ ಮನುಕಲ್ಪ) ಆಯುಷ್ಯವನ್ನೂ ಕೊಟ್ಟನು. ಅವನು ಶಂತನು ಚಕ್ರವರ್ತಿಯ ಮನೆಯಲ್ಲಿಯೇ ಇದ್ದು ದೇವವ್ರತನಿಗೆ ಸಖನಾಗಿ ಬೆಳೆದನು.

**ಪುತ್ರವಚ್ಛಂತನೋಶ್ಚಾಸೀತ್ ಸ ಚ ಪುತ್ರವದೇವ ತತ್ ।**
**ಮಿಥುನಂ ಪಾಲಯಾಮಾಸ ಕೃಪೋऽಪ್ಯಸ್ತ್ರಾಣ್ಯವಾಪ ಚ ॥೬೨॥**
**ಸರ್ವ ವೇದಾನಧಿಜಗೌ ಸರ್ವಶಾಸ್ತ್ರಾಣಿ ಕೌಶಿಕಾತ್ ।**
**ತತ್ವ ಜ್ಞಾನಂ ತಥಾ ವ್ಯಾಸಾದಾಪ್ಯ ಸರ್ವಜ್ಞತಾಂ ಗತ: ॥೬೩॥**

ಅವರಿಬ್ಬರು ಶಂತನುವಿಗೆ ಮಕ್ಕಳಂತೆಯೇ ಇದ್ದರು. ಅವರನ್ನು ಮಕ್ಕಳೆಂದೇ ಭಾವಿಸಿ, ತಂದೆಯ ಸ್ಥಾನದಲ್ಲಿದ್ದು ಆ ಅವಳಿ ಮಕ್ಕಳನ್ನು ಪಾಲಿಸಿದನು. ಕೃಪನು 'ಗೌತಮರ' ಹತ್ತಿರ, ಅಸ್ತ್ರವಿದ್ಯೆಯನ್ನು, ಸರ್ವವೇದಶಾಸ್ತ್ರವನ್ನು ವಿಶ್ವಾಮಿತ್ರರಲ್ಲಿ, ಕಲಿತು, ವ್ಯಾಸರಲ್ಲಿ ತತ್ತ್ವಜ್ಞಾನವನ್ನರಿತು ಯೋಗ್ಯತಾನುಸಾರ ಸರ್ವಜ್ಞನಾದನು.

**ಗೋಪಿತೋ ಗೌತಮಸ್ತತ್ರ ತಪಸಾ ತಾವ ವಿಂದತ ।**
**ಆಗಮ್ಯ ತಸ್ಮೈ ಗೋತ್ರಾದಿ ಸರ್ವಮಾಖ್ಯಾತವಾಂಸ್ತದಾ ।**
**ಚತುರ್ವಿಧಂ ಧನುರ್ವೇದಮಸ್ತ್ರಾಣಿ ವಿವಿಧಾನಿಚ ॥**

(ಮಹಾಭಾರತ ಆದಿಪರ್ವ)

ಈ ಶ್ಲೋಕವು ಮೇಲಿನ ಭಾವನೆಯನ್ನು ಪುಷ್ಟೀಕರಿಸುತ್ತದೆ.

ದ್ರೋಣಾಚಾರ್ಯರ ಉತ್ಪತ್ತಿಯ ಪೀಠಿಕೆ.

**ಯದಾಭಿಜಾತಃ ಸ ಕೃಪಸ್ತದೈವ**
**ಬೃಹಸ್ಪತೇಃ ಸೂನುರಗಾಚ್ಚ ಗಂಗಾಮ್ ।**
**ಸ್ನಾತುಂ ಘೃತಾಂಚೀಂ ಸ ದದರ್ಶ ತತ್ರ**
**ಶ್ಲಥದ್ದುಕೂಲಾಂ ಸುರವರ್ಯ ಕಾಮಿನೀಮ್ ॥೬೪॥**
**ತದ್ದರ್ಶನಾತ್ ಸ್ಕಂನ್ನಮಥೇಂದ್ರಿಯಂ ಸ**
**ದ್ರೋಣೇ ದಧಾರಾಶು ತತೋಽಭವತ್ ಸ್ವಯಮ್ ।**
**ಅಂಭೋಜಜಾವೇಶಯುತೋ ಬೃಹಸ್ಪತಿಃ**
**ಕರ್ತುಂ ಹರೇಃ ಕರ್ಮಭುವೋ ಭರೋ ದ್ಧೃತೌ ॥೬೫॥**

ಯಾವ ಕಾಲದಲ್ಲಿ ಕೃಪಾಚಾರ್ಯರು ಜನಿಸಿದರೋ, ಅದೇ ಸಮಯದಲ್ಲಿ ಬೃಹಸ್ಪತ್ಯಾಚಾರ್ಯರ ಮಕ್ಕಳಾದ 'ಭರದ್ವಾಜರು' ಸ್ನಾನಕ್ಕಾಗಿ ಗಂಗೆಗೆ ಹೋಗಿದ್ದರು. ಅಲ್ಲಿ ಸಮಸ್ತ ಸುರರೆಲ್ಲ ಕಾಮಿಸುವಂಥ, ಶ್ಲಥದ್ದುಕೂಲಳಾದ 'ಘೃತಾಚಿ' ಎಂಬ ಅಪ್ಸರ ಸ್ತ್ರೀಯನ್ನು ನೋಡಿದರು. ಅವಳನ್ನು ನೋಡಿದ್ದರಿಂದ ಭರದ್ವಾಜರ ಇಂದ್ರಿಯ ಸ್ಖಲನವಾಯಿತು. ಆ ವೀರ್ಯವನ್ನು ದ್ರೋಣ (ದೊನ್ನೆ)ದಲ್ಲಿ ಹಿಡಿದರು. ಅಲ್ಲಿಯೇ ಬ್ರಹ್ಮನ ಆವೇಶವುಳ್ಳವರಾಗಿ ಬೃಹಸ್ಪತ್ಯಾಚಾರ್ಯರು ಹುಟ್ಟಿದರು. ಶ್ರೀಕೃಷ್ಣನ ಭೂಭಾರ ಇಳುಹುವ ಕಾರ್ಯದಲ್ಲಿ ಸಹಾಯಕರಾಗಿ ಸೇವೆಸಲ್ಲಿಸಿ ಕೃತಾರ್ಥರಾಗುವುದೇ ಅವರ ಉದ್ದೇಶವಾಗಿತ್ತು.

ವಿ.ವಿ. ತಾರತಮ್ಯದ ಪ್ರಕಾರ, ಬೃಹಸ್ಪತ್ಯಾಚಾರ್ಯರು ಭೀಮ, ಅರ್ಜುನಾದಿಗಳಿಗೆ ಗುರುಗಳಾಗಲು ಅರ್ಹರಲ್ಲ, ಕಾರಣ ಅಲ್ಲಿ ಬ್ರಹ್ಮನ ಆವೇಶ ಅವಶ್ಯವಾಯಿತು.

**ದ್ರೋಣೇತಿ ನಾಮಸ್ಯ ಚಕಾರ ತಾತೊ**
**ಮುನಿರ್ಭರದ್ವಾಜ ಉತಾಸ್ಯ ವೇದಾನ್ ।**
**ಅಧ್ಯಾಪಯಾಮಾಸ ಸ ಶಾಸ್ತ್ರ ಸಂಘಾನ್**
**ಸರ್ವಜ್ಞ ತಾಮಾಪ ಚ ಸೋಽಚಿರೇಣ ॥೬೬॥**

ಭರದ್ವಾಜ ಮುನಿಗಳು ಆ ಮಗುವಿಗೆ 'ದ್ರೋಣ'ನೆಂದೇ ಹೆಸರಿಟ್ಟರು. ಅವರೇ ಆ ಮಗುವಿಗೆ (ಮಗನಿಗೆ) ಎಲ್ಲ ವೇದಗಳ ಅಧ್ಯಯನವನ್ನು ಮಾಡಿಸಿದರು. ಶಾಸ್ತ್ರಗಳನ್ನೂ ಕಲಿಸಿದರು. ಮೊದಲೇ ಬೃಹಸ್ಪತಿ, ಅದರಲ್ಲೂ ಬ್ರಹ್ಮನ ಆವೇಶ, ಈ ಕಾರಣಗಳಿಂದ ಆವರು ಎಲ್ಲ ವಿದ್ಯೆಗಳನ್ನು ಶೀಘ್ರದಲ್ಲಿ ಕಲಿತು ಸರ್ವಜ್ಞತ್ವವನ್ನು ಪಡೆದರು.

ದ್ರುಪದ ರಾಜನ ಹುಟ್ಟಿಗೆ ಹಿನ್ನೆಲೆ.

**ಕಾಲೇ ಚ ತಸ್ಮಿನ್ ಪೃಷತೋಽನಪತ್ಯೋ**
**ವನೇ ತು ಪಾಂಚಾಲ ಪತಿಶ್ಚಚಾರ ।**
**ತಪೋ ಮಹತ್ತಸ್ಯ ತಥಾ ವರಾಪ್ಸರೋಽ (ರಾ)**
**ವಲೋಕನಾತ್ ಸ್ಕಂದಿತಮಾಶು ರೇತ: ॥೬೭॥**

ದ್ರೋಣನು ಹುಟ್ಟುವ ಕಾಲದಲ್ಲಿ ಪಾಂಚಾಲದ ರಾಜನಾದ ಪೃಷತನು ಮಕ್ಕಳಿಗಾಗಿ ವನದಲ್ಲಿ ತಪಸ್ಸು ಆಚರಿಸುತ್ತಿದ್ದನು. ಅಲ್ಲಿ ಅವನು ಒಬ್ಬ ಅಪ್ಸರೆಯನ್ನು ನೋಡಿದನು. ಅದರ ಪರಿಣಾಮ ಆ ರಾಜನ ರೇತಸ್ಸು ಕೆಳಗೆ ಬಿದ್ದಿತು.

**ಸ ತದ್ವಿಲಜ್ಜಾವಶತ: ಪದೇನ**
**ಸಮಾ ಕ್ರಮತ್ತಸ್ಯ ಬಭೂವ ಸೂನು: ।**
**ಹೂಹೂ ತು ನಾಮ್ನಾ ಸ ವಿರಂಚಗಾಯಕೋ**
**ನಾಮ್ನಾವಹೋ ಯೋ ಮರುತಾಂ ತದಂಶಯುಕ್ ॥೬೮॥**

ರಾಜನು, ಆ ಪ್ರಸಂಗದಲ್ಲಿ ಲಜ್ಜಿತನಾಗಿ, ಆ ರೇತಸ್ಸನ್ನು ತನ್ನ ಪಾದಗಳಿಂದ ತಿಕ್ಕಿದನು. ಅದರಿಂದ ಅಲ್ಲಿ ಒಂದು ಮಗು ಹುಟ್ಟಿತು.

ಅವನು ಪೂರ್ವಜನ್ಮದಲ್ಲಿ (ಮೂಲದಲ್ಲಿ) 'ಹೂಹೂ' ಎಂಬ ಗಂಧರ್ವನು. ಅವನು ಬ್ರಹ್ಮನ ಸಭೆಯಲ್ಲಿ ಗಾಯಕನಾಗಿದ್ದನು. ಈಗ ಅವನು 'ಆಪವ' ಎಂಬ ಮರುತನ ಅಂಶದಿಂದ ಜನಿಸಿದ್ದಾನೆ.

**ಸ ದ್ರೋಣ ತಾತಾತ್ಸಮವಾಪ ವೇದಾನ್**
**ಅಸ್ತ್ರಾಣಿ ವಿದ್ಯಾಶ್ಚ ತಥಾ ಸಮಸ್ತಾಃ ।**
**ದ್ರೋಣೇನ ಯುಕ್ತಃ ಸ ತದಾ ಗುರೋಃ ಸುತಂ**
**ಸಹೈವ ನಾ ರಾಜ್ಯಮತಿ ಹ್ಯವಾದಿತ್ ॥೭೯॥**

ಆ ರಾಜಕುಮಾರನು ದ್ರೋಣನ ತಂದೆ, ಭರದ್ವಾಜರ ಹತ್ತಿರ ವೇದ ವಿದ್ಯೆ, ಅಸ್ತ್ರವಿದ್ಯೆ ಎಲ್ಲವನ್ನೂ ಕಲಿತನು. ಗುರುಪುತ್ರ ದ್ರೋಣನ ಜೊತೆಯಲ್ಲಿಯೇ ಇರುತ್ತಿದ್ದನು. "ನಾವಿಬ್ಬರೂ ಕೂಡಿಯೇ ರಾಜ್ಯವಾಳೋಣ" ಎಂದು ರಾಜನು ನುಡಿದನು. ಅಂದರೆ ನನ್ನ ಅರ್ಧ ರಾಜ್ಯಕ್ಕೆ ನೀನು ಅಧಿಕಾರಿಯಾಗು ಎಂದು.

ರಾಜಕುಮಾರನ ಹೆಸರು

**ಪದೇ ದ್ರು ತತ್ಸಾದ್ದ್ರುಪದಾಭಿಧೇಯಃ**
**ಸ ರಾಜ್ಯಮಾಪಾಥ ನಿಜಾಂ ಕೃಷಿಂ ಸಃ ।**
**ದ್ರೋಣೋಽಪಿ ಭಾರ್ಯಾಂ ಸಮವಾಪ್ಯ ಸರ್ವ**
**ಪ್ರತಿಗ್ರಹೋಜ್ಝಶ್ಚ ಪುರೇಽವಸತ್ಸುಖೀ ॥೮೦॥**

ರೇತಸ್ಸನ್ನು ಪಾದದಿಂದ ತಿಕ್ಕಿದಾಗ ಹುಟ್ಟಿದ ಪ್ರಯುಕ್ತ, ಆ ಮಗುವಿಗೆ 'ದ್ರುಪದ' ಎಂದೇ ಹೆಸರಿಟ್ಟರು. ಆ ದ್ರುಪದ ತಂದೆಯ ರಾಜ್ಯವನ್ನು ಪಡೆದು ರಾಜ್ಯವನ್ನು ಆಳುತ್ತಿದನು. ಇತ್ತ ದ್ರೋಣನು ಕೂಡ ಹೆಂಡತಿಯೊಡನೆ ಪ್ರತಿಗ್ರಹವನ್ನು ತ್ಯಾಗಮಾಡಿ ತನ್ನ ಪುರದಲ್ಲಿ ಸುಖವಾಗಿದನು.

ವಿ.ವಿ. ದ್ರೋಣನ ಹೆಂಡತಿ ಕೃಪಿ. ಆಕೆ ಮೂಲದಲ್ಲಿ ನಿಯತಪತ್ನಿ. ಪತಿಗ್ರಹವನ್ನು ತ್ಯಜಿಸು, ಅಂದರೆ ಇತರರಿಂದ ಬೇಡಿ ಸಂಗ್ರಹಿಸುವುದನ್ನು ಬಿಟ್ಟುಬಿಡುವುದು. ಇದನ್ನೇ 'ಶಿಲೋಂಚವೃತ್ತಿ' ಎಂದು ಕರೆಯುತ್ತಾರೆ.

**ಶಿಲೋಂಛ ವೃತ್ತ್ಯಾ ಹಿ ವರ್ತಯನ್ಸ**
**ಧರ್ಮಂ ಮಹಾಂತಂ ವಿರಜಂ ಬಲಷಾಣಃ ।**
**ಉವಾಸ ನಾಗಾಖ್ಯ ಪುರೇ ಸುಖಾऽಸ**
**ದೇವವ್ರತಸ್ಯಾಥ ಕೃಪಸ್ಯ ಚೈವ ॥೭೧॥**

ಆ ದ್ರೋಣಾಚಾರ್ಯರು ಶಿಲೋಂಛ ವೃತ್ತಿಯನ್ನು ಅನುಸರಿಸಿ, ಮಹತ್ತರವಾದ ಧರ್ಮವನ್ನು ಪಾಲಿಸುತ್ತ, ವಿಷ್ಣುಪ್ರಿಯವಾದ ಕರ್ಮಗಳನ್ನು ಆಚರಿಸುತ್ತ ಮೋಕ್ಷ ಮಾರ್ಗದಲ್ಲಿ ಜೀವನವನ್ನು ಸಾಗಿಸಿದ್ದರು. ಅವರು 'ನಾಗಾಖ್ಯಪುರ' ಅಂದರೆ ಹಸ್ತಿನಾವತಿಯಲ್ಲಿದ್ದು ದೇವವ್ರತ ಮತ್ತು ಕೃಪಾಚಾರ್ಯರ ಜೊತೆಯಲ್ಲಿ ಸುಖರಾಗಿ ನಡೆದುಕೊಳ್ಳುತ್ತಿದ್ದರು.

ವಿ.ವಿ. 'ಶಿಲೋಂಛವೃತ್ತಿ' ಇದು ಜೀವನೋಪಾಯದ ಒಂದು ಕ್ರಮ. ಕಠಿಣವಾದ ವ್ರತ. ಇದರ ವಿಷಯ ಭಾಗವತದಲ್ಲಿ ಬಹಳಷ್ಟು ವಿವರವಾಗಿ ವಿವರಿಸಲಾಗಿದೆ. ಸಂಕ್ಷಿಪ್ತದಲ್ಲಿ ಹೀಗೆ ಹೇಳಬಹುದು.
"ಉಂಛಃ ಕಣಶ ಆದಾನೇ ಕಣಿಶಾದ್ಯರ್ಜನಂ". "ಶಿಲಂ" ಅಂದರೆ, ಒಕ್ಕಲಿಗನು ಪೈರನ್ನು ಕೊಯ್ದು ರಾಶಿಮಾಡಿ ತೆಗೆದುಕೊಂಡು ಹೋದಮೇಲೆ, ಅಲ್ಲಲ್ಲಿ ಬಿದ್ದಿರುವ ಕಾಳನ್ನು ಆಯ್ದು ತರುವುದು. ಅಥವಾ ಹಿಟ್ಟನ್ನು ಬೀಸಿದ ಮೇಲೆ ಕಲ್ಲಿನಲ್ಲಿದ್ದ ಅಥವಾ ಅದರ ಸುತ್ತಲು ಬಿದ್ದಿರುವ ಹಿಟ್ಟನ್ನು ಸಂಗ್ರಹಿಸಿ ಅದರಿಂದ ಜೀವನ ಸಾಗಿಸುವುದೇ 'ಉಂಛವೃತ್ತಿ'. ದ್ರೋಣಾಚಾರ್ಯರು ಯಾರಿಗೂ ಏನನ್ನೂ ಬೇಡದೆ ಮೇಲಿನ ಕ್ರಮದಲ್ಲಿ ಜೀವಿಸುತ್ತಿದ್ದರು. ಇದು ಶ್ರೇಷ್ಠ ಮತ್ತು ವಿರಕ್ತ ವ್ಯಕ್ತಿಗೆ ಮಾತ್ರ ಸಾಧ್ಯ.

**ತೇಷಾಂ ಸಮಾನೋ ವಯಸಾ ವಿರಾಟ-**
**ಸ್ತ್ವಭೂದ್ಧಹಾಹಾ ನಾಮ ವಿಧಾತೃಗಾಯಕಃ ।**
**ವರುತ್ತು ಯೋ ವಿವಹೋ ನಾಮ ತಸ್ಯಾ**
**ಪ್ಯಂಶೇನ ಯುಕ್ತೋ ನಿಜಧರ್ಮವರ್ತೀ ॥೭೨॥**

ಅವರೆಲ್ಲರಿಗೂ ವಯಸ್ಸಿನಲ್ಲಿ ಸಮನಾದವನು ವಿರಾಟನು. ಅವನು ಮೂಲದಲ್ಲಿ 'ಹಾಹಾ' ಎಂಬ ಗಂಧರ್ವನು. ಬ್ರಹ್ಮನ ಸಭೆಯಲ್ಲಿ ಗಾಯಕನಾದವನು. ಈಗ ಇಲ್ಲಿ 'ವಿವಹ' ಎಂಬ ವಾಯುವಿನ ಅಂಶದಿಂದ ವಿರಾಟನಾಗಿ ಹುಟ್ಟಿದ್ದಾನೆ.

ತನ್ನ ಸ್ವಧರ್ಮಕ್ಕನುಸರಿಸಿ, ವರ್ಣಾಶ್ರಮಗಳನ್ನು ಪಾಲಿಸುತ್ತ ರಾಜ್ಯವನ್ನು ಆಳುತ್ತಿದ್ದನು.

'ದೇವವ್ರತ, ದ್ರೋಣಾಚಾರ್ಯ, ಕೃಪಾಚಾರ್ಯ, ದ್ರುಪದ ಮತ್ತು ಇವರೆಲ್ಲರೂ ಸಮವಯಸ್ಕರು ಎಂದರೆ ತಪ್ಪಲ್ಲ.

ಪಾಂಡವರ ಜನನದ ಪೀಠಿಕೆ.

**ತತಃ ಕದಾಚಿನ್ಮೃಗಯಾಂ ಗತಃ ಸ**
**ದದರ್ಶ ಕನ್ಯಾಂ (ನ್ಯಾ) ಪ್ರವರಾಂ ತು ಶಂತನುಃ ।**
**ಯಾ ಪೂರ್ವಸರ್ಗೇ ಪಿತೃಪುತ್ರಿಕಾ ಸತೀ**
**ಚಚಾರ ವಿಷ್ಣೋಸ್ತಪ ಉತ್ತಮಂ ಚಿರಮ್ ॥೭೩॥**

ತತಃ ಎಂದರೆ ನಂತರ– ಅಂದರೆ ದೇವವ್ರತನಿಗೆ ಯುವರಾಜ್ಯ ಪಟ್ಟ ಆದನಂತರ, ಚಕ್ರವರ್ತಿಯಾದ ಶಂತನು ಆಕಸ್ಮಾತ್ತಾಗಿ ಬೇಟೆಗೆ ಹೋಗಿದ್ದನು. ಅಲ್ಲಿ ಅವನು ಒಬ್ಬ ಶ್ರೇಷ್ಠಳಾದ ಕನ್ಯೆಯನ್ನು ನೋಡಿದನು. ಆ ಕನ್ಯೆ ಯಾರು? ಆಕೆ ಚಿರ ಪಿತೃವಿನ ಪುತ್ರಿ. ಅವಳ ಹೆಸರು 'ಸತಿ'. ಆಕೆಯು ವಿಷ್ಣುವನ್ನು ಕುರಿತು ಉತ್ತಮವಾದ ತಪಸ್ಸನ್ನು ಆಚರಿಸಿದ್ದಳು.

**ಪಿತರೋ ದಿವಿ ವರ್ತಂತೇ ದೇವಾಸ್ತಾನ್ ಭಾವಯತ್ಯುತ ।**
**ಅಗ್ನಿಷ್ವಾತ್ತಾ ಇತಿಖ್ಯಾತಾಃ ಸರ್ವ ಏವಾಮಿತೌ ಜಸಃ ।**
**ಏತೇಷಾಂ ಮಾನಸೀ ಕನ್ಯಾ ಅಚ್ಛೋದಾನಾಮ ನಿಮ್ನಗಾ ॥**

ಈ ಶ್ಲೋಕವೂ ಮೇಲಿನ ಭಾವನೆಯನ್ನೇ ಪುಷ್ಟೀಕರಿಸುತ್ತದೆ.

ಯಸ್ಮೈ ವರಂ ವಿಷ್ಣುರದಾತ್ಸುರಾಹಂ
ಸ್ತುತಸ್ತವಸ್ಯಾಮಿತಿ ಯಾ ವಸೋಃ ಸುತಾ ।
ಜಾತಾ ಪುನರ್ದಾಶಗೃಹೇ ವಿವರ್ಧಿಲಾ
ವ್ಯಾಸಾತ್ಮನಾ ವಿಷ್ಣುರಭೂಚ್ಚ ಯಸ್ಯಾಮ್ ॥೭೪॥

ತದ್ದರ್ಶನಾನ್ನೃ ಪತಿರ್ಜಾತ ಹೃಚ್ಛ್ರಯೋ
ವವ್ರೇ ಪ್ರದಾನಾಯ ಚ ದಾಶರಾಜಮ್ ।
ಋತೇ ಸ ತಸ್ಯಾಸ್ತನಯಸ್ಯ ರಾಜ್ಯಂ
ನೈಚ್ಛದ್ದಾತುಂ ತಾಮಥಾಯಾದ್ಗೃಹಂ ಸ್ವಮ್ ॥೭೫॥

ಆ "ಸತಿ"ಯು ತಪಸ್ಸಿಗೆ ಮೆಚ್ಚಿ, ವಿಷ್ಣುವು, "ನಾನೇ ನಿನಗೆ ಮಗನಾಗುವೆನು" ಎಂದು ಮೊದಲೇ ಅವಳಿಗೆ ವರಕೊಟ್ಟಿದ್ದನು. ಅವಳೇ ಈಗ ವಸುರಾಜನಿಗೆ ಹುಟ್ಟಿದರೂ ದಾಶರಾಜನ ಮನೆಯಲ್ಲಿ ಬೆಳೆಯುತ್ತಿದ್ದಳು. ಅವಳಲ್ಲಿಯೇ ಇಂದು ವಿಷ್ಣುವು 'ವ್ಯಾಸನಾಗಿ' ಪ್ರಕಟನಾದನು.

ಆಕೆಯನ್ನು ನೋಡಿದ ಕೂಡಲೇ, ತಾನು ಆಕೆಗೆ ಪತಿಯಾಗಬೇಕೆಂದು ಇಚ್ಛಿಸಿ, ಮನದಿಂದ ಮೆಚ್ಚಿ ಆಕೆಯನ್ನು ಮದುವೆ ಮಾಡಿಕೊಡಬೇಕೆಂದು ದಾಶರಾಜನಿಗೆ ಕೇಳಿದನು. ಅವಳ ಮಗನಿಗೆ ರಾಜನು ರಾಜ್ಯವನ್ನು ಕೊಡಲಿಕ್ಕಿಲ್ಲ ಎಂದು ತಿಳಿದು, ದಾಶರಾಜನು ಮಗಳನ್ನು ಕೊಡಲು ಒಪ್ಪಲಿಲ್ಲ. ಅವನ ಇಂಗಿತವನ್ನು ತಿಳಿದು ಶಂತನು ಮನೆಗೆ ಬಂದನು.

ತಚ್ಚಿಂತಯಾ ಮ್ಲಾ(ಗ್ಲಾ)ನ ಮುಖಂ ಜನಿತ್ರಂ
ದೃಷ್ಟ್ವೈವ ದೇವವ್ರತ ಆಶ್ವಪೃಚ್ಛನ್ ।
ತತ್ಕಾರಣಂ ಸಾರಥಿಮಸ್ಯ ತಸ್ಮಾತ್
ಶ್ರುತ್ವಾಖಿಲಂ ದಾಶಗೃಹಂ ಜಗಾಮ ॥೭೬॥

ತಂದೆಯನ್ನು ಕಂಡಕೂಡಲೇ, ಚಿಂತೆಯಿಂದ ಆತನ ಮುಖ ಬಾಡಿರುವುದನ್ನು ದೇವವ್ರತನು ಗ್ರಹಿಸಿದನು. ಅದರ ಕಾರಣವನ್ನು

ಸಾರಥಿಯಿಂದ ತಿಳಿದುಕೊಂಡನು. ಎಲ್ಲವನ್ನು ಕೇಳಿ ದೇವವ್ರತನು ದಾಶರಾಜನ ಮನೆಗೆ ನಡೆದನು.

ಸ ತಸ್ಯ ವಿಶ್ವಾಸ ಕೃತೇ ಪ್ರತಿಜ್ಞಾಂ
ಚಕಾರ ನಾಹಂ ಕರವಾಣಿ ರಾಜ್ಯಮ್ ।
ತಥೈವ ಮೇ ಸಂತತಿತೋ ಭಯಂ ತೇ
ವ್ಯತೂರ್ಧ್ವರೇತಾಃ ಸತತಂ ಭವಾಮಿ ॥೭೭॥

ಆ ದೇವವ್ರತನು ದಾಶರಾಜನಿಗೆ ವಿಶ್ವಾಸ ಹುಟ್ಟಿಸುವುದಕ್ಕಾಗಿ "ನಾನು ರಾಜ್ಯವನ್ನು ಆಳುವುದಿಲ್ಲ. ನನ್ನ ಸಂತತಿಯಿಂದ ನಿನಗೆ ಭಯವಿದ್ದರೆ, ನಾನು ಆಜೀವಪರ್ಯಂತ ಊರ್ಧ್ವರೇತಸ್ಸನಾಗಿ ಬಾಳುತ್ತೇನೆ" "ನನ್ನ ಸಂಪೂರ್ಣ ಜೀವನ ಬ್ರಹ್ಮಚಾರಿಯಾಗಿರುತ್ತೇನೆ" ಎಂದು ಪ್ರತಿಜ್ಞೆ ಮಾಡಿದನು.

ಭೀಮವ್ರತತ್ವಧ್ಧಿ ತದಾಸ್ಯ ನಾಮ
ಕೃತ್ವಾ ದೇವ 'ಭೀಷ್ಮ' ಇತಿ ಹ್ಯಚೀಕ್ಲೃಪನ್ ।
ಪ್ರಸೂನ ವೃಷ್ಟಿಂ ಸ ಚ ದಾಶದತ್ತಾಂ
ಕಾಲೀಂ ಸಮಾದಾಯ ಪಿತುಃ ಸಮರ್ಪಯನ್ ॥೭೮॥

ದೇವವ್ರತನು 'ಭೀಮವ್ರತ' ಭೀಕರ ಮತ್ತು ಕಠಿಣವಾದ ವ್ರತ ಕೈಕೊಂಡು ಪ್ರತಿಜ್ಞೆ ಮಾಡಿದ ಪ್ರಯುಕ್ತ, ದೇವತೆಗಳು ಅವನಿಗೆ 'ಭೀಷ್ಮ' ಎಂದೇ ನಾಮಕರಣ ಮಾಡಿ ಸಂತೋಷದಿಂದ ಆಶೀರ್ವದಿಸಿ ಪುಷ್ಪವೃಷ್ಟಿಯನ್ನು ಗೈದರು. ಭೀಷ್ಮನು ದಾಶರಾಜನಿತ್ತ 'ಕಾಲೀ' ಎಂಬ ಕನ್ಯೆಯನ್ನು ತಂದು ತಂದೆಗೆ ಸಮರ್ಪಿಸಿದನು.

ವಿ.ವಿ. ಭಾಗವತದಲ್ಲಿ ಮಕ್ಕಳು ಹೇಗಿರಬೇಕು? ಎಂದು ಒಂದು ಪ್ರಸಂಗ ಬಂದಿದೆ. ಅದು ಇಂತಿದೆ.

೧. ತಂದೆಯು ಹೇಳದೇ ಇದ್ದರೂ, ಆತನ ಇಂಗಿತವನ್ನು ಅರಿತು ಯಾವ ಮಗನು, ಕೆಲಸ ಮಾಡುವನೋ ಅವನು 'ಉತ್ತಮ'ನು.

೨. ಹೇಳಿಸಿಕೊಂಡು ಕೆಲಸಮಾಡುವವನು 'ಮಧ್ಯಮ'ನು.

೩. ಹೇಳಿದ ಮೇಲೆ ಸಿಟ್ಟಿನಿಂದ ಬಡಬಡಿಸಿ ಯಾವನು ಮಾಡುವನೋ ಅವನು 'ಅಧಮ'ನು.

೪. ಹೇಳಿದ ಮೇಲೂ ಮಾಡದೆ ಇರುವವನು 'ಅಧಮಾಧಮ'ನು. ಇಂತಹ ಮಕ್ಕಳು ಹುಟ್ಟುವುದೆಂದರೆ ದೇಹದ, ಮಲವಿಸರ್ಜನೆಯೇ ಸರಿ ಎಂದಿದ್ದಾರೆ. ಆದರೆ 'ಭೀಷ್ಮ'ನು ಉತ್ತಮ ಮಗನೆಂದು ಬೇರೆ ಹೇಳಬೇಕೇ?

ಬೆಸ್ತರ ಕನ್ಯೆಯನ್ನು ರಾಜನು ತರಬಹುದೇ?

ಅದಕ್ಕೆ ಆಚಾರ್ಯರ ಉತ್ತರ ಸಿದ್ಧವಾಗಿಯೇ ಇದೆ.

**ಜ್ಞಾತ್ವಾತು ತಾಂ ರಾಜಪುತ್ರೀಂ ಗುಣಾಢ್ಯಾಂ**
**ಸತ್ಯಸ್ಯ ವಿಷ್ಣೋರ್ಮಾತರಂ ನಾಮ ತಸ್ತತ್ ।**
**ಲೋಕೇ ಪ್ರಸಿದ್ಧಾಂ ಸತ್ಯವತೀತ್ಯದಾರಾಂ**
**ವಿವಾಹಯಾಮಾಸ ಪಿತುಃ ಸ ಭೀಷ್ಮಃ ॥೭೯॥**

ಭೀಷ್ಮರು ಸಾಮಾನ್ಯರಲ್ಲ; ಮಹಾಜ್ಞಾನಿಗಳು. ಅವಳು ರಾಜಪುತ್ರಿ (ವಸುರಾಜನ ಮಗಳು) ಒಳ್ಳೆ ಗುಣವತಿಯೂ ಆಹುದು. ಸತ್ಯ ರೂಪನಾದ ಪರಮಾತ್ಮನನ್ನು ಹಡೆದ ಮಹಾತಾಯಿ ಎಂದು ತಿಳಿದೇ ಭೀಷ್ಮರು ಆಕೆಯನ್ನು ಕರೆದು ತಂದು ತಂದೆಗೆ ಮದುವೆಯನ್ನು ಮಾಡಿದರು.

'ಸತ್ಯ'ನನ್ನು ಹೆತ್ತ ನಿಮಿತ್ತ ಆಕೆ 'ಸತ್ಯವತೀ' ಎಂದೇ ಪ್ರಸಿದ್ಧಳಾದಳು. ಆದರೂ ಆಕೆಗೆ, ಮತ್ಸ್ಯಗಂಧಿ, ಕಾಳಿ ಹೀಗೆ ಬೇರೆ ಹೆಸರುಗಳೂ ಉಂಟು.

ಶಂತನು ಆಕೆಯನ್ನು ಸ್ವೀಕರಿಸಿದನೇ?

**ಪ್ರಾಯಃ ಸತಾಂ ನ ಮನಃ ಪಾಪಮಾರ್ಗೇ**
**ಗಚ್ಛೇದಿತಿ ಜ್ಞಾತ್ವಾ ಮನಶ್ಚ ಸತ್ತಮ್ ।**
**ಜ್ಞಾತ್ವಾಪಿ ತಾಂ ದಾಶಗೃಹೇ ವವರ್ಧಿತಾಂ**
**ಜಗ್ರಾಹ ಸದ್ಧರ್ಮರತಶ್ಚ ಶಂತನುಃ ॥೮೦॥**

'ಪ್ರಾಯಃ ಸಜ್ಜನರ ಮನಸ್ಸು ಎಂದೂ ಪಾಪಮಾರ್ಗದಲ್ಲಿ ಹೋಗುವುದಿಲ್ಲ ಎಂಬುದನ್ನು ಶಂತನು ಚೆನ್ನಾಗಿ ಅರಿತಿದ್ದನು. ಮನಸ್ಸು ಅವಳಲ್ಲಿ ಆಸಕ್ತವಾಗಿದೆ. ಅಂತೆಯೇ ಅವಳು ದಾಶರಾಯನ ಮನೆಯಲ್ಲಿ ಬೆಳೆದಿದ್ದಾಳೆಂದು ಗೊತ್ತಿದ್ದೂ ಆಕೆಯನ್ನು ಧರ್ಮಪತ್ನಿಯನ್ನಾಗಿ ಸ್ವೀಕರಿಸಿದನು.

ಕಾಳಿದಾಸನು ಕೂಡ 'ಶಾಕುಂತಲ'ದಲ್ಲಿ ದುಷ್ಯಂತನಿಂದ ಇದೇ ಮಾತನ್ನು ಆಡಿಸಿದ್ದಾನೆ. ಬಲ್ಲವರು ತಿಳಿದಿರಲಿಕ್ಕೆ ಸಾಕು.

**ಸ್ವಚ್ಛಂದ ಮೃತ್ಯುತ್ವವರಂ ಪ್ರದಾಯ**
**ತಥಾ ಪ್ಯಜೇಯತ್ವಮಧೃಷ್ಯ ತಾಂ ಚ ।**
**ಯುದ್ಧೇಷು ಭೀಷ್ಮಸ್ಯ ನೃಪೋತ್ತಮಃ ಸ**
**ರೇಮೇ ತಥೈ (ಯೈ) ವಾಬ್ದಗಣಾನ್ ಬಹೂಂಶ್ಚ ॥೮೧॥**

ತಂದೆಯಾದ ಶಂತನು ಮಗನ ತ್ಯಾಗಕ್ಕೆ ಮೆಚ್ಚಿ, 'ಭೀಷ್ಮರಿಗೆ' ಸ್ವೇಚ್ಛಾಮರಣ, ಅಜೇಯತ್ವ ಅಷ್ಟೇ ಅಲ್ಲ ಯುದ್ಧದಲ್ಲಿ ಇತರ ರಾಜರಿಂದಾಗಲಿ, ದೇವತೆಗಳಿಂದಾಗಲಿ, ಸೆರೆಯಾಳಾಗದಿರುವುದು. ಈ ಮೂರೂ ವರಗಳನ್ನು ಕೊಟ್ಟನು. ಸತಿಯಾದ ಸತ್ಯವತಿಯೊಡನೆ ಬಹುಕಾಲ ಸುಖದಿಂದ ಇದ್ದನು.

ಇಂತಹ ವರಗಳನ್ನು ಕೊಡಬೇಕಾದರೆ ಸಾಮಾನ್ಯರಿಗೆ ಸಾಧ್ಯವೇ? ಅಂತೆಯೇ ಅವನ ಮನಸ್ಸು ಸನ್ಮಾರ್ಗವನ್ನು ಬಿಟ್ಟು ನಡೆದಿರಲಿಲ್ಲ.

ಮೇಲಿನ ಮೂರು ವರಗಳ ಪ್ರಭಾವವನ್ನು, ಭೀಷ್ಮರ ಯುದ್ಧಭೂಮಿಯಲ್ಲಿ ನಾವು ಕಾಣಬಹುದು. ಭೀಷ್ಮರಿಗೆ ಯಾರಿಂದಲೂ ಯುದ್ಧದಲ್ಲಿ ಸೋಲು ಉಂಟಾಗಲಿಲ್ಲ. ಇನ್ನೊಬ್ಬರಿಂದ ಹಿಡಿಯಲ್ಪಡಲಿಲ್ಲ. ಉತ್ತರಾಯಣ ಬರುವವರೆಗೆ ಕಾದು ಪ್ರಾಣಬಿಟ್ಟರು.

**ಲೇಭೇ ಸ ಚಿತ್ರಾಂಗದಮತ್ರ ಪುತ್ರಂ**
**ತಥಾ ದ್ವಿತೀಯಂ ಚ ವಿಚಿತ್ರವೀರ್ಯಮ್ ।**
**ತಯೋಶ್ಚ ಬಾಲ್ಯೇ ವ್ಯಸೃಜ (ಧುನೋ)ಚ್ಛರೀರಂ**
**ಜೀರ್ಣೇನ ದೇಹೇನ ಚ(ಹಿ) ಕಿಂ ಮಮೇತಿ ॥೮೨॥**

ಶಂತನು, ಸತ್ಯವತಿಯಲ್ಲಿ 'ಚಿತ್ರಾಂಗದ' ಎಂಬ ಚೊಚ್ಚಲ ಮಗನನ್ನು, ಎರಡನೆಯವನಾಗಿ 'ವಿಚಿತ್ರವೀರ್ಯ' ಎಂಬ ಇಬ್ಬರು ಮಕ್ಕಳನ್ನು ಪಡೆದನು. ಅವರಿನ್ನೂ ಬಾಲಕರಿರುವಾಗಲೇ ಶಂತನು ತನ್ನ ಈ ಜೀರ್ಣಶರೀರದಿಂದ ಏನು ಪ್ರಯೋಜನ ಎಂದು ಯೋಗದಿಂದ ದೇಹವನ್ನು ತ್ಯಜಿಸಿದನು.

ವಿ.ವಿ. ಇತರರಿಗೆ ಸ್ವೇಚ್ಛಾಮರಣ ಶಕ್ತಿಯನ್ನು ಕೊಡುವವನಲ್ಲಿ ಯೋಗ ಸಾಮರ್ಥ್ಯವಿದ್ದಿತು ಎಂಬುದು ಏನಾಶ್ಚರ್ಯ.

**ಸ್ವೇಚ್ಛಯಾ ಪರುಣತ್ವಂ ಸ ಪ್ರಾಪ ನಾನಿಚ್ಛಯಾ ತನುಃ ।**
**ತಸ್ಮಿನ್ ಕಾಲೇ ತ್ಯಜ್ಯತೇ ಹಿ ಬಲವದ್ಭಿರ್ವಧಂ ವಿನಾ ॥೮೩॥**

ಅವನು ವರುಣತ್ವವನ್ನು ತನ್ನ ಇಚ್ಛೆಯಿಂದಲೇ ಪಡೆದನು. ಇಚ್ಛೆಯಿಲ್ಲದೆ ದೇಹಬಿಡಲಿಲ್ಲ. ತಾನು ಇಚ್ಛಿಸಿದ ಕಾಲಕ್ಕೆ ಸರಿಯಾಗಿ ಅವನು ತನ್ನ ದೇಹವನ್ನು ತ್ಯಜಿಸಬಲ್ಲವನಾಗಿದ್ದನು. ತನಗಿಂತ ಅಧಿಕ ಬಲವಂತರಿಂದ ಹತನಾಗದೆ ಇದ್ದಾಗ ಮಾತ್ರ ಇದು ಸಾಧ್ಯ.

ವಿ.ವಿ. ಇಂತಹ ಶಕ್ತಿಯನ್ನು ಯೋಗಬಲದಿಂದ ಸಾಧಿಸಬಹುದು.

**ಅತಿಸಕ್ತಾಸ್ತಪೋಹೀನಾಃ ಕಥಂ ಚಿನ್ಮೃತಿ ಮಾಪ್ನು ಯುಃ ।**
**ಅನಿಚ್ಛಯಾಪಿ ಹಿ ಯಥಾ ಮೃತಶ್ಚಿತ್ರಾಂಗದಾನುಜಮ್॥೮೪॥**

ವಿಷಯಗಳಲ್ಲಿ ಹೆಚ್ಚು ಆಸಕ್ತನಾದವನು, ತಪೋಹೀನನು ಆದ ವ್ಯಕ್ತಿಗೆ ಇಚ್ಛೆಯಿಲ್ಲದಿದ್ದರೂ ಮೃತ್ಯು ಬಂದೇ ಬಿಡುತ್ತದೆ. ಅದಕ್ಕೆ ಚಿತ್ರಾಂಗದನ ತಮ್ಮ ವಿಚಿತ್ರವೀರ್ಯನೇ ಸಾಕ್ಷಿ.

**ಅಥೌರ್ಧ್ವದೈಹಿಕಂ ಕೃತ್ವಾ ಪಿತುರ್ಭೀಷ್ಮೋಽಭ್ಯಷೇಚಯತ್ ।**
**ರಾಜ್ಯೇ ಚಿತ್ರಾಂಗದಂ ವೀರಂ ಯೌವರಾಜ್ಯೇಽಸ್ಯಚಾನುಜಮ್॥೮೫॥**

ತಂದೆಯ ದೈಹಿಕ ಸಂಸ್ಕಾರ ಮತ್ತು ಪಿತೃಕಾರ್ಯಗಳನ್ನು ಪೂರೈಸಿದ ನಂತರ ಭೀಷ್ಮರು ಚಿತ್ರಾಂಗದನಿಗೆ ಪಟ್ಟಾಭಿಷೇಕ ಮಾಡಿ, ಅವನ ತಮ್ಮನನ್ನು ಯುವರಾಜನನ್ನಾಗಿ ಮಾಡಿದರು.

ಚಿತ್ರಾಂಗದನ ಮರಣ.

**ಚಿತ್ರಾಂಗದೇನ ನಿಹತೋ ನಾಮ ಸ್ವಂ ತ್ವಪರಿತ್ಯಜನ್ ।**
**ಚಿತ್ರಾಂಗದೋಽಕೃತೋದ್ವಾಹೋ ಗಂಧರ್ವೇಣ ಮಹಾರಣೇ॥೮೬॥**

ಅವಿವಾಹಿತನಾದ ಚಿತ್ರಾಂಗದನು, ತನ್ನ ಹೆಸರು (ಚಿತ್ರಾಂಗದ) ಎಂಬುದನ್ನು ತ್ಯಜಿಸಲು ನಿರಾಕರಿಸಿದುದಕ್ಕಾಗಿ, ಇನ್ನೊಬ್ಬ 'ಚಿತ್ರಾಂಗದ' ಎಂಬ ಗಂಧರ್ವನಿಂದ ವಧಿಸಲ್ಪಟ್ಟನು.

ವಿ.ವಿ. ಚಿತ್ರಾಂಗದ ಎಂಬ ಗಂಧರ್ವನಿಗೆ, ತನ್ನ ಹೆಸರು ಇನ್ನೊಬ್ಬರಿಗೆ ಇರಬಾರದೆಂಬ ಹಟ. ಶಂತನ ಮಗನಿಗೆ ತನ್ನ ಹೆಸರನ್ನು ಬಿಡಬಾರದೆಂಬ ಛಲ. ಹೀಗಾಗಿ ಅವರಿಬ್ಬರಲ್ಲಿ ಯುದ್ಧ ಆಯಿತು. ಅದರಲ್ಲಿ ಚಿತ್ರಾಂಗದನು ಹತನಾದನು.

ವಿಚಿತ್ರವೀರ್ಯನ ಮದುವೆ

**ವಿಚಿತ್ರವೀರ್ಯಂ ರಾಜಾನಂ ಕೃತ್ವಾಭೀಷ್ಮೋಽನ್ವಪಾಲಯತ್**
**ಅಥ ಕಾಶೀತಸ್ತಿಸ್ರಸ್ತದರ್ಥಂ ಭೀಷ್ಮ ಆಹರತ್।**
**ಅಂಬಾಮಪ್ಯಂಬಿಕಾನಾಮ್ನೀಂ ತಥೈವಾಂಬಾಲಿಕಾಂ ಪರಾಮ್॥೮೭॥**
**ಪಾಣಿಗ್ರಹಣಕಾಲೇ ತು ಬ್ರಹ್ಮದತ್ತಸ್ಯ ವೀರ್ಯವಾನ್ ।**
**ವಿಜಿತ್ಯ ತಂ ಸಾಲ್ವರಾಜಂ ಸಮೇತಾನ್ ಕ್ಷತ್ರಿಯಾನಪಿ ॥೮೮॥**

ವಿಚಿತ್ರವೀರ್ಯನನ್ನು ರಾಜನನ್ನಾಗಿ ಮಾಡಿ, ಭೀಷ್ಮನು ತಾನೇ ರಾಜ್ಯವನ್ನು ಪರಿಪಾಲಿಸುತ್ತಿದ್ದನು. ಕಾಶೀ ರಾಜನ ಮಕ್ಕಳಾದ ಅಂಬಾ, ಅಂಬಿಕಾ ಮತ್ತು ಅಂಬಾಲಿಕಾ ಇವರನ್ನು ತರುವುದಕ್ಕಾಗಿ ಭೀಷ್ಮನು ಕಾಶಿಗೆ ಬಂದನು.

ಅಲ್ಲಿ ಬಲಶಾಲಿಯಾದ ಬ್ರಹ್ಮದತ್ತನ ಮಕ್ಕಳಾದ ಅವರ ವಿವಾಹ ನಡೆದಿತ್ತು. ಭೀಷ್ಮನು ಬಂದವನೇ ಬ್ರಹ್ಮದತ್ತನನ್ನು, ಸಾಲ್ವರಾಜನನ್ನು ಅಲ್ಲದೆ ಅಲ್ಲಿದ್ದ ಇತರ ಕ್ಷತ್ರಿಯರನ್ನು ಗೆದ್ದು ಆ ಕನ್ಯೆಯರನ್ನು ತೆಗೆದುಕೊಂಡು ಬಂದನು. (ಇದು ಆಗಿನ ಕಾಲದಲ್ಲಿ ರೂಢಿಯಿದ್ದ ಪದ್ಧತಿ) ಇದನ್ನೇ 'ರಾಕ್ಷಸ ವಿವಾಹ' ಎಂದು ಕರೆದರು.

**ಅಂಬಿಕಾಂಬಾಲಿಕೇ ತತ್ರ ಸಂಪಾದಂ ಚಕ್ರತುಃ ಶುಭೇ ।**
**ಅಂಬಾ ಸಾ ಭೀಷ್ಮ ಭಾರ್ಯೈವ ಪೂರ್ವದೇಹೇ**
**ತು ನೈಋತ ॥೮೯॥**

ಅಂಬಿಕಾ, ಅಂಬಾಲಿಕ, ಅವರಿಬ್ಬರು ಅಲ್ಲಿ ಮದುವೆಯಾಗಲು ಒಪ್ಪಿಕೊಂಡರು. ಆದರೆ 'ಅಂಬಾ' ಅವಳು ಮೂಲದಲ್ಲಿ ಭೀಷ್ಮರ ನಿಯತ ಪತ್ನಿಯಾದುದರಿಂದ ಸಂಬಂಧಕ್ಕೆ ಒಪ್ಪಲಿಲ್ಲ.

**ಶಾಪಾದ್ಧಿರಣ್ಯಗರ್ಭಸ್ಯ ಸಾಲ್ವಕಾ ಮೋಹ ಮಿತ್ಯಪಿ ।**
**ಉವಾಚ ತಾಂ ಸ ತತ್ಯಾಜ ಸಾಗಮತ್ ಸಾಲ್ವಮೇವ ಚ ॥೯೦॥**

'ಪತಿ ರಹಿತಳಾಗಿರು' ಎಂದು ಬ್ರಹ್ಮನ ಶಾಪವಿದ್ದುರಿಂದ, ನಾ 'ಸಾಲ್ವರಾಜನನ್ನು ಮೆಚ್ಚಿದ್ದೇನೆ' ಎಂದು ನುಡಿದಳು. ಅವಳು ಅಲ್ಲಿಂದ ಬಿಡಲ್ಪಟ್ಟವಳಾಗಿ ಸಾಲ್ವರಾಜನಲ್ಲಿಗೆ ಬಂದಳು.

**ತೇನಾಪಿ ಸಂಪರಿತ್ಯಕ್ತಾ ಪರಾಮೃಷ್ಟೇತಿ ಸಾ ಪುನಃ ।**
**ಭೀಷ್ಮ ಮಾಪ ಸ ನೋಽಗೃಹ್ಣತ್ ಪ್ರಯಯೌ ಸಾಪಿ**
**ಭಾರ್ಗವಮ್ ॥೯೧॥**

'ಪರ ಪುರುಷನ ಸ್ಪರ್ಶವಾದವಳು' ಎಂದು ಸಾಲ್ವರಾಜನು ತಿರಸ್ಕರಿಸಿದನು. ಆಕೆ ಪುನಃ ಭೀಷ್ಮರ ಹತ್ತಿರ ಬಂದಳು. ಅವರೂ ಪರಿಗ್ರಹಿಸಲಿಲ್ಲ. ಕಾರಣ ಆಕೆ ಭಾರ್ಗವರಾಮನ ಹತ್ತಿರ ಬಂದಳು.

**ಭ್ರಾತುರ್ವಿವಾಹಯಾಮಾಸ ಸೋಽವಾಹಯಾಮಾಸ ಸೋಽ**
**ಬಿಕಾಂಬಾಲಿಕೇ ತತಃ**
**ಭೀಷ್ಮಾಯ ತು ಯಶೋದಾತುಂ ಯುಯುಧೇ ತೇನ**
**ಭಾರ್ಗವಃ ॥೯೨॥**

ಭೀಷ್ಮರು, ಅಂಬಿಕಾ, ಅಂಬಾಲಿಕಾ ಅವರೊಡನೆ ತಮ್ಮನ ಮದುವೆಯನ್ನು ಮಾಡಿದರು. ಭೀಷ್ಮರಿಗೆ ಕೀರ್ತಿಯನ್ನು ತಂದು ಕೊಡುವುದಕ್ಕಾಗಿಯೇ ಭಾರ್ಗವ ರಾಮರು ಆತನೊಡನೆ ಯುದ್ಧ ಮಾಡಿದರು.

ವಿ.ವಿ. ಇಲ್ಲಿ ಆಚಾರ್ಯರು ಅಂಬಾ ಮತ್ತು ಭೀಷ್ಮರ ಘರ್ಷಣೆಯನ್ನಾಗಲಿ, ಅಂಬಾ ಮತ್ತು ಪರಶುರಾಮರ ಸಂಭಾಷನೆಯನ್ನಾಗಲಿ ವಿವರಿಸಲು ಹೋಗಿಲ್ಲ. ಕೇವಲ ಪರಿಣಾಮವನ್ನು ಮಾತ್ರ ಮೇಲಿನ ಶ್ಲೋಕದಲ್ಲಿ ಎತ್ತಿ ತೋರಿದ್ದಾರೆ. ಅಂದರೆ ಅಗತ್ಯವಾದುದನ್ನು ಹೇಳುವುದು, ಅನಗತ್ಯವಾದುದನ್ನು ತ್ಯಜಿಸುವುದೇ ಅವರ ಮುಖ್ಯ ಉದ್ದೇಶ - ಇದುವೇ ಆಚಾರ್ಯರ ಶೈಲಿಯ ವೈಶಿಷ್ಟ್ಯ.

**ಅನಂತ ಶಕ್ತಿರಪಿ ಸನ್ನ (ಸನ) ಭೀಷ್ಮಂ ನಿಜಘಾನ ಹ ।**
**ನ ಚಾಂಬಾಂ ಗ್ರಾಹಯೊ ಮಾಸ ಭೀಷ್ಮ ಕಾರುಣ್ಯ**
**ಯಂತ್ರಿತ ॥೯೩॥**

ಪರಶುರಾಮರು ಅನಂತ ಶಕ್ತಿಯುಳ್ಳವರು. ಆದರೂ ಅವರು ಭೀಷ್ಮರ ಮೇಲಿನ ಕರುಣೆಯಿಂದ, ಭೀಷ್ಮರನ್ನು ಕೊಲ್ಲಲೂ ಇಲ್ಲ. ಅಲ್ಲದೆ ಅಂಬೆಯನ್ನು ಸ್ವೀಕರಿಸಲು ಒತ್ತಾಯವೂ ಮಾಡಲಿಲ್ಲ.

ಪರಮಾತ್ಮನ ಮಹಿಮೆ

**ಅನಂತಶಕ್ತಿಃ ಸಕಲಾಂತರಾತ್ಮಾ**
**ಯಃ ಸರ್ವವಿತ್ ಸರ್ವವಶೀ ಚ ಸರ್ವಜಿತ್ ।**
**ನ ಯತ್ಸಮೋಽನ್ಯೋಽಸ್ತಿ ಕಥಂ ಚ ಕುತ್ರಚಿತ್**
**ಕಥಂ ಹ್ಯಶಕ್ತಿಃ ಪರಮಸ್ಯ ತಸ್ಯ ॥೯೪॥**

ಪರಮಾತ್ಮನು ಅನಂತ ಶಕ್ತಿಯುಳ್ಳವನು. ಸಕಲರಲ್ಲಿಯೂ ಅಂತರಾತ್ಮನಾಗಿದ್ದಾನೆ. ಆತನು ಎಲ್ಲವನ್ನು ಬಲ್ಲವನಾಗಿದ್ದಾನೆ. ಸರ್ವವು ಆತನ ಅಧೀನದಲ್ಲಿದೆ. ಅಲ್ಲದೆ ಸರ್ವರನ್ನು ಗೆಲ್ಲತಕ್ಕವನು ಕೂಡ. ಆತನಿಗೆ ಸಮನಾದವರು ಯಾರೂ, ಎಲ್ಲೆಲ್ಲಿಯೂ ಇಲ್ಲ. ಪರಮಾತ್ಮನಲ್ಲಿರುವಂಥ ಶಕ್ತಿ ಎಲ್ಲಿದೆ? ಯಾರಲ್ಲಿದೆ?

ಇದನ್ನೇ ಇನ್ನೊಂದು ರೀತಿಯಿಂದ,

**ಪರಾಸ್ಯ ಶಕ್ತಿರ್ವಿ ವಿಧೈವ ಶ್ರೂಯತೇ। ಸ್ವಾಭಾವಕೀ ಜ್ಞಾನ ಬಲಕ್ರಿಯಾ ಚ ॥**

ಇದು ಶ್ರುತಿ ವಾಕ್ಯವು. ಇದು ಮೇಲಿನ ಶ್ಲೋಕಕ್ಕೆ ಅರ್ಥವಿವರಿಸಿದೆ.

**ಭೀಷ್ಮಂ ಸ್ವಭಕ್ತಂ ಯಶಸಾಭಿಪೂರಯನ್**
**ವಿಮೋಹಯನ್ನ (ನ್ನಾ) ಸುರಾಂಶ್ಚೈವ ರಾಮಃ ।**
**ಜಫ್ನೈವ ಭೀಷ್ಮಂ ನ ಜಘಾನ ದೇವೋ**
**ನಾಚಂ ಚ ಸತ್ಯಾಮಕರೋತ್ ಸ ತಸ್ಯ ॥೯೫॥**

ವಿ.ವಿ. ಇದೇನು? ಪರಮಾತ್ಮನ ಮಹಿಮೆಯನ್ನು ವರ್ಣಿಸುತ್ತ ಆಚಾರ್ಯರು, ಪರಮಾತ್ಮನ ಶಕ್ತಿ ಅನಂತ ಮತ್ತು ಅಚಿಂತ್ಯ ಎಂದು ಹೇಳಿದ್ದಾರೆ. ಕೆಳಗಿನ ಶ್ಲೋಕದಲ್ಲಿಯೇ ಹೀಗೇಕೆ ಎಂಬ ಓದುಗರ ಶಂಕೆಗೆ ಊಹಿಸಿ ಆಚಾರ್ಯರು, "ಸ್ವಭಕ್ತಂ" ಎಂಬ ಪದ ಬಳಸಿ ಒತ್ತು ಕೊಟ್ಟಿದ್ದಾರೆ.

ಭೀಷ್ಮರು ಪರಮಾತ್ಮನಿಗೆ ಏಕಾಂತ ಭಕ್ತರು. ಪರಶುರಾಮನಿಗೆ ಸ್ವಭಕ್ತರು. ಭೀಷ್ಮರಿಗೆ ಪೂರ್ಣ ಯಶಸ್ಸು ಸಿಗಲಿ, ಅಸುರರಿಗೆ ಮೋಹವುಂಟಾಗಲಿ ಎನ್ನುವ ಉದ್ದೇಶಗಳಿಂದ ಪರಶುರಾಮರು ಭೀಷ್ಮರನ್ನು ಕೊಲ್ಲಲಿಲ್ಲ. ಅಷ್ಟೇ ಅಲ್ಲ. ಅವರನ್ನು ಗೆಲ್ಲಿಸಿಯೂ ಇದ್ದಾರೆ. ಇದರಿಂದ ಭೀಷ್ಮರು ಮಾಡಿದ ಪ್ರತಿಜ್ಞೆಗೆ ಇನ್ನೂ ಕೀರ್ತಿ ಹೆಚ್ಚಾಯಿತು. ಅವರ ಪ್ರತಿಜ್ಞೆ ಸತ್ಯವಾಯಿತು.

ವಿ.ವಿ. ಭೀಷ್ಮರು ಪರಶುರಾಮನೊಡನೆ ಯುದ್ಧ ಮಾಡಿದರೇ ವಿನಃ ತಮ್ಮ ಪ್ರತಿಜ್ಞೆಯನ್ನು ಕಡೆಗಣಿಸಲಿಲ್ಲ ಎಂಬ ಕೀರ್ತಿ ಭೀಷ್ಮರಿಗೆ ಲಭಿಸಿತು.

**ವಿದ್ಧವನ್ಮುಗ್ದ ವಚ್ಚೈವ ಕೇಶವೋ ವೇದನಾರ್ತವತ್**
**ದರ್ಶಯನ್ನಪಿ ಮೋಹಾಯ ನೈವ ವಿಷ್ಣುಸ್ತಥಾ ಭವೇತ್ ॥೯೬॥**

'ಯುದ್ಧದಲ್ಲಿ ಕೇಶವನು ಬಾಣಗಳಿಂದ ಹೊಡಿಸಿಕೊಂಡಿದ್ದಾನೆ.

ಅವುಗಳ ಪೆಟ್ಟಿನಿಂದ ನೊಂದಿದ್ದಾನೆ ಎಂಬಂತೆ ನಟಿಸಿದ್ದಾನೆ ವಿನಃ ವಿಷ್ಣುವಿಗೆ ಇವುಗಳಿಂದ ಏನೂ ಆಗಲಾರದು.

ವಿ.ವಿ. ಈ ಶ್ಲೋಕದಿಂದ ಶ್ರೀಮದಾಚಾರ್ಯರು ಸಾಮಾನ್ಯ ಜನರಲ್ಲಿ ಉಂಟಾಗುವ ತಪ್ಪು ಕಲ್ಪನೆಯನ್ನು ದೂರಮಾಡಿದ್ದಾರೆ.

ಈ ದೃಶ್ಯ ನಾಟಕದಿಂದ ಓದುಗರಲ್ಲಿ ಕೆಲವು ಪ್ರಶ್ನೆಗಳು ಏಳುವುದು ಸಹಜ. ಅವು ಇಂತಿವೆ.

೧. ಪರಶುರಾಮರು ಅಂಬೆಗೆ ಕೊಟ್ಟ ಮಾತನ್ನು ಪೂರೈಸಿದರೇ?

೨. ಶರಣಾಗತಳಾದ ಅಂಬೆಯನ್ನು ಪೊರೆದರೇ?

೩. ಪರಶುರಾಮರು ವಚನಭ್ರಷ್ಟರಾಗಲಿಲ್ಲವೇ?

೪. ಇದು ಮೋಸವಲ್ಲವೇ? ಇತ್ಯಾದಿ–

ಶ್ರೀಮದಾಚಾರ್ಯರು ಇವುಗಳನ್ನು ಊಹಿಸಿಯೇ ಮುಂದಿನ ಶ್ಲೋಕಗಳಲ್ಲಿ ಉತ್ತರಗಳನ್ನಿತ್ತಿದ್ದಾರೆ. ಓದುಗರು ಅದರತ್ತ ಗಮನಿಸಬೇಕು ಎಂದು ಲೇಖಕನ ವಿನಮ್ರ ವಿನಂತಿ.

**ಏವಮಾದಿ ಪುರಾಣೋಕ್ತ ವಾಕ್ಯಾದ್ರಾಮಃ ಸದಾಜಯೀ ।**
**ಯಶೋಭೀಷ್ಮಸ್ಯ ದತ್ವಾ ತು ಸೋಽಂಬಾಂ ಚ ಶರಣಾಗತಾಮ್ ॥೯೭॥**
**ಉನ್ಮುಚ್ಯ ಭರ್ತೃದ್ವೇಷೋತ್ಥ (ತ್ವಾತ್) ಪಾಪಾತ್ತೇ ನಾಶ್ವಯೋಜಯತ್ ।**
**ಅನಂತರಂ ಶಿಖಂಡಿತ್ವಾತ್ ತದಾ ಸಾ ಶಾಂಕರಂ ತಪ್ಯೆ: ॥೯೮॥**
**ಭೀಷ್ಮಸ್ಯ ನಿಧನಾರ್ಥಾಯ ಪುಂಸ್ತ್ವಾರ್ಥಚ ಚಕಾರ ಹ ।**
**ಭೀಷ್ಮೋ ಯಥಾ ತ್ವಾಂ ಗೃಹ್ಣೀ ಯಾತ್ತಥಾ ಕರ್ಯಾಮಿತೀರಿತಂ ।**
**ರಾಮೇಣ ಸತ್ಯಂ ತಚ್ಚಕ್ರೇ ಭೀಷ್ಮೇ ದೇಹಾಂತರಂಗತೇ ॥೯೯॥**

"ಏವಮಾದಿ----" ಎಂಬ ಪುರಾಣಗಳ ವಾಕ್ಯಗಳಂತೆ ಭಾರ್ಗವರಾಮರು ಯಾವಾಗಲೂ ಜಯಶಾಲಿಗಳೇ. ಆದರೆ, ಇಲ್ಲಿ ಹೀಗೆ ನಟಿಸಲಿಕ್ಕೆ ಎರಡು ಕಾರಣಗಳಿವೆ.

೧. ಭೀಷ್ಮರಿಗೆ ಕೀರ್ತಿ ಕೊಡಬೇಕು.

೨. ಶರಣಾಗತಳಾದ ಅಂಬೆಯನ್ನು ರಕ್ಷಿಸಬೇಕು.

ಮೇಲಿನ ಉದ್ದೇಶದಂತೆ ಭೀಷ್ಮರಿಗೆ ಕೀರ್ತಿ ದೊರೆಯಿತು ನಿಜ. ಇದರಿಂದ ಶರಣಾಗತಳಾದ ಅಂಬೆಯನ್ನು ರಕ್ಷಿಸಿದಂತಾಯಿತೇ? 'ಆಯಿತು'. ಈಗ ಪರಶುರಾಮರು ಭೀಷ್ಮರನ್ನು ಯುದ್ಧದಲ್ಲಿ ಕೊಂದಿದ್ದರೆ, ಪರಶುರಾಮರು ನಿಮಿತ್ತರಾದರೂ, ಕೊಂದ ಪಾಪ ಅಂಬೆಗೆ ಬರುತ್ತಿತ್ತು. ಅಂದರೆ ಅಂಬೆಯ ದೇಹ ಪಾಪದಿಂದ ರಕ್ಷಿತವಾಯಿತು.

ಮುಂದೆ ಅವಳು ಭೀಷ್ಮರನ್ನು ಕೊಲ್ಲುವುದಕ್ಕಾಗಿಯೇ ಶಂಕರನನ್ನು ಕುರಿತು ತಪಸ್ಸು ಮಾಡುತ್ತಾಳೆ. ಪುಂಸತ್ವವನ್ನು ಸಂಪಾದಿಸಿ ಶಿಖಂಡಿನಿಯಾಗುತ್ತಾಳೆ. ಆ ಶಿಖಂಡಿನಿಯೇ ಭೀಷ್ಮರ ಮರಣಕ್ಕೆ ಕಾರಣಳಾಗುತ್ತಾಳೆ. ಶಿಖಂಡಿನಿ ಮತ್ತು ಭೀಷ್ಮರು ತಮ್ಮ ಜನ್ಮಗಳ ನಿವೃತ್ತಿಯ ನಂತರ (ದ್ಯು ಮತ್ತು ವರಾಂಗಿ) ಒಂದಾಗುತ್ತಾರೆ. ಇದರಿಂದ ಇಲ್ಲಿ ಪರಶುರಾಮರು ಸತ್ಯವನ್ನೇ ನುಡಿದಿದ್ದಾರೆ. ಮೋಸಕ್ಕೆ ಆಸ್ಪದವೇ ಇಲ್ಲ. ಅಂತೆಯೇ ಪರಮಾತ್ಮನು ಸತ್ಯ ಸಂಕಲ್ಪನು. ಅದು ನಮಗೆ ತಿಳಿಯುವುದಿಲ್ಲ.

"ಇದೇ ಜನ್ಮಗಳಲ್ಲಿಯೇ ಈಗಲೇ ನಿಮ್ಮನ್ನು ಕೂಡಿಸುತ್ತೇನೆ" ಎಂದು ಹೇಳಿದ್ದರೆ ಮಾತ್ರ ಪರಶುರಾಮರು ವಚನಭ್ರಷ್ಟರು ಆಗಬಹುದಾಗಿದ್ದಿತು. ಅದಕ್ಕಾಗಿಯೇ ಆಚಾರ್ಯರು ಪದಗಳನ್ನು ಎಚ್ಚರದಿಂದ ಬಳಸಿದ್ದಾರೆ. ಅವುಗಳನ್ನು ಗಮನಿಸಬೇಕಾಗಿ ವಿನಂತಿ–

ರುದ್ರಸ್ತು ತಸ್ಯಾಸ್ತಪಸಾ ತುಷ್ಟಃ ಪ್ರದಾದ್ವರಂ ತದಾ ।
ಭೀಷ್ಮಸ್ಯ ಮೃತಿ–ಹೇತುತ್ವಂ ಕಾಲಾತ್ಪುದೇಹ ಸಂಭವಮಾ ॥೧೦೦॥

ರುದ್ರದೇವರು ಅವಳ ತಪಸ್ಸಿಗೆ ಸಂತುಷ್ಟರಾದರು. "ಭೀಷ್ಮರ ಮೃತ್ಯುವಿಗಾಗಿಯೇ ಕಾಲಾಂತರದಲ್ಲಿ ನಿನಗೆ ಪುರುಷದೇಹ ಲಭಿಸುತ್ತದೆ" ಎಂದು ವರವನ್ನು ಪ್ರದಾನಮಾಡಿದರು.

ಮಾಲಾಂ ಚ ಯ ಇಮಾಂ ಮಾಲಾಂ ಗೃಹ್ಣೀಯಾತ್ಸ
ಹನಿಷ್ಯತಿ ।
ಭೀಷ್ಮ ಮಿತ್ಯೇವ ತಾಂ ಮಾಲಾಂ ಗೃಹೀತ್ವಾ
ಸಾ ನೃಪಾನ್ಯಯೌ ॥೧೦೧॥

ರುದ್ರದೇವರು ಜೊತೆಯಲ್ಲಿಯೇ ಒಂದು ಮಾಲೆಯನ್ನು ಕೊಟ್ಟರು. "ಈ ಮಾಲೆಯನ್ನು ಯಾರು ಧರಿಸುವರೋ ಅವರು ಭೀಷ್ಮರನ್ನು ಕೊಲ್ಲುತ್ತಾರೆ" ಎಂದು ಹೇಳಿದರು. ಭೀಷ್ಮರ ಹನನಕ್ಕಾಗಿಯೇ ಅವಳು ಆ ಮಾಲೆಯನ್ನು ತೆಗೆದುಕೊಂಡು, ಅನೇಕ ರಾಜರನ್ನು ಕೇಳುತ್ತ ನಡೆದಳು.

**ತಾಂ ನ ಭೀಷ್ಮಭಯಾತ್ಕೇಽಪಿ ಜಗೃಹುಸ್ತಾಂ ಹಿ ಸಾತತ: ।**
**ದ್ರುಪದಸ್ಯ ಗೃಹದ್ವಾರಿ ನ್ಯಸ್ಯ ಯೋಗಾತ್ತನುಂ ಜಹೌ ॥೧೦೨॥**

ಭೀಷ್ಮರ ಭಯದಿಂದ ಯಾರೂ ಆ ಮಾಲೆಯನ್ನು ಸ್ವೀಕರಿಸಲಿಲ್ಲ. ಆಗ ಅವಳು ಅದನ್ನು ತೆಗೆದುಕೊಂಡು ಬಂದು ದ್ರುಪದ ರಾಜನ ಮನೆಯ ಬಾಗಿಲಲ್ಲಿಟ್ಟು, ಯೋಗದಿಂದ ತನ್ನ ಶರೀರವನ್ನು ತ್ಯಜಿಸಿದಳು.

ಶಿಖಂಡಿಯ ಉತ್ಪತ್ತಿ

**ಏತಸ್ಮಿನ್ನೇವ ಕಾಲೇ ತು ಸುತಾರ್ಥಂ ದ್ರುಪದಸ್ತಪ: ।**
**ಚಕಾರ ಶಂಭವೇ ಚೈನಂ ಸೋಽಬ್ರವೀತ್ಕನ್ಯಕಾ ತವ ॥೧೦೩॥**
**ಭೂತ್ವಾ ಭವಿಷ್ಯತಿ ಪುಮಾನಿತಿ ಸಾಂಬಾ ತತೋಽಜನಿ ॥**
**ನಾಮ್ನಾ ಶಿಖಂಡಿನೀ ತಸ್ಯಾಂ ಪುಂವತ್ಕರ್ಮಾಣಿ ಚಾಕರೋತ್ ॥**
**ತಸ್ಯೈ ಪಾಂಚಾಲರಾಜ: ಸ ದಶಾರ್ಣಾಧಿಪತೇ: ಸುತಾಂ ॥೧೦೪॥**
**ಉದ್ವಾಹಯಾಮಾಸ ಸ(ಸಾ) ತಾಂ ಪುಂವೇಷೇಣೈವಗೋಹಿತಾಮಾ**
**ಅನ್ಯತ್ರ ಮಾತಾಪಿತ್ರೋಽಸ್ತುನ ವಿಜ್ಞಾತಾಂ ಬುಬೋಧಹ ॥೧೦೫॥**
**ಧಾತ್ರ್ಯೈನ್ಯವೇದಿಯತ್ಸಾಥ ತತ್ಪಿತ್ರೇಸಾ ನ್ಯವೇದಯತ್ ॥೧೦೬॥**

ಅದೇ ಕಾಲದಲ್ಲಿ ದ್ರುಪದರಾಜನು ಮಗನಿಗಾಗಿ ಶಿವನನ್ನು ಕುರಿತು ತಪಸ್ಸು ಮಾಡುತ್ತಿದ್ದನು. ಶಿವನು ಸಂತುಷ್ಟನಾಗಿ, "ಮೊದಲು ನಿನಗೆ ಕನ್ಯೆಯು ಹುಟ್ಟುತ್ತದೆ. ನಂತರ ಅದುವೇ ಗಂಡಾಗುತ್ತದೆ" ಎಂದು ನುಡಿದನು. ಅಂಬೆಯು ಆಗ ಅಲ್ಲಿಯೇ ಶಿಖಂಡಿನಿ ಎಂಬ ಹೆಸರಿನಿಂದ ಹುಟ್ಟಿದಳು. ರಾಜನು ಆ ಮಗುವಿಗೆ ಗಂಡಿನ ಸಂಸ್ಕಾರ ಅಂದರೆ (ಜಾತಕರ್ಮ, ಚೌಲ, ಉಪನಯನ) ಇತ್ಯಾದಿಗಳನ್ನು ಮಾಡಿದನು. ತಂದೆತಾಯಿಗಳ ಹೊರತು ಉಳಿದವರೆಲ್ಲರೂ ಶಿಖಂಡಿನಿಯನ್ನು 'ಪುರುಷ' ಎಂದೇ ಭಾವಿಸಿದ್ದರು. (ದಾಶಾರ್ಣರಾಜನ ಮಗಳಿಗೆ) ಶಿಖಂಡಿನಿಯ ಹೆಂಡತಿಗೆ ತನ್ನ ಗಂಡ, ಹೆಣ್ಣು ಎಂದು ತಿಳಿಯಿತು. ಅವಳು ತನ್ನ ದಾಸಿಗೆ ತಿಳಿಸಿದಳು. ಅವಳು ತಂದೆ-ತಾಯಿಗಳಿಗೆ ಹೇಳಿದಳು.

**ಸ ಕ್ರುದ್ಧ: ಪ್ರೇಷಯಾಮಾಸ ನಿಹನ್ಮಿ ತ್ವಾಂ ಸ ಬಾಂಧವಮ್ ।**
**ಇತಿ ಪಾಂಚಾಲರಾಜಾಯಾ ನಿರ್ಜಗಾಮ ಚ ಸೇನಾಯ ॥೧೦೭॥**

ಇದನ್ನು ಕೇಳಿದ ದಾಶಾರ್ಣರಾಜನು ಕ್ರುದ್ಧನಾಗಿ ನಿನ್ನನ್ನು, ನಿನ್ನ ಬಾಂಧವರನ್ನು ಕೊಂದುಬಿಡುತ್ತೇನೆ ಎಂದು ಪಾಂಚಾಲರಾಜನಿಗೆ ಹೇಳಿ ಕಳುಹಿಸಿದನು. ಅಷ್ಟಕ್ಕೇ ನಿಲ್ಲದೆ ಸೇನೆ ಸಹಿತನಾಗಿ ಹೊರಟೇ ಬಿಟ್ಟನು.

**ವಿಶ್ವಸ್ಯ ವಾಕ್ಯಂ ರುದ್ರಸ್ಯ ಪ್ರುಮಾನೇವೇತಿ ಪಾರ್ಷತಃ ।**
**ಪ್ರೇಷಯಾಮಾಸ ಧಿಗ್ಬುದ್ಧಿರ್ಭಿನ್ನಾ ತೇ ಬಾಲವಾಕ್ಯತಃ ।**
**ಅಪರೀಕ್ಷಕ(ಸ್ಯ) ತೇ ರಾಷ್ಟ್ರಂ ಕಥಮಿತ್ಯೇವ ನರ್ಮಕೃತ್ ॥೧೦೮॥**

ದ್ರುಪದ ರಾಜನಿಗೆ ರುದ್ರದೇವರ ವಾಕ್ಯದ ಮೇಲೆ ವಿಶ್ವಾಸವಿದ್ದಿತು. ಅದಕ್ಕಾಗಿ ಆತನು, ದಾಶಾರ್ಣರಾಜನಿಗೆ, ಯಾವ ಪರೀಕ್ಷೆಯೂ ಇಲ್ಲದೆ ಹೀಗೆ ಹೇಳಬೇಕಾದರೆ ನಿನ್ನ ಬುದ್ಧಿಯು ಬಾಲಬುದ್ಧಿಯೇ ಸೈ. ನಿನ್ನ ಮಾತುಗಳು ಮಕ್ಕಳ ಮಾತಿನಂತಿವೆ. ಇಂಥವನು ರಾಜ್ಯವನ್ನು ಹೇಗೆ ಆಳುತ್ತಿ?'' ಎಂದು ಅಪಹಾಸ್ಯಮಾಡಿದನು.

**ಅಥ ಭಾರ್ಯಾಸಮೇತಂ ತಂ ಪಿತರಂ ಚಿಂತಯಾಕುಲಮ್।**
**ದೃಷ್ಟ್ವಾ ಶಿಖಂಡಿನೀ ದುಃಖಾನ್ಮನ್ನಿಮಿತ್ತಾನ್ನ ನಶ್ಯತು।**
**ಇತಿ ಮತ್ವಾ ವನಾಯೈವ ಯಯೌ ಯ (ತ) ತ್ರ**
**ಚ ತುಂಬುರುಃ ॥೧೦೯॥**

ಆನಂತರ ಹೆಂಡತಿಯೊಡಗೂಡಿ ರಾಜನು ಚಿಂತಿಸುತ್ತಿರುವುದನ್ನು ಶಿಖಂಡಿಯು ನೋಡಿದಳು. ನನ್ನಿಂದಾಗಿ ಇವರಿಗೆ ದುಃಖವಾಗಬಾರದು. ಇವರು ನಾಶವಾಗಬಾರದು, ಎಂದು ತಿಳಿದು 'ತುಂಬುರು' ಎಂಬ ಗಂಧರ್ವನು ಇರುವ ಕಾಡಿಗೆ ನಡೆದಳು.

ಕೆಲವೆಡೆಗಳಲ್ಲಿ 'ತುಂಬುರು' ಎನ್ನುವ ಬದಲಾಗಿ ''ಸ್ಥೂಣಾಕರ್ಣ'' ಎಂದು ಇದೆ. ಅದಕ್ಕೆ ಆಚಾರ್ಯರ ಸ್ಪಷ್ಟೀಕರಣ ಮುಂದಿನ ಶ್ಲೋಕದಲ್ಲಿದೆ. ಜನರ ಸಂಶಯಗಳನ್ನು ಪರಿಹರಿಸುವುದೇ ಆಚಾರ್ಯರ ಮುಖ್ಯ ಉದ್ದೇಶ. ಅಲ್ಲದೆ ಆಚಾರ್ಯರು, ಎಂತಹ ಸೂಕ್ಷ್ಮ ದೃಷ್ಟಿಂದ ಅವಲೋಕಿಸಿ, ಸಂಶೋಧಿಸಿ ವ್ಯತ್ಯಾಸಗಳನ್ನು ಕಂಡುಹಿಡಿದಿದ್ದಾರೆ ಎಂಬುದೂ ಗೊತ್ತಾಗದೆ ಇರದು. ಅಂತೆಯೇ ಇದು 'ನಿರ್ಣಯ' ಗ್ರಂಥ.

**ಸ್ಥೂಣಾಕರ್ಣಾಭಿಧೇ ಯಾಸ್ತಾಮಪ್ಯ ದ್ಯಥ ಕರ್ಣತಃ ।**
**ಸ ತಸ್ಯಾ ಅಖಿಲಂ ಶ್ರುತ್ವಾ ಕೃಪಾಂ ಚಕ್ರೇ ಮಹಾಮನಾಃ॥೧೧೦॥**

ಆ 'ತುಂಬುರು' ಎಂಬ ಗಂಧರ್ವರನಿಗೆ 'ಸ್ಥೂಣವಾದ ಕರ್ಣ' ಅಂದರೆ ಮರಗಿವಿಗಳಿದ್ದವು. ಆದಕ್ಕಾಗಿ ಜನರು ಅವನನ್ನು ಸ್ಥೂಣಕರ್ಣ ಎಂದು ಕರೆಯುತ್ತಿದ್ದರು. (ಇದೊಂದು ಅವನಿಗೆ ವಿಶೇಷವಾಗಿತ್ತು).

ಶಿಖಂಡಿಯು ಎಲ್ಲ ವೃತ್ತಾಂತವನ್ನು ಕೇಳಿ, ಮಹಾತ್ಮನಾದ ಅವನು ಆ ಶಿಖಂಡಿಯಲ್ಲಿ ದಯೆಯುಳ್ಳವನಾದನು.

**ಸ ತಸ್ಯೈ ಸ್ವಂ ವಪುಃ ಪ್ರಾದಾತ್ತವೀಯಂ ಜಗೃಹೇ ತದಾ (ಥಾ) ।**
**ಅಂಶೇನ ಪುಂಸ್ತ್ವ(ಸ್ವ)ಭಾವಾರ್ಥಂ ಪೂರ್ವದೇಹೇ ಸಮಾಸ್ಥಿತಃ ॥೧೧೧॥**

**ಪುಂಸಾಂ ಸ್ತ್ರೀತ್ವಂ ಭವೇತ್ಕ್ವಾಪಿ ತಥಾಪ್ಯಂತೇ ಪುಮಾನ್ಭವೇತ್ ।**
**ಸ್ತ್ರೀಣಾಂ ನೈವ ಹಿ ಪುಂಸ್ತ್ವಂ ಸ್ಯಾದ್ಬಲವತ್ಕಾರಣೈರಪಿ ॥೧೧೨॥**

ಆಗ ಆ ತುಂಬುರನು ತನ್ನ ಪುರುಷದೇಹವನ್ನು ಅವಳಿಗೆ ಕೊಟ್ಟನು. ಅಷ್ಟೇ ಅಲ್ಲ ಆ ದೇಹಕ್ಕೆ ಪುರುಷ ಸ್ವಭಾವ ಬರುವುದಕ್ಕಾಗಿ ಅಂಶದಿಂದ ತಾನೇ ಅದರಲ್ಲಿ ಸೇರಿಕೊಂಡನು.

ಸ್ತ್ರೀಯಿಂದ ಪುರುಷ, ಪುರುಷನಿಂದ ಸ್ತ್ರೀ ಆಗುವುದು ಸಾಧ್ಯವೇ?

ಅದಕ್ಕೆ ಸ್ಪಷ್ಟೀಕರಣ.

ಪುರುಷರಿಗೆ ಯಾವುದೋ ಕಾರಣದಿಂದ ಸ್ತ್ರೀತ್ವ ಬಂದಿದ್ದರೆ, ಆ ಕಾರಣ ಮುಗಿದ ನಂತರ ಅವನು ಪುನಃ ಪುರುಷನಾಗುತ್ತಾನೆ. ಇದಕ್ಕೆ ಅರ್ಜುನನೇ ಸಾಕ್ಷಿ. ಆದರೆ,

ಸ್ತ್ರೀಯರಿಗೆ ಮಾತ್ರ ಯಾವುದೇ ಬಲವತ್ಕಾರಣವಿಲ್ಲದೆ ಪುರುಷತ್ವ ಬರಲಾರದು. ಇದು ನಿಯಮ.

ಅದಕ್ಕಾಗಿ ತುಂಬುರನು ಆ ರೀತಿ ಮಾಡಬೇಕಾಯಿತು.

**ಅತಃ ಶಿವರೇಽಪ್ಯೇಷಾ ಜಜ್ಞೇ ಯೋಷೈವ ನಾನ್ಯಥಾ ।**
**ಪಶ್ಚಾಚ್ಚ ಪುಂ ತನುಂ ಸೈಷಾ ಪ್ರವಿವೇಶೈವ ಪುಂ ಯುತಾಂ॥೧೧೩॥**

**ನಾಸ್ಯಾ ದೇಹ: ಪುಂಸ್ತ್ವ ಮಾಪ ನ ಚ ಪುಂಸಾನದಿಷ್ಠಿತೇ ।**
**ಪುಂದೇಹೇ ನ್ಯದಸತ್ತ್ವಾಥ ಗಂಧರ್ವೇಣ ತಧಿಷ್ಠಿತೇ (ತಮ್) ।**
**ಗಾಂಧರ್ವಂ ದೇಹಮಾವಿಶ್ಯ ಸ್ವಕೀಯಂ ಭವನಂ ಯಯೌ॥೧೧೪॥**

ಈಗ, ಇಲ್ಲಿ ಶಿವನ ವರವಿದ್ದಾಗ್ಯೂ, ಅಂಬೆಯು ಸ್ತ್ರೀಯಾಗಿಯೇ ಜನಿಸಿದಳು. ಪುರುಷನಾಗಿ ಅಲ್ಲ. ಅನಂತರ ಪುರುಷದೇಹ ಬಂದದ್ದು ಪುರುಷನಾದ ಗಂಧರ್ವನ ಪ್ರವೇಶದಿಂದ.

ಅವಳ ದೇಹ ಪುರುಷನದಲ್ಲ. ಅದರಲ್ಲಿ ಪುರುಷತ್ವವೂ ಬಂದಿಲ್ಲ. ಕೇವಲ ಗಂಧರ್ವನ ಪ್ರವೇಶದಿಂದ ಅವಳು ಪುರುಷದೇಹವನ್ನು ಪಡೆದಳು. ಪುರುಷತ್ವವೂ ಬಂದಿತು. ಗಂಧರ್ವದೇಹದಿಂದ ಈಗ ಅವನು ತನ್ನ ಮನೆಗೆ ಬಂದಿದ್ದಾನೆ.

**ತಸ್ಯಾಸ್ತದ್ದೇಹಸಾದೃಶ್ಯಂ ಗಂಧರ್ವಸ್ಯ ಪ್ರಸಾದತ: ।**
**ಪ್ರಾಪ ಗಂಧರ್ವದೇಹೋऽಪಿ ತಯಾ ಪಶ್ಚಾದಧಿಷ್ಠಿತ: ॥೧೧೫॥**
**ಶ್ವೋ ದೇಹಿ ಮಮದೇಹಂ ಮೇಸ್ವಂಚ ದೇಹಂ ಸಮಾವಿಶ ।**
**ಇತ್ಯುಕ್ತ್ವಾ ಸ ತು ಗಂಧರ್ವ: ಕನ್ಯಾದೇಹಂ ಸಮಾಸ್ಥಿತ: ॥೧೧೬॥**

ಗಂಧರ್ವನ ಅನುಗ್ರಹದಿಂದ ಅವಳಿಗೆ ತುಂಬುರನ ಸದೃಶವಾದ ದೇಹ ದೊರೆಯಿತು. ಗಂಧರ್ವನಿಗೂ ಶಿಖಂಡಿನಿಯ ಸದೃಶದೇಹ ಪ್ರಾಪ್ತವಾಯಿತು.

'ನಾಳೆ ನನ್ನ ದೇಹವನ್ನು ನನಗೆ ಕೊಟ್ಟು ನಿನ್ನ ದೇಹವನ್ನು ನೀನು ತೆಗೆದುಕೋ' ಹೀಗೆ ಹೇಳಿ ಗಂಧರ್ವನು ಕನ್ಯಾದೇಹದಲ್ಲಿ ಉಳಿದುಕೊಂಡನು.

**ಉವಾಸೈವ ವನೇ ತಸ್ಮಿನ್ ಧನದಸ್ತತ್ರ ಚಾಗಮತ್ ।**
**ಅಪ್ರತ್ಯುತ್ಥಾಯಿನಂ ತಂ ತು ಲೀಯಮಾನಂ ವಿಲಜ್ಜಯಾ ॥೧೧೭॥**
**ಶಶಾಪ ಧನದೋ ದೇವಷ್ಟಿರಮಿತ್ತ್ರಂ ಭವೇತ ತಂ**
**ಯದಾಯುದ್ಧೇ ಮೃತಿಂ ಯಾತಿ ಸಾ ಕನ್ಯಾಪುಂತನುಸ್ಥಿತಾ ॥೧೧೮॥**

**ತದಾ ಪುಂಸ್ತ್ವಂ ಪುನರ್ಯಾಸಿ ಚಪಲತ್ವಾದಿತೀರಿತಃ ॥೧೧೯॥**

ಗಂಧರ್ವನು ವಾಸಿಸಿರುವ ವನಕ್ಕೇ ಕುಬೇರನು ಬಂದನು. ಅಲ್ಲಿ ಅಡಗಿದ್ದ ತುಂಬುರನು ಲಜ್ಜೆಯಿಂದಾಗಿ, ಎದ್ದುಬಂದು ಕುಬೇರನನ್ನು ಸತ್ಕರಿಸಲಿಲ್ಲ.

'ಈ ದೇಹವು ನಿನಗೆ ಸ್ಥಿರವಾಗಿರಲಿ' ಎಂದು ಕುಬೇರನು ಶಾಪಕೊಟ್ಟನು. (ಗಂಧರ್ವನು ಪಶ್ಚಾತ್ತಾಪದಿಂದ ನೊಂದು ವಿನಂತಿಸಿದಾಗ)

'ಈ ಪುರುಷರೂಪಿಯಾದ ಕನ್ಯೆಯು ಯುದ್ಧದಲ್ಲಿ ಯಾವಾಗ ಸಾಯುವಳೋ, ಆಗ ನಿನಗೆ ಪುರುಷ ದೇಹವುಂಟಾಗಲಿ– ಎಂದು ಪುನಃ ಶಾಪದಿಂದ ವಿಮೋಚನೆಯನ್ನು ಮಾಡಿದನು.

ವಿ.ವಿ. ಏನು ಕಾರಣ ಎಂದಲ್ಲಿ 'ಚಪಲತ್ವದಿಂದಾಗಿ' ಎಂದು ಉತ್ತರಿಸಿದನು. ಗಂಧರ್ವನಿಗೆ ದೇಹಗಳನ್ನು ಬದಲಿಸುವ ಸಾಮರ್ಥ್ಯವಿದ್ದಿತು. ಆದರೂ ಅದಕ್ಕೆ ಕುಬೇರನ ಅನುಮತಿ ಅಗತ್ಯವಾಗಿದ್ದಿತು. ಶಿಖಂಡಿನಿಯ ಮೇಲಿನ ಕರುಣೆಯಿಂದ, ಚಪಲತೆಯಲ್ಲಿ ಗಂಧರ್ವನು ಈ ಕಾರ್ಯಮಾಡಿದನು.

ತನ್ನ ಒಡೆಯನನ್ನು ಅಲಕ್ಷಿಸಿದುದಕೆ ಅವನಿಗೆ ಈ ಶಿಕ್ಷೆಯಾಯಿತು. ಜಗತ್ತಿಗೆ ಒಡೆಯನಾದ ಪರಮಾತ್ಮನನ್ನು ಅಲಕ್ಷಿಸಿದರೆ ಹುಲುಮಾನವನ ಗತಿ ಏನಾಗಬಹುದು?

**ತಥಾವಸತ್ ಸ ಗಂಧರ್ವ: ಕನ್ಯಾ, ಪಿತ್ರೋರಶೇಷತಃ ।**
**ಕಥಯಾಮಾಸಾನುಭೂತಂ ತೌಭ್ಯಷಂ ಮುದಮಾಪತುಃ ॥೧೨೦॥**

ಆ ಗಂಧರ್ವನು ಕನ್ಯೆಯಾಗಿ ಅಡವಿಯಲ್ಲಿ ವಾಸವಾಗಿದ್ದನು. ಮಾತಾಪಿತೃಗಳು ಶಿಖಂಡಿನಿಯಿಂದ ನಡೆದ ವೃತ್ತಾಂತವನ್ನು ಕೇಳಿ ಅತಿ ಸಂತುಷ್ಟರಾದರು.

**ಪರೀಕ್ಷ್ಯ ತಾಮುಪಾಯೈಸ್ತು (ಜ್ಞ) ಶ್ವಶುರೋ ಲಜ್ಜಿತೋಯಯಾ ।**
**ಶ್ಲೋ ಭೂತೇ ಸಾ ತು ಗಂಧರ್ವಂ ಪ್ರಾಪ್ಯ ತದ್ವಚನಾತ್ಪನಃ॥೧೨೧॥**
**ಯಯೌ ತೇನ್ನೈವ ದೇಹೇನ ಪುಂಸ್ತ್ವಮೇವ ಸಮಾಶ್ರಿತಾ ॥೧೨೨॥**
**ಸ ಶಿಖಂಡೀ ನಾಮೆತೋऽಭೂದಸ್ತ್ರ, ಶಸ್ತ್ರ, ಪ.ತಾಪವಾನ್॥೧೨೩॥**

ಪರೀಕ್ಷೆಯು ಮುಗಿಯಿತು. ಹೆಣ್ಣುಕೊಟ್ಟ ಮಾವನು ಲಜ್ಜಿತನಾಗಿ ಹಿಂತಿರುಗಿದನು. ಮಾರನೆಯದಿನ ಶಿಖಂಡಿನಿಯು ಗಂಧರ್ವನ ಹತ್ತಿರ ಬಂದಳು. ಪುನಃ ಗಂಧರ್ವನ ವಚನದ ಪ್ರಕಾರ ಅದೇ ದೇಹದಿಂದಲೇ (ಪುರುಷ ದೇಹದಿಂದಲೇ) ಹಿಂದಿರುಗಿದನು. ಅವನೇ 'ಶಿಖಂಡೀ' ಎಂದು ಕರೆಯಲ್ಪಟ್ಟನು. ಅವನು ಅಸ್ತ್ರ-ಶಸ್ತ್ರ ವಿದ್ಯೆಗಳಲ್ಲಿ ಮಹಾವೀರನಾಗಿ ಪ್ರತಾಪಶಾಲಿಯಾದನು.

ಧೃತರಾಷ್ಟ್ರ, ಪಾಂಡು ಮತ್ತು ವಿದುರರ ಉತ್ಪತ್ತಿ

**ವಿಚಿತ್ರವೀರ್ಯ: ಪ್ರಮದಾದ್ವಯಂ ತತೌ**
**ಸಂಪ್ರಾಪ್ಯ ರೇಮೋಽಬ್ದಗಣಾನ್ ಸುಸಕ್ತಃ ।**
**ತತ್ಯಾಜ ದೇಹಂ ಚ ಸ ಯಕ್ಷ್ಮಣಾರ್ದಿತಃ**
**ತತೋಽಸ್ಯ ಮಾತಾ ಸ್ಮರದಾಶು ಕೃಷ್ಣಮ್ ॥೧೨೪॥**

ವಿಚಿತ್ರವೀರ್ಯನು ಇಬ್ಬರು ಪತ್ನಿಯರಲ್ಲಿ ಆಸಕ್ತನಾಗಿ ಕ್ರೀಡಿಸುತ್ತ ವಿಷಯಲೋಲುಪತೆಯಲ್ಲಿಯೇ ಅನೇಕ ವರ್ಷಗಳವರೆಗೆ ಸುಖದಿಂದ ಕಾಲ ಕಳೆದನು. ಕೊನೆಗೆ ಕ್ಷಯರೋಗಕ್ಕೆ ತುತ್ತಾಗಿ ದೇಹವನ್ನು ತ್ಯಜಿಸಿದನು.

ಆಗ ಅವನ ತಾಯಿ ಸತ್ಯವತಿಯು-ಕೃಷ್ಣ ವ್ಯಾಸರನ್ನು ಸ್ಮರಿಸಿದಳು.

ವಿ.ಪಿ. ವ್ಯಾಸರ ಬಣ್ಣ ಕೃಷ್ಣವಿದ್ದ ಕಾರಣ ಅವರನ್ನು 'ಕೃಷ್ಣ' ಎಂದು ಕೂಡ ಕರೆಯುವುದುಂಟು.

ದೇಹವನ್ನು ಕ್ಷೀಣಿಸುವುದೇ 'ಕ್ಷಯ'

ವಿಷಯಾಸಕ್ತಿ ಎಷ್ಟು ಕೆಟ್ಟದು ಎಂಬುದು ಇದರಿಂದ ವ್ಯಕ್ತವಾಗುತ್ತದೆ.

**ಆವಿರ್ಬಭೂವಾಸು ಜಗಜ್ಜನಿತ್ರೋ**
**ಜನಾರ್ದನೋ ಜನ್ಮಜರಾಭಯಾಪಹಃ ।**
**ಸಮಸ್ತ ವಿಜ್ಞಾನ ತನುಃ ಸುಖಾರ್ಣವಃ**
**ಸಂಪೂಜಯಾಮಾಸ ಚ ತಂ ಜನಿತ್ರೀ ॥೧೨೫॥**

ಜಗಜ್ಜನಕನು, ಜನನ ಮರಣ ಭಯನಿವಾರಕನು, ಸಮಸ್ತ ಶರೀರವೇ ವಿಜ್ಞಾನವಾಗುಳ್ಳವನು, ಸುಖಗಳಿಗೆ ಆಗರನಾದವನು. ಇಂತಹ

ಜನಾರ್ದನನಾದ ಶ್ರೀ ವ್ಯಾಸರು ತತ್‌ಕ್ಷಣದಲ್ಲಿಯೇ ಪ್ರಕಟರಾದರು. ತಾಯಿಯು ಅವರನ್ನು ಚೆನ್ನಾಗಿ ಸತ್ಕರಿಸಿದಳು.

**ತಂ ಭೀಷ್ಮ ಪೂರ್ವೈಃ ಪರಮಾದರಾರ್ಚಿತಂ**
**ಸ್ವಭಿಷ್ಟುತಂ ಚಾವದದಸ್ಯ ಮಾತಾ ।**
**ಪುತ್ರೌ ಮೃತೌ ಮೇ ನ ತು ರಾಜ್ಯಮೈಚ್ಛಿರೆ ।**
**ಭೀಷ್ಮೋ ಮಯಾ ನಿತರಾಮರ್ಥಿತೋಽಪಿ ॥೧೨೬॥**
**ಕ್ಷೇತ್ರೇ ತವ ಭ್ರಾತುರಪತ್ಯಮುತ್ತಮ-**
**ಮುತ್ಪಾದಯಾಸ್ಮತ್ಪರಮಾದ ರಾರ್ಥಿತಃ**
**ಇತೀರಿತಃ ಪ್ರಣತಶ್ಚಾಪ್ಯಭಿಷ್ಟುತೋ**
**ಭೀಷ್ಮಾದಿಭಿಶ್ಚಾಹ ಜಗದ್ಗುರುರ್ವಚಃ ॥೧೨೭॥**

ಭೀಷ್ಮರು ಕೂಡ ವೇದವ್ಯಾಸರನ್ನು ಬಹು ಭಕ್ತಿಪೂರ್ವಕ ಪೂಜಿಸಿದರು. ಆಗ ತಾಯಿಯು ವ್ಯಾಸರನ್ನು ಕುರಿತು, "ನನ್ನ ಇಬ್ಬರು ಮಕ್ಕಳು ಮೃತರಾದರು. ನನಗೆ ರಾಜ್ಯದಲ್ಲಿ ಇಚ್ಛೆಯಿಲ್ಲ. ಭೀಷ್ಮನಿಗೆ ನಾನು ಬಹಳ ಪರಿಯಿಂದ ಕೇಳಿಕೊಂಡರು ಆತನೂ ನಿರಾಕರಿಸಿದ್ದಾನೆ."

"ನಿನ್ನ ತಮ್ಮಂದಿರ ಹೆಂಡರ ಉದರದಲ್ಲಿ ಮಕ್ಕಳನ್ನು ಹುಟ್ಟಿಸು" ಈ ರೀತಿಯಾಗಿ ತಾಯಿ ಮತ್ತು ಭೀಷ್ಮರು ಪ್ರಣೀತರಾಗಿ ತಮ್ಮ ಅಭೀಷ್ಟಗಳನ್ನು ಹೇಳಿದಾಗ, ಜಗತ್ತಿಗೆ ಗುರುವಾದ ವ್ಯಾಸರು ಹೀಗೆ ನುಡಿದರು.

ಪಿ.ಪಿ. ಇಲ್ಲಿ ಕೆಲವರು ಆಕ್ಷೇಪಗಳನ್ನು ಎತ್ತುವರಿದ್ದಾರೆ. ಅದಕ್ಕೆ ಇಷ್ಟೇ ಉತ್ತರ. ಇದು ಆಗಿನ ಕಾಲದ ಪದ್ಧತಿ. ಅಂದಿನ ಸಮಾಜ ಒಪ್ಪಿದ ಪದ್ಧತಿ. ಅದನ್ನು ಕುರಿತು ನಾವು ಇಂದು ಯೋಚಿಸುವಂತಿಲ್ಲ. ಇಂದಿನ ಕಾಲದಲ್ಲಿಯೂ ಅನೇಕ ನಿಷಿದ್ಧ ಪದ್ಧತಿಗಳು ಸಮಾಜದಲ್ಲಿ ಬದುಕಿ ಬಾಳುತ್ತಿರುವುದನ್ನು ನಾವು ಕಾಣುತ್ತೇವೆ.

ಮೇಲಾಗಿ ಮೇಲಿನ ವ್ಯಕ್ತಿಗಳು ದೇವತೆಗಳು. ಅವರು ಸ್ಪರ್ಶದಿಂದ, ದೃಷ್ಟಿಯಿಂದ ಅಷ್ಟೇ ಅಲ್ಲ. ಅವರು ಕೇವಲ ಆಶೀರ್ವಾದಗಳಿಂದ ಫಲಗಳನ್ನು ಕೊಡಲು ಸಮರ್ಥರು. ಆ ಸಾಮರ್ಥ್ಯ ನಮಗಿಲ್ಲ. ಕಾರಣ

ನಾವು ನಮ್ಮ ಮೂಗಿನ ನೇರದಿಂದ ಆ ವಿಚಾರ ಮಾಡಬಾರದು. ಅಲ್ಲದೆ, ವ್ಯಾಸರ ನುಡಿಯನ್ನು ಓದಿ ನೋಡಿ.

**ಋತೇ ರಮಾಂ ಜಾತು ಮಮಾಂಗ ಸಂಗ**
**ಯೋಗ್ಯಾಂಗನಾ ನೈವ ಸುರಾಲಯೇಽಪಿ ।**
**ತಥಾಪಿ ತೇ ವಾಕ್ಯಮಹಂ ಕರಿಷ್ಯೇ**
**ಸಾಂವತ್ಸರಂ ಸಾ ಚರತು ವ್ರತಂ ಮೇ (ಚ) ॥೧೨೮॥**

"ರಮಾದೇವಿಯು ಹೊರತು, ನನ್ನ ಅಂಗಸಂಗ ಮಾಡಲು, ದೇವಲೋಕದಲ್ಲಿಯೂ ಯಾವ ಅಂಗನೆಯೂ ಯೋಗ್ಯಳಾಗಲಾರಳು. ಆದರೂ ನಿನ್ನ ಮಾತನ್ನು ಕೇಳುತ್ತೇನೆ. ಒಂದು ವರ್ಷದವರೆಗೆ ಈ ಸ್ತ್ರೀಯರು ವ್ರತವನ್ನು (ವೈಷ್ಣವ ವ್ರತವನ್ನು) ಆಚರಿಸಲಿ" ಎಂದು ವ್ಯಾಸರು ಹೇಳಿದರು.

**ಸಾ ಪೂತದೇಹಾಥ ಚ ವೈಷ್ಣವ ವ್ರತಾತ್**
**ಮತ್ತಃ ಸಮಾಪ್ನೋತು ಸುತಂ ವರಿಷ್ಠಮಾ ।**
**ಇತೀರಿತೇ ರಾಷ್ಟ್ರಮುಪೈತಿ ನಾಶ**
**ಮಿತಿ ಬ್ರುವಂತೀಂ ಪುನರಾಹ ವಾಕ್ಯಮ್ ॥೧೨೯॥**

"ಅವಳ ದೇಹ ವೈಷ್ಣವ ವ್ರತದಿಂದ ಪವಿತ್ರವಾಗುತ್ತದೆ. ಅಂತಹ ಶರೀರದಲ್ಲಿ ಶ್ರೇಷ್ಠನಾದ ನನ್ನಂತಹ ಮಗನು ಹುಟ್ಟುತ್ತಾನೆ" ಎಂದು ವ್ಯಾಸರು ಹೇಳಿದಾಗ, "ಹಾಗಾದರೆ ಅಲ್ಲಿಯವರೆಗೆ ರಾಷ್ಟ್ರವೇ ನಾಶವಾಗುತ್ತದೆ" ಎಂದು ಹೇಳಿದ ತಾಯಿಯ ನುಡಿಯನ್ನು ಕೇಳಿ ಪುನಃ ಈ ಮಾತು ಹೇಳಿದರು.

**ಸೌಮ್ಯ, ಸ್ವರೂಪೋಽಪ್ಯತಿ ಭೀಷಣಂ ಮೃಷಾ**
**ತಚ್ಚಕ್ಷುಷೋ ರೂಪಮಹಂ ಪ್ರದರ್ಶಯೇ ।**
**ಸ ಹೇತ ಸಾ ತದ್ಯದಿ ಪುತ್ರಕೋಽಸ್ಯಾ**
**ಭವೇದ್ಗುಣಾಢ್ಯೋ ಬಲವೀರ್ಯ ಯುಕ್ತಃ ॥೧೩೦॥**

ನನ್ನದು ಸೌಮ್ಯರೂಪವಾಗಿದ್ದರೂ, ಮನುಷ್ಯಳಾದ ಅವಳ ಕಣ್ಣಿಗೆ ಭಯಂಕರವಾಗಿ ತೋರಿಸುತ್ತೇನೆ. ಅವಳು ಆ ರೂಪವನ್ನು ನೋಡಲು ಯೋಗ್ಯಳಾದರೆ, ಅವಳಲ್ಲಿ ಉತ್ತಮ ಗುಣವಂತನು, ಬಲಾಢ್ಯನು ಆದ ಮಗನು ಹುಟ್ಟುತ್ತಾನೆ.

ಇದೇ ಅಭಿಪ್ರಾಯ ಭಾರತದ ಆದಿಪರ್ವ ಅಧ್ಯಾಯ ೧೧೪, ೬೩,೬೨ ಶ್ಲೋಕಗಳಲ್ಲಿ ಬಹು ಸ್ಪಷ್ಟ ಮತ್ತು ಸುಂದರವಾಗಿ ವರ್ಣಿತವಾಗಿದೆ.

**ಇತೀರಿತೇऽಸ್ಮಿ ತ್ಯುದಿತಸ್ತಯೋಗಮತ್**
**ಕೃಷ್ಣೋಂऽಬಿಕಾಂ ಸಾ ತು ಭಯಾನ್ನ (ಭಿಯಾನ್ನ) ಮೀಲಾಯತ್**
**ಅಭೂಚ್ಚ ತಸ್ಯಾಂ ಧೃತರಾಷ್ಟ್ರ ನಾಮಕೋ**
**ಗಂದರ್ವರಾಟ್ ಪವನಾವೇಶಯುಕ್ತ: ॥೧೩೧॥**

ವೇದವ್ಯಾಸರು ಈ ರೀತಿ ಹೇಳಿದ ನಂತರ 'ಆಗಲಿ' ಎಂದು ಸತ್ಯವತೀ ದೇವಿಯು ಅಂಬಿಕೆಯನ್ನು ವ್ಯಾಸರ ಹತ್ತಿರ ಕಳುಹಿಸಿದಳು. ಅವಳು ವ್ಯಾಸರ ರೂಪವನ್ನು ಕಂಡು ಭೀತಳಾಗಿ ಕಣ್ಣನ್ನು ಮುಚ್ಚಿಕೊಂಡಳು. ಅವಳಲ್ಲಿ ಧೃತರಾಷ್ಟ್ರನು ಹುಟ್ಟಿದನು. ಈತನು ಶ್ರೇಷ್ಠ ಗಂಧರ್ವನು. ಪವನಾವೇಶದಿಂದ ಕೂಡಿದವನಾಗಿದ್ದನು.

**ಅರಿಷ್ಟಾಯಾಸ್ತು ಯ: ಪುತ್ರೋऽಯಂ ಹಂಸ**
**ಇತ್ಯಭಿ ವಿಶ್ರುತ:। ಸ ಗಂಧರ್ವಪತಿರ್ಜಜ್ಞೇ**
**ಕುರುವಂಶ ವಿವರ್ಧನ:। ಧೃತ ರಾಷ್ಟ್ರ ಇತಿ ಖ್ಯಾತ:**
**ಕೃಷ್ಣದ್ವೈ ಪಾಯನಾತ್ಮಜ: ॥**

ಈ ಶ್ಲೋಕವು ಕೂಡ ಮೇಲಿನ ಭಾವನೆಯನ್ನು ಪುಷ್ಟೀಕರಿಸುತ್ತದೆ. ಅಲ್ಲದೆ ಅವನು ಹಂಸನಾಮಕ ಗಂಧರ್ವ ಎಂದು ಸ್ಪಷ್ಟೀಕರಿಸುತ್ತದೆ.

ಸ ಮಾರುತಾವೇಶವಶಾ (ಬಲಾ) ದ್ಬಲಾಧಿಕೋ
ಬಭೂವ ರಾಜಾ ಧೃತರಾಷ್ಟ್ರ ನಾಮಾ ।

**ಅದಾದ್ವರಂ ಚಾಸ್ಯ ಬಾಲಾಧಿಕತ್ವಂ**
**ಕೃಷ್ಣೋಂSಧ ಆಸೀತ್ಸ ತು ಮಾತೃದೋಷಿತಃ ॥೧೩॥**

ರಾಜನಾದ ಧೃತರಾಷ್ಟ್ರನಿಗೆ ಮಾರುತನ ಆವೇಶವಿದ್ದ ಪ್ರಯುಕ್ತ ಬಲಶಾಲಿಯಾಗಿಯೇ ಹುಟ್ಟಿದನು. ಜೊತೆಯಲ್ಲಿ ವ್ಯಾಸರ ವರಬಲವಿದ್ದುದರಿಂದ ಅಧಿಕ ಬಲಶಾಲಿಯಾದನು. ಆದರೂ ತಾಯಿಮಾಡಿದ ತಪ್ಪಿಗಾಗಿ ಆತನು ಕುರುಡನಾದನು.

ವಿ.ವಿ. ತಾಯಿ ಮಾಡಿದ ಸಣ್ಣ ತಪ್ಪಿನ ಫಲವನ್ನು, ಮಗ ಜೀವನದ ಉದ್ದಕ್ಕೂ ಅನುಭವಿಸಬೇಕಾಯಿತು. ಅದಕ್ಕಾಗಿಯೇ ಗರ್ಭಿಣಿಯರು ಒಳ್ಳೆಯದನ್ನೇ ನೋಡಬೇಕು, ಒಳ್ಳೆಯದನ್ನೇ ಕೇಳಬೇಕು, ಒಳ್ಳೆಯ ವಿಚಾರಗಳನ್ನೇ ಮಾಡಬೇಕು ಎಂಬ ನಂಬಿಕೆ ಇಂದಿಗೂ ಉಳಿದುಕೊಂಡುಬಂದಿದೆ.

**ಜ್ಞಾತ್ವ ತಮಂಧಂ ಪುನರೇವ ಕೃಷ್ಣಂ**
**ಮಾತಾ ಬ್ರವೀಜ್ಜನಯಾನ್ಯಂ ಗುಣಾಢ್ಯಮ್ ।**
**ಅಂಬಾಲಿಕಾಯಾಮಿತಿ ತತ್ತಥಾ ಕರೋತ್**
**ಭಯಾಚ್ಚ (ತ್ತು) ಸಾ ಪಾಂಡುರಭೂನ್ಯಪಾದೃಕ್ ॥೧೩॥**

ಆ ಮಗನು ಕುರುಡನಾದನೆಂದು ತಿಳಿದ ತಾಯಿ, ಪುನಃ ವ್ಯಾಸರನ್ನು ಕುರಿತು, "ಗುಣಾಢ್ಯನಾದ ಇನ್ನೊಬ್ಬ ಮಗನನ್ನು ಅಂಬಾಲಿಕೆಯಲ್ಲಿ ಪಡೆದು ಕೊಡು" ಎಂದು ಹೇಳಿದರು. ಅದಕ್ಕೆ 'ಹಾಗೇ ಆಗಲಿ' ಎಂದು ಹೇಳಿದರು. ಆದರೆ ಅಂಬಾಲಿಕೆ ಕಣ್ಣು ಬೆಳ್ಳಗೆ ಮಾಡಿಕೊಂಡು ಭೀತಿಯಿಂದ ವ್ಯಾಸರ ರೂಪವನ್ನು ನೋಡಿದಳು. ಅವಳ ಕಣ್ಣಿಗೆ ವೇದವ್ಯಾಸರ ರೂಪವು ಬಿಳಿಯಾಗಿ ಕಂಡಿತು. ಅದರ ಪರಿಣಾಮ ಪಾಂಡುವರ್ಣದ (ಬಿಳಿಯ ಬಣ್ಣದ) ಮಗ ಹುಟ್ಟಿದನು.

**ನಮಃ ಶಾಂತಾಯ, ಘೋರಾಯ .......ಗುಣಕರ್ಮಣೆ ।**

(ಭಾಗವತ)

ಸೌಮ್ಯನೂ, ಭಯಂಕರನು, ಸ್ತುತ್ಯನು ಮತ್ತು ಗುಣಸ್ವರೂಪನು ಆದ ಪರಮಾತ್ಮನೇ ನಿನಗೆ ನಮಸ್ಕಾರಗಳು ಎಲ್ಲ ರೂಪಗಳು ಪರಮಾತ್ಮನವೇ.

**ಪರಾವಹೋ ನಾಮ ಮರುತ್ತ ತೋಽಭವತ್**
**ವರ್ಣೇನ ಪಾಂಡುಃ ಸ ಹಿ ನಾಮ ತಶ್ಚ ।**
**ಸ ಚಾಸ ವೀರ್ಯಾಧಿಕ ಏವ ವಾಯೋ**
**ರಾವೇಶತಃ ಸರ್ವ ಶಾಸ್ತ್ರಾಸ್ತ್ರವೇತ್ತಾ ॥೧೩೪॥**

ಪರಾವಹ ಎಂಬ ಮರುತನೇ ಅಲ್ಲಿ ಹುಟ್ಟಿದನು. ಅವನದು ಪಾಂಡು ಬಣ್ಣ. ಅಂದರೆ ಬಿಳಿಯ ಬಣ್ಣ. ಅಂತೆಯೇ ಅವನ ಹೆಸರು 'ಪಾಂಡು'. ವಾಯುವಿನ ಆವೇಶವಿದ್ದ ಪ್ರಯುಕ್ತ ಅವನು ಸಕಲ ಶಾಸ್ತ್ರಗಳನ್ನು ಬಲ್ಲವನಾಗಿದ್ದು ಪರಾಕ್ರಮಿಯೂ ಆಗಿದ್ದನು.

**ತಸ್ಮೈ ತಥಾ ಬಲ ವೀರ್ಯಾಧಿಕತ್ವ (ತ್ವ)**
**ವರಂ ಪ್ರದಾತ್ ಕೃಷ್ಣ ಏವಾಥ ಪಾಂಡುಮ್ ।**
**ವಿಜ್ಞಾಯ ತಂ ಪ್ರಾಹ ಪುನಶ್ಚ ಮಾತಾ**
**ನಿರ್ದೋಷ ಮನ್ಯಂ ಜನಯೋತ್ತ ಮಂ ಸುತಮ್ ॥೧೩೫॥**

ಆ ಪಾಂಡುರಾಜನಿಗೆ ವೀರ್ಯಾಧಿಕವಾಗಲು ವ್ಯಾಸರಿಂದ ವರವೂ ದೊರೆಯಿತು. ಪುನಃ ತಾಯಿಯು ಕೃಷ್ಣ(ವ್ಯಾಸ)ರನ್ನು ಕುರಿತು ನಿರ್ದೋಷನಾದ ಇನ್ನೊಬ್ಬ ಮಗನನ್ನು ಪಡೆದುಕೊಡು ಎಂದು ವಿನಂತಿಸಿಕೊಂಡಳು.

**ಉಕ್ತೇತಿ ಕೃಷ್ಣಂ ಪುನರೇವ ಚ ಸ್ನುಷಾ–**
**ಮಾಹ ತ್ವಯಾ ಕ್ಣೋರ್ಣಿ ನಿಮೀಲನಂ ಪುರಾ ।**
**ಕೃತಂ ತತಸ್ತೇ ಸುತ ಆಸ ಚಾಂಧಃ**
**ತತಃ ಪುನಃ ಕೃಷ್ಣಮುಪಾಸ್ತ ಭಕ್ತಿತಃ ॥೧೩೬॥**

ಸತ್ಯವತೀ ದೇವಿಯು, ಮೇಲಿನಂತೆ ವ್ಯಾಸರಿಗೆ ಹೇಳಿ, ಪುನಃ ತನ್ನ ಸೊಸೆಯಾದ ಅಂಬಿಕೆಯನ್ನು ಕರೆದು, "ನೀನು ಮೊದಲು ಕಣ್ಣುಮುಚ್ಚಿದ್ದರಿಂದ ಕುರುಡು ಮಗನನ್ನು ಹೆತ್ತೆ. ಇರಲಿ, ಈಗ ನೀನು ಮತ್ತೆ (ಕೃಷ್ಣ) ವ್ಯಾಸರನ್ನು ಭಕ್ತಿಯಿಂದ ಸೇವಿಸು" ಎಂದು ಹೇಳಿದಳು.

**ಇತೀರಿತಾಪ್ಯಸ್ಯ ಹಿ ಮಾಯಯಾಸಾ**
**ಭೀತಾ ಭುಜಿಷ್ಯಾಂ ಕುಮತಿರ್ನ್ಯಯೋಜಯತ್ ।**
**ಸಾ ತಂ ಪರಾನಂದ ತನುಂ ಗುಣಾರ್ಣವಂ**
**ಸಂಪ್ರಾಪ್ಯ ಭಕ್ತ್ಯಾ ಪರಯೈವ ರೇಮೇ ॥೧೩೭॥**

ಮೇಲಿನಂತೆ ಹೇಳಿದ ಸತ್ಯವತಿಯ ಮಾತುಗಳನ್ನು ಕೇಳಿದ ಆಕೆಯ ಸೊಸೆಯು, ಶ್ರೀಹರಿಯ ಮಾಯೆಗೊಳಗಾಗಿಯೇ ಅನ್ಯರನ್ನು (ತನ್ನ ದಾಸಿಯಾದ ಶೂದ್ರ ಸ್ತ್ರೀಯನ್ನು) ಯೋಜಿಸಿದಳು. ಅವಳು ವ್ಯಾಸರನ್ನು ಪರಾನಂದ ಮೂರ್ತಿಯೆಂದು, ಸರ್ವಗುಣ ಸಂಪೂರ್ಣನೆಂದು ಬಗೆದು ಭಕ್ತಿಯಿಂದ ಸೇವಿಸಿದಳು.

ಇಲ್ಲಿ "ಹಿ ಮಾಯಯಾ" ಎಂಬ ಪದವನ್ನು ಬಳಸಿ ಆಚಾರ್ಯರು, ಎಲ್ಲ ಘಟನೆಗಳಿಗೂ ಆತನ ಮಾಯೆಯೇ ಕಾರಣವೆಂದು ಸ್ಪಷ್ಟವಾಗಿ ಹೇಳಿದ್ದಾರೆ.

ವಿ.ವಿ. ದಾಸಿಯು ಶೂದ್ರಳಾಗಿದ್ದರೂ ವ್ಯಾಸರನ್ನು ಚೆನ್ನಾಗಿ ತಿಳಿದು ಭಕ್ತಿಯಿಂದ ಪೂಜಿಸಿದಳು. ಇದಕ್ಕೆ ಕಾರಣ ಅವಳು 'ಸುಜೀವಿ'. ಭಕ್ತಿಗೆ ಯೋನಿ ಕಾರಣವಲ್ಲ. ಜೀವಿಯ ಯೋಗ್ಯತೆಯೇ ಕಾರಣ. ಇದು ಸಿದ್ಧಾಂತ.

**ತಸ್ಯಾಂ ಸ ದೇವೋಽಜನಿ ಧರ್ಮರಾಜೋ**
**ಮಾಂಡವ್ಯ ಶಾಪಾದ್ಯ ಉವಾಹ ಶೂದ್ರತಾಮ್ ।**
**ವಸಿಷ್ಟ ಸಾಮ್ಯಂ ಸಮಭೀಪ್ಸ ಮಾನಂ**
**ಪ್ರಚ್ಯಾವನ್ನಿಚ್ಛಯಾ ಶಾಪಮಾಪ ॥೧೩೮॥**

ಅವಳಲ್ಲಿ (ಆ ಪರಿಚಾರಿಕೆಯಲ್ಲಿ) ಮಾಂಡವ್ಯ ಋಷಿಗಳಿಂದ ಶಾಪಗ್ರಸ್ತನಾದ ಯಮಧರ್ಮರಾಜನೇ ಶೂದ್ರನಾಗಿ ಹುಟ್ಟಿದನು. ಯಮಧರ್ಮನು ಮಾಂಡವ್ಯರಿಂದ ಶಾಪ ಪಡೆಯಲು ಕಾರಣ, ಮಾಂಡವ್ಯ ಋಷಿಗಳು ವಸಿಷ್ಠರಿಗೆ ಸಮರಾಗಬೇಕೆಂಬ ಇಚ್ಛೆಯುಳ್ಳವರಾಗಿ ತಪಸ್ಸು ಮಾಡುತ್ತಿದ್ದರು. ಪರಮಾತ್ಮನ ಇಚ್ಛೆಗೆ ಅನುಗುಣವಾಗಿ ಅವರನ್ನು ತಪೋಭ್ರಷ್ಟರನ್ನಾಗಿ ಮಾಡಿ ಯಮನು ಶಾಪವನ್ನು ಸ್ವೀಕರಿಸಿದನು.

'ಸ್ವ ಇಚ್ಛೆ ಎಂದಲ್ಲಿ' ಭಗವಂತನ 'ಇಚ್ಛೆ', ಎಂದೇ ಅರ್ಥೈಸಬೇಕು ಏಕೆಂದರೆ "ತೇನ ವಿನಾ ತೃಣಮಪಿ ನ ಚಲತಿ" ಆತನ ಇಚ್ಛೆ-ಯಿಲ್ಲದೆ ಒಂದು ಹುಲ್ಲು ಕಡ್ಡಿಯು ಕೂಡ ಅಲುಗಾಡಲಾರದು" ಎಂಬುದನ್ನು ಸದಾ ನೆನಪಿನಲ್ಲಿರಬೇಕು.

ಒಬ್ಬ ಸಾಮಾನ್ಯ ಋಷಿಯು ಯಮಧರ್ಮನಿಗೆ ಶಾಪವನ್ನು ಕೊಡಬಹುದೇ? ಅದಕ್ಕೂ ಪರಮಾತ್ಮನ ಇಚ್ಛೆಯೇ ಕಾರಣ. ಆ ಋಷಿಗಳು ತಪಸ್ಸಿನಿಂದ ಹೆಚ್ಚು ಪುಣ್ಯವನ್ನು ಸಂಪಾದಿಸಿದ್ದರು. ಅದು ಹ್ರಾಸವಾಗಬೇಕಿತ್ತು. ಹಣವನ್ನು ಹೆಚ್ಚು ಸಂಪಾದಿಸಿದರೆ ಆದಾಯ ತೆರಿಗೆ ಕಟ್ಟುವುದಿಲ್ಲವೇ? ಹಾಗೆ ಅದಕ್ಕಾಗಿಯೇ ಪರಮಾತ್ಮನೇ ಮಾಂಡವ್ಯರಲ್ಲಿ ನಿಂತು, ಅವರಿಂದ ಆ ರೀತಿಯ ಕಾರ್ಯ ಮಾಡಿಸಿದ್ದಾನೆ.

"ದೊಡ್ಡವರಿಗೆ ಕೆಟ್ಟಮಾತು ಆಡಿದರೂ, ಅದು ಪುಣ್ಯ ನಾಶಕ್ಕೆ ಕಾರಣವಾಗುತ್ತದೆ"

**ಅಯೋಗ್ಯ ಸಂಪ್ರಾಪ್ತಿ ಕೃತ ಪ್ರಯತ್ನ-**
**ದೋಷಾತ್ ಸಮಾರೋಪಿ ತಮೇವ ಶೂಲೇ ।**
**ಚೋ ಹ್ಯರ್ತೇಽ ರ್ಥೇಽಪಿ ತು ಚೋರಬುದ್ಧ್ಯಾ**
**ಮಹೇವಧಾರಿತ್ಯವದ ದ್ಯ್ಯಮಸ್ತಮ್ ॥೧೩೯॥**

ಮಾಂಡವ್ಯ ಋಷಿಗಳು ತಮ್ಮ ಯೋಗ್ಯತೆಗೆ ಮೀರಿ ಪುಣ್ಯವನ್ನು ಸಂಪಾದಿಸಲು ಪ್ರಯತ್ನಿಸಿದರು. ಆ ದೋಷದಿಂದಲೇ ಅವರಿಗೆ ಶೂಲ ಪ್ರಾಪ್ತವಾಯಿತು.

ಶೂಲಪ್ರಾಪ್ತಿಗೆ ಕಾರಣ. ಒಮ್ಮೆ ಮಾಂಡವ್ಯ ಋಷಿಗಳು ತಪಸ್ಸಿಗಾಗಿ ಕುಳಿತಿದ್ದರು. ಅವರು ಸಂಪ್ರಜ್ಞಾವಸ್ಥೆಯಲ್ಲಿದ್ದರು. ಆ ಕಾಲದಲ್ಲಿ ಕೆಲವು ಕಳ್ಳರು ಕಳ್ಳತನದಿಂದ ತಂದ ಪದಾರ್ಥಗಳನ್ನು ಮಾಂಡವ್ಯ ಋಷಿಗಳ ಹತ್ತಿರ ಇಟ್ಟು, ತಾವು ಅಲ್ಲಿ ಅಡಗಿ ಕುಳಿತರು. ಕಳ್ಳರನ್ನು ಓಡಿಯಲು ಬಂದ ದೂತರು, ಮಾಂಡವ್ಯ ಋಷಿಗಳೇ ಇದಕ್ಕೆ ಪ್ರಚೋದಕರು. ಅಂತೆಯೇ ಕಣ್ಣುಮುಚ್ಚಿ ಕುಳಿತಿದ್ದಾರೆ' ಎಂದು ಬಗೆದು, ಅಲ್ಲಿದ್ದ ಕಳ್ಳರನ್ನೂ, ಮಾಂಡವ್ಯ ಋಷಿಗಳನ್ನು ಕೂಡಿಯೇ ಕರೆದುಕೊಂಡು ಹೋಗಿ ಶಿಕ್ಷಿಸಿ ಶೂಲಕ್ಕೆ ಹಾಕಿದರು. ಕಳ್ಳರು ಸತ್ತರು. ಋಷಿಗಳಿಗೆ ಶೂಲದ ಶಿಕ್ಷೆಯಾದದ್ದನ್ನು ಕೇಳಿ ರಾಜನು ಅಲ್ಲಿಗೆ ಬಂದನು. ಅವರನ್ನು ಬಿಡಿಸಿದನು. ಬದುಕಿ-ಉಳಿದ ಋಷಿಗಳೇ 'ಅಣು ಮಾಂಡವ್ಯರಾದರು'.

ಈ ಕಥೆಗೂ ಯಮನ ಶೂಲಕ್ಕೂ ಏನು ಸಂಬಂಧ? ಅವರ ಯೋಗ್ಯತೆಗೆ ಮೀರಿದ ತಪಸ್ಸೇ ಅವರ ಶಿಕ್ಷೆಗೆ ನಿಜವಾದ ಸಂಬಂಧ. ಅದನ್ನು ಹೇಳಿದ್ದರೆ ಜ್ಞಾನಿಗಳಾದ ಮಾಂಡವ್ಯರು ಒಪ್ಪಬಹುದಾಗಿದ್ದಿತು. ಆದರೆ ಯಮನು ಅದನ್ನು ಹೇಳಲಿಲ್ಲ. ಋಷಿಗಳಲ್ಲಿ ಕ್ರೋಧವನ್ನು ಹೆಚ್ಚಿಸುವ ದೃಷ್ಟಿಯಿಂದ ಒಂದು ಕ್ಷುದ್ರ ಕಾರಣವನ್ನು ಹೇಳಿದರು. ಅದೇನೆಂದರೆ? ನೀವು ಚಿಕ್ಕವರಿರುವಾಗ ಒಂದು ನೊಣಕ್ಕೆ ಮುಳ್ಳನ್ನು ಚುಚ್ಚಿ ಕೊಂದಿರಿ. ಅದಕ್ಕಾಗಿ ಶೂಲದ ಶಿಕ್ಷೆ.

ಯಮನು ಸುಳ್ಳಾಡಿದನೇ? ಇಲ್ಲ ಬಾಲ್ಯದಲ್ಲಿ ಋಷಿಗಳು ಆ ರೀತಿ ಮಾಡಿರಲೂ ಸಾಧ್ಯವಿದೆ. ಆದರೆ ಈಗ ಅದು ಮುಖ್ಯವಲ್ಲ. ಋಷಿಗಳಲ್ಲಿ ಕೋಪ ಹೆಚ್ಚಿಸುವುದೇ ಈಗ ಯಮನ ಗುರಿ.

ಸಣ್ಣ ತಪ್ಪಿಗೆ ದೊಡ್ಡ ಶಿಕ್ಷೆಯೇ? ಎಂದು ಋಷಿಗಳು ಕೋಪಿಷ್ಠರಾಗಿ ಶಾಪವಿತ್ತರು. ಅವರ ತಪಸ್ಸು ಹಾಳಾಯಿತು.

ಪಿ.ಪಿ. ನಮ್ಮ ಯೋಗ್ಯತೆಗೆ ಮೀರಿ ಯಾವ ಕಾರ್ಯವನ್ನು ಮಾಡಬಾರದು. ಅದು ಪುಣ್ಯಕಾರ್ಯವಾದರೂ ದೇವರಿಗೆ ಪ್ರೀತಿಯಾಗುವುದಿಲ್ಲ. ಅದರಿಂದ ಲಾಭಕ್ಕೆ ಬದಲಾಗಿ ಹಾನಿಯೇ ನಿಶ್ಚಿತ. ಅದಕ್ಕೆ ಮಾಂಡವ್ಯ ಋಷಿಗಳೇ ಸಾಕ್ಷಿ.

ಸಜ್ಜನರಿಗೆ, ದೊಡ್ಡವರಿಗೆ ಕೇಡನ್ನು ಎಂದೂ ಬಯಸಬಾರದು. ಅದರಿಂದ ನಮಗೆ ಹಾನಿ. ಮಾಂಡವ್ಯ ಋಷಿಗಳು ಯಮನಿಗೆ ಶಾಪಕೊಟ್ಟರು. ಅದರಿಂದ ಅವರಿಗೆ ಹಾನಿಯಾಯಿತು.

ಸುಳ್ಳು ಆಡಬಾರದು. ಯಮಧರ್ಮನಂಥ ವ್ಯಕ್ತಿ ಸಣ್ಣ ಸುಳ್ಳು ಆಡಿದ್ದರಿಂದ ಶಾಪಗ್ರಸ್ತನಾಗಿ ಶೂದ್ರಯೋನಿಯನ್ನು ಪಡೆಯಬೇಕಾಯಿತು.

'ನೊಣದಂಥ ಚಿಕ್ಕ ಪ್ರಾಣಿಗೂ ಹಿಂಸೆ ಕೊಟ್ಟರೆ, ಅದು ಹಿಂಸೆಯೇ'. ಮಾಂಡವ್ಯರಿಗೆ ಆ ಚಿಕ್ಕ ಹಿಂಸೆಗಾಗಿ ಶೂಲದ ಶಿಕ್ಷೆಯನ್ನು ಅನುಭವಿಸಬೇಕಾಯಿತು. ಅಂತೆಯೇ 'ಅಹಿಂಸೆಯೇ ಶ್ರೇಷ್ಠಧರ್ಮ' ಎಂದು ಹೇಳಿದ್ದಾರೆ.

**ನಾ ಸತ್ಯತಾ ತಸ್ಯ ಚ ತತ್ರ ಹೇತುತಃ**
**ಶಾಪಂ ಗೃಹೀತುಂ ಸ ತಥೈವ ಚೋಕ್ತಾ ।**
**ಆವಾಪ ಶೂದ್ರತ್ವಮಥಾಸ್ಯ ನಾಮ**
**ಚಕ್ರೇ ಕೃಷ್ಣಃ ಸರ್ವ ವಿಶ್ವಂ ತಥಾ ದಾತ್ (ತ್ತಃ) ॥೧೪೦॥**

ಇಲ್ಲಿ ಯಮನು ಸುಳ್ಳಾಡಿದನೇ? ಇಲ್ಲ. ಅಲ್ಲದೆ ಸುಳ್ಳಾಡುವುದೂ ಅವನ ಉದ್ದೇಶವಾಗಿರಲಿಲ್ಲ.

ನೊಣದ ಹಿಂಸೆಗೂ ಶೂಲ ಇದ್ದದ್ದೇ. ಯೋಗ್ಯತೆಗೆ ಮೀರಿದ ತಪಸ್ಸಿಗೂ ಶಿಕ್ಷೆಯಿದ್ದದ್ದೇ. ಆದರೆ ಶಾಪವನ್ನು ಗ್ರಹಿಸುವುದಕ್ಕಾಗಿಯೇ ಯಮನು ಹಾಗೆ ಹೇಳಿದನು. ಶೂದ್ರತ್ವವನ್ನು ಪಡೆದನು. ವ್ಯಾಸರು ಆತನಿಗೆ ಯೋಗ್ಯ ಹೆಸರನ್ನಿಟ್ಟರು. ಸರ್ವಜ್ಞತ್ವವನ್ನೂ ಕೊಟ್ಟರು.

**ವಿದ್ಯಾರತೇರ್ವಿದುರೋ ನಾಮ ಚಾಯಂ**
**ಭವಿಷ್ಯತಿ ಜ್ಞಾನ ಬಲೋಪಪನ್ನಃ ।**
**ಮಹಾ ಧನುರ್ಬಾಹು ಬಲಾಧಿ ಕಶ್ಚ**
**ಸುನೀತ ಮಾನಿತ್ಯಪದಾತ್ ಸ ಕೃಷ್ಣಃ ॥೧೪೧॥**

ಇಲ್ಲಿ 'ವಿದುರ' ಎಂಬ ಹೆಸರಿಗೆ ಅನ್ವರ್ಥವಾದ ಸ್ಪಷ್ಟೀಕರಣ ನೀಡಿದ್ದಾರೆ.

ವ್ಯಾಸರಂಥವರು 'ಹೆಸರು' ಇಡಬೇಕಾದರೆ ಸುಮ್ಮನೆ ಇಡುವರೇ? ಶಾಸ್ತ್ರ-ವಿದ್ಯೆಯಲ್ಲಿ ರತನಾದ ಪ್ರಯುಕ್ತ, ಆತನನ್ನು 'ವಿದುರ' ಎಂದು ಕರೆದರು. ಅಷ್ಟೇ ಅಲ್ಲ ಭವಿಷ್ಯದಲ್ಲೂ ಆತನು ಜ್ಞಾನದಲ್ಲಿ ಸಂಪನ್ನನಾಗುತ್ತಾನೆ. ಧನುರ್ವಿದ್ಯೆ ಮತ್ತು ಬಾಹುಬಲ ಇವುಗಳಲ್ಲಿ ಶ್ರೇಷ್ಠನಾಗಿ ಪರಾಕ್ರಮಿಯಾಗುತ್ತಾನೆ. ಜೊತೆಯಲ್ಲಿ ನೀತಿವಂತನೂ, ಮಾನದನೂ ಆಗುತ್ತಾನೆಂಬ ಭವಿಷ್ಯವನ್ನೂ ಸೂಚಿಸಿದ್ದಾರೆ.

**ಜ್ಞಾತ್ವಾಸ್ಯ ಶೂದ್ರತ್ವಮಥಾಸ್ಯ ಮಾತಾ**
**ಪುನಶ್ಚ ಕೃಷ್ಣಂ ಪ್ರಣತಾ ಯಯಾಚೇ ।**
**ಅಂಬಾಲಿಕಾಯಾಂ ಜನಯಾನ್ಯಮಿತ್ಯಥೋ**
**ನೈಚ್ಛತ್ಸ ಕೃಷ್ಣೋಽಭವದಪ್ಯದೃಶಃ ॥೧೪೨॥**

ಆ ಮಗನು ಶೂದ್ರನೆಂದು ತಿಳಿದ ಬಳಿಕ, ತಾಯಿಯಾದ ಸತ್ಯವತಿಯು ಪುನಃ ನಮಸ್ಕರಿಸುತ್ತ, ಅಂಬಾಲಿಕೆಯಲ್ಲಿ ಇನ್ನೊಬ್ಬ ಮಗನನ್ನು ಪಡೆದು ಕೊಡು ಎಂದು ಕೃಷ್ಣ (ವ್ಯಾಸ)ರಲ್ಲಿ ಯಾಚಿಸಿದಳು. ಅದನ್ನು ವ್ಯಾಸರು ಇಚ್ಛಿಸಲಿಲ್ಲ. ಅಲ್ಲದೆ ಅದೃಶ್ಯರೂ ಆದರು.

ಅಂತೆಯೇ 'ಅತಿ ಸರ್ವತ್ರ ವರ್ಜಯೇತ್' ಎಂಬ ಮಾತು ಪ್ರಸಿದ್ಧವಾಗಿರಬಹುದೇ?

**ಯೋಗ್ಯಾನಿ ಕರ್ಮಾಣಿ ತತಸ್ತು ತೇಷಾಂ**
**ಚಕಾರ ಭೀಷ್ಮೋ ಮುನಿಭಿರ್ಯಥಾವತ್ ।**
**ವಿದ್ಯಾಃ ಸಮಸ್ತಾ ಅದದಾಚ್ಚ ಕೃಷ್ಣಃ**
**ತೇಷಾಂ ಪಾಂಡೋರಸ್ತ್ರ ಶಸ್ತ್ರಾಣಿ ಭೀಷ್ಮಃ ॥೧೪೩॥**

ನಂತರ ಭೀಷ್ಮರು ಮುನಿಗಳಿಂದ ಕೂಡಿಕೊಂಡು ಆ ಮಕ್ಕಳಿಗೆ ಯೋಗ್ಯವಾದ ಕರ್ಮ (ಸಂಸ್ಕಾರ) ಗಳನ್ನು ಯಥಾವಿಧಿಯಾಗಿ ಪೂರೈಸಿದರು. ವೇದವ್ಯಾಸರು ಎಲ್ಲರಿಗೂ ಎಲ್ಲ ವಿದ್ಯೆಗಳನ್ನು ಕಲಿಸಿದರು. ಭೀಷ್ಮರು ಪಾಂಡವರಿಗೆ ಮಾತ್ರ ಅಸ್ತ್ರ-ಶಸ್ತ್ರಗಳ ಅಭ್ಯಾಸವನ್ನು ಮಾಡಿಸಿದರು.

ಇಲ್ಲಿ ವ್ಯಾಸರು ಮತ್ತು ಭೀಷ್ಮರು ಇಬ್ಬರೂ ವರ್ಣಾಶ್ರಮ ಧರ್ಮಗಳನ್ನು ಪಾಲಿಸಿದ್ದಾರೆ ಎಂದು ಬೇರೆ ಹೇಳಬೇಕೇ?

**ತೇ ಸರ್ವವಿದ್ಯಾ ಪ್ರವರಾ ಬಭೂವುಃ**
**ವಿಶೇಷತೋ ವಿದುರಃ ಸರ್ವವೇತ್ತಾ ।**
**ಪಾಂಡುಃ ಸಮಸ್ತಾಸ್ತ್ರ ವಿವೇಕ ವೀರೋ**
**ಜಿಗಾಯ ಪೃಥ್ವೀಮಖಿಲಾಂ ಧನುರ್ಧರಃ ॥೧೪೪॥**

ಅವರೆಲ್ಲರೂ ಸರ್ವವಿದ್ಯೆಗಳಲ್ಲಿ ಶ್ರೇಷ್ಠರಾದರು. ವಿಶೇಷವಾಗಿ ವಿದುರನು ಮಾತ್ರ ಎಲ್ಲವನ್ನೂ ಬಲ್ಲವನಾಗಿದ್ದನು. ಪಾಂಡುರಾಜನು ಸಮಸ್ತ ಅಸ್ತ್ರಗಳನ್ನು ಬಲ್ಲವರಲ್ಲಿ ಒಬ್ಬನೇ ವೀರನಾಗಿದ್ದನು. ಅಂತೆಯೇ ಆ ಧನುರ್ಧರನು ಸಕಲ ಪೃಥ್ವಿಯನ್ನು ಗೆದ್ದನು.

ಸಂಜಯನ ಜನನ

**ಗವಾಲ್ಗಣಾದಾಸ ತಥೈವ ಸೂತಾತ್**
**ಸಮಸ್ತ ಗಂಧರ್ವಪತಿಃ ಸತುಂಬುರುಃ ।**
**ಯ ಉದ್ವಹೋ ನಾಮ ಮರುತ್ತದಂಶ**
**ಯುಕ್ತೋ ವಶೀ ಸಂಜಯ ನಾಮಧೇಯಃ ॥೧೪೫॥**

ಸಮಸ್ತ ಗಂಧರ್ವರ ಅಧಿಪತಿ ತುಂಬುರನು. ಅವನು ಉದ್ವಹ ಎಂಬ ವಾಯು ಅಂಶದಿಂದ ಯುಕ್ತನಾಗಿ, ಎಲ್ಲ ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟುಕೊಂಡವನಾಗಿ, ವಿಚಿತ್ರವೀರ್ಯನ ಸಾರಥಿಯಾದ ಗವಾಲ್ಗನನಲ್ಲಿ ಹುಟ್ಟಿದನು. ಅವನೇ ಸಂಜಯನು.

**ವಿಚಿತ್ರವೀರ್ಯಸ್ಯ ಸ ಸೂತಪುತ್ರಃ**
**ಸಖಾ ಚ ತೇಷಾಮಧವತ್ ಪ್ರಯತ್ನಃ ।**
**ಸಮಸ್ತ ವಿನ್ಮತಿಮಾನ್ ವ್ಯಾಸ ಶಿಷ್ಯೋ**
**ವಿಶೇಷತೋ ಧೃತರಾಷ್ಟ್ರಾನುವರ್ತೀ ॥೧೪೬॥**

ವಿಚಿತ್ರವೀರ್ಯನ ಆ ಸೂತ ಪುತ್ರನು, ಧೃತರಾಷ್ಟ್ರ, ಪಾಂಡು ಅವರೆಲ್ಲರಿಗೂ ಸಖನೂ, ಮಿತ್ರನೂ ಆಗಿದ್ದನು. ಆತನು ಸರ್ವಜ್ಞರಾದ ವ್ಯಾಸರ ಶಿಷ್ಯನೂ ಅಹುದು. ವಿಶೇಷವಾಗಿ ಧೃತರಾಷ್ಟ್ರನಿಗೆ ಪ್ರೀತಿಯವನೂ ಅನುವರ್ತಿಯೂ ಆಗಿದ್ದನು.

'ಸಂಜಯ' ಎಂದರೆ ಎಲ್ಲ ಇಂದ್ರಿಯಗಳನ್ನು ಜಯಿಸಿದವನು.

ಧೃತರಾಷ್ಟ್ರನ ಮದುವೆ.

**ಗಾಂಧಾರ ರಾಜಸ್ಯ ಸುತಾಮುವಾಹ**
**ಗಾಂಧಾರಿ ನಾಮ್ನೀಂ ಸಬಲಸ್ಯ ರಾಜಾ ।**
**ಜ್ಯೇಷ್ಠೋ ಜ್ಯೇಷ್ಠಾ ಶಕುನೇ ದ್ವಾಪರಸ್ಯ**
**ನಾಸ್ತಿಕ್ಯ ರೂಪಸ್ಯ ಕುಕರ್ಮಹೇತೋಃ ॥೧೪೭॥**

ಭೀಷ್ಮಾಚಾರ್ಯರು ಜ್ಯೇಷ್ಠನಾದ ಧೃತರಾಷ್ಟ್ರನಿಗೆ ಮದುವೆ ಮಾಡಬೇಕೆಂದು ಬಯಸಿದರು.

ಗಾಂಧಾರದ ರಾಜ ಸಬಲ. ಅವನ ಮಗಳು ಗಾಂಧಾರಿ. (ಅವಳು ಧೃತರಾಷ್ಟ್ರನ ನಿಯತ ಪತ್ನಿಯೂ ಅಹುದು.) ಅವಳು ಶಕುನಿಗೆ ಅಕ್ಕ.

'ಶಕುನಿಯು' ನಾಸ್ತಿಕರಲ್ಲಿ ಶ್ರೇಷ್ಠನು. 'ಪರಲೋಕವೇ ಇಲ್ಲ. ಪರಮಾತ್ಮನೇ ಇಲ್ಲ' ಎಂದು ವಾದಿಸತಕ್ಕವನು. ಮಿಥ್ಯಾಜ್ಞಾನಕ್ಕೆ ಮೂಲನು. ಸಂಶಯ ಜ್ಞಾನಕ್ಕೆ ಅಧಿಪತಿ. ಅವನು ಕುಕರ್ಮಗಳನ್ನು ಮಾಡುವುದಕ್ಕಾಗಿಯೇ ಇಲ್ಲಿ ಅವತರಿಸಿದ್ದನು. ಮೂಲ ರೂಪದಲ್ಲಿ ಇವನು 'ದ್ವಾಪರ' ಎಂಬ ದುಷ್ಟ ಜೀವಿ.

**ಶಕುನಿರ್ನಾಮ ಯಸ್ತ್ವಾಸೀದ್ರಾಜಾ ಲೋಕೇ ಮಹಾರಥಃ ।**
**ದ್ವಾಪರಂ ವಿದ್ಧಿ ತಂ ರಾಜನ್ ಸಂಭೂತಮರಿಮರ್ದನಮ್ ॥**

ಈ ಶ್ಲೋಕವು ಕೂಡ 'ದ್ವಾಪರ' ಎಂಬುವನೇ ಶಕುನಿ ಎಂದು ಪುಷ್ಟೀಕರಿಸುತ್ತದೆ.

ಆ ಗಾಂಧಾರಿಯನ್ನು ತಂದು ಧೃತರಾಷ್ಟ್ರನಿಗೆ ಮದುವೆ ಮಾಡಿದರು. ಶಕುನಿಯು ಕೂಡ ಅಕ್ಕನ ಜೊತೆಯಲ್ಲಿ ಹಸ್ತಿನಾವತಿಗೆ ಬಂದನು.

**ಶೂರಸ್ಯ ಪುತ್ರೀ ಗುಣಶೀಲ ರೂಪ**
**ಯುಕ್ತಾ ದತ್ತಾ ಸಖ್ಯುರೇವ ಸ್ವಪಿತ್ರಾ ।**
**ನಾಮ್ನಾ ಪೃಥಾ ಕುಂತಿ ಭೋಜಸ್ಯ ತೇನ**
**ಕುಂತೀ ಭಾರ್ಯಾ ಪೂರ್ವದೇಹೇಽಪಿ ಪಾಂಡೋಃ ॥೧೪೮॥**

ನಂತರ ಭೀಷ್ಮಾಚಾರ್ಯರು ಪಾಂಡುರಾಜನಿಗಾಗಿ,

ಶೂರಸೇನ ರಾಜನ ಮಗಳು ಪೃಥಾ, ಅವಳು ಗುಣಶೀಲಳೂ, ಸುಂದರಿಯೂ ಆಗಿದ್ದಳು. ಆಕೆಯನ್ನು 'ಕುಂತಿ' ಎಂದು ಕೂಡ ಕರೆಯುತ್ತಿದ್ದರು. ಅವಳು ಪಾಂಡುರಾಜನ ಪೂರ್ವಜನ್ಮದ ನಿಯತ ಪತ್ನಿಯೂ ಅಹುದು.

ಎರಡು ಹೆಸರಿಗೆ ಕಾರಣಳು. ಶೂರರಾಜನ ಮನೆಯಲ್ಲಿ ಹುಟ್ಟಿದಾಗ ಆಕೆಗೆ 'ಪೃಥಾ' ಎಂದೇ ಕರೆದರು. ಶೂರರಾಜನ ಗೆಳೆಯ ಕುಂತೀ ಭೋಜ. ಆತನಿಗೆ ಮಕ್ಕಳಿರಲಿಲ್ಲ. ಕಾರಣ ಶೂರರಾಜನು ತನ್ನ ಮಗಳನ್ನು ಮಿತ್ರನಿಗೆ ಕೊಟ್ಟು ಮಗಳನ್ನಾಗಿ ರಕ್ಷಿಸುವಂತೆ ಹೇಳಿದನು. ಕುಂತಿ ಭೋಜನ ಮನೆಯಲ್ಲಿ ಬೆಳೆದಿದ್ದ ಕಾರಣ ಆ ಮಗುವನ್ನು ಜನರು 'ಕುಂತೀ' ಎಂದೇ ಕರೆದರು.

ವಿ.ವಿ. ಅಂದಿನ ಜನರಲ್ಲಿ ಮಿತ್ರತ್ವ ಹೇಗಿತ್ತೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕುಂತಿ ಭೋಜನ ಮೂಲ ಸ್ವರೂಪ.

**ಕೂರ್ಮಶ್ಚ ನಾಮ್ನಾ ಮರುದೇವ ಕುಂತಿ–**
**ಭೋಜೋಽಥೈನಾಂ ವರ್ಧಯಾಮಾಸ ಸಮ್ಯಕ್ ।**
**ತತ್ರಾಗಮಚ್ಛಂಕರಾಂಶೋಽತಿ ಕೋಪೋ**
**ದುರ್ವಾಸಾಸ್ತಂ ಪ್ರಾಹ ಮಾಂ ವಾಸಯೇತಿ ॥೧೪೯॥**

ಕುಂತಿಭೋಜನು ಪೂರ್ವದಲ್ಲಿ 'ಕೂರ್ಮ' ಎಂಬ ಮರುತನು. ಇಂದು ಕುಂತಿಭೋಜನು ನಾಕುಮಗಳನ್ನು ಪ್ರೀತಿಯಿಂದ ಚೆನ್ನಾಗಿ ಬೆಳೆಸಿದನು. ಒಂದು ದಿನ ಶಂಕರಾಂಶಜರಾದ ದುರ್ವಾಸರು ಅಲ್ಲಿಗೆ ಆಗಮಿಸಿದರು.

ಅವರು ಅತಿ ಕೋಪಿಷ್ಠರೂ ಕೂಡ. "ನನಗೆ ಇಲ್ಲಿ ಚಾತುರ್ಮಾಸ್ಯ ವ್ರತಕ್ಕೆ ಅನುಕೂಲ ಮಾಡಿಕೊಡು" ಎಂದು ರಾಜನನ್ನು ಕೇಳಿದರು.

**ತಮಾಹ ರಾಜಾ ಯದಿ ಕನ್ಯಕಾಯಾ**
**ಕ್ಷಮಿಷ್ಯಸೇ ಶಕ್ತಿತ: ಕರ್ಮಕರ್ತ್ರ್ಯಾ: ।**
**ಸುಖಂ ವಸೇತ್ಯೋಮಿತಿ ತೇನ ಚೋಕ್ತೇ**
**ಶುಶ್ರೂಷಣಾಯಾದಿಶದಾಶು ಕುಂತೀಮ್ ॥೧೫೦॥**

"ಕನ್ನಿಕೆಯಾದ ಕುಂತಿಯು ತನ್ನ ಶಕ್ತಿಗನುಸರಿಸಿ ತಮ್ಮ ಸೇವೆ ಮಾಡುತ್ತಾಳೆ. ಏನಾದರೂ ನ್ಯೂನತೆಗಳಿದ್ದಾಗ್ಗೆ, ತಾವು ಕ್ಷಮಿಸುವಿರಾದರೆ, ಅವಶ್ಯವಾಗಿ ತಾವು ವಾಸಿಸಬಹುದು" ಎಂದು ರಾಜನು ಹೇಳಿದನು. ಅದಕ್ಕೆ ಋಷಿಗಳು, 'ಓಂ' ಎಂದು ಒಪ್ಪಿಗೆಯನ್ನಿತ್ತರು. ಅವರ ಸೇವೆಗಾಗಿ ಕುಂತಿಯನ್ನು ನಿಯಮಿಸಿದರು.

**ಚಕಾರ ಕರ್ಮ ಸಾ ಪೃಥಾ ಮುನೇ: ಸುಕೋಪನಸ್ಯ ಹಿ ।**
**ಯಥಾನ ಶಕ್ಯತೇ ಪರೈ: ಶರೀರವಾಙ್ಮನೋಽನುಗಾ ॥೧೫೧॥**

ಆ ಕೋಪಿಷ್ಠರಾದ ದುರ್ವಾಸ ಮುನಿಗಳ ಸೇವೆಯನ್ನು ಪೃಥಾದೇವಿಯು ಕಾಯಾ ವಾಚಾ ಮನಸಾ ಬಹು ಭಕ್ತಿಯಿಂದ ಮಾಡಿದಳು. ಅಂತಹ ಸೇವೆಯು ಇನ್ನೊಬ್ಬರಿಂದ ಅಶಕ್ಯವೇ ಎಂದು ಹೇಳಬಹುದಾಗಿದ್ದಿತು.

**ಸ ವತ್ಸರತ್ರಯೋದಶಂ ತಯಾ ಯಥಾವದರ್ಚಿತ: ।**
**ಉಪಾದಿಶತ್ ಪರಂ ಮನುಂ ಸಮಸ್ತ ದೇವವಶ್ಯದಮ್ ॥೧೫೨॥**

ಅವಳು, (ಆ ಪೃಥಾ) ಋಷಿಗಳ ಸೇವೆಯನ್ನು ಹದಿಮೂರು ವರ್ಷ ಒಂದೇ ರೀತಿಯಿಂದ ಮಾಡಿದಳು. ಇದರಿಂದ ಸಂತುಷ್ಟರಾದ ಮುನಿಗಳು 'ಸರ್ವದೇವತಾ ವಶೀಕರಣ' ಮಂತ್ರವನ್ನು ಅವಳಿಗೆ ಉಪದೇಶಿಸಿದರು.

'ಪರಂ ಮನುಂ' ಎಂಬ ಪದದಿಂದ, ಆ ಮಂತ್ರದಲ್ಲಿ ಎಲ್ಲ ದೇವತೆಗಳ ವಶೀಕರಣ ಅಡಕವಾಗಿದೆ ಎಂದು ವ್ಯಕ್ತವಾಗುದೆ.

ವಿ.ವಿ. ಇಲ್ಲಿಯೇ ಮಹಾಭಾರತ ವೃಕ್ಷದ 'ಬೀಜ' ಹಾಕಲಾಯಿತು ಎಂದು ಹೇಳಬಹುದೇ?

**ಋತೌ ತು ಸಾ ಸಮಾಪ್ಲುತಾ ಪರೀಕ್ಷಣಾಯ ತನ್ಮನೋಃ ।**
**ಸಮಾಹ್ವಯದ್ದಿವಾಕರಂ ಸ ಚಾಜಗಾಮ ತತ್ ಕ್ಷಣಾತ್ ॥೧೫೩॥**

ಋತು ಸ್ನಾನದ ನಂತರ, ಮಂತ್ರದ ಸಾಮರ್ಥ್ಯವನ್ನು ಪರೀಕ್ಷಿಸಬೇಕೆಂದು ಒಗೆದು ಸೂರ್ಯದೇವನನ್ನು ಭಕ್ತಿಪೂರ್ವಕ ಕರೆದಳು. ಆಗ ಸೂರ್ಯದೇವನು ಆ ಕ್ಷಣದಲ್ಲಿಯೇ ಪ್ರತ್ಯಕ್ಷನಾದನು.

**ತತೋ ನ ಸಾ ವಿಸರ್ಜಿತುಂ ಶಶಾಕ ತಂ ವಿನಾ ರತಿಮ್ ।**
**ಸುವಾಕ್ಯಯತ್ನತೋಽಪಿ ತಾಮಥಾ ಸಸಾದ ಭಾಸ್ಕರಃ ॥೧೫೪॥**

ಆಗ ಅವಳು ಎಷ್ಟು ಒಳ್ಳೆಯ ಮಾತುಗಳನ್ನಾಡಿದರೂ, ರತಿಕ್ರೀಡೆಯಿಂದ ತಪ್ಪಿಸಿ ಅವನನ್ನು ತಿರುಗಿ ಕಳಿಸಲು ಸಾಧ್ಯವಾಗಲಿಲ್ಲ. ಭಾಸ್ಕರನು ಅವಳಿಗೆ ಅನುಗ್ರಹಿಸಿಯೇ ಬಿಟ್ಟನು.

ವಿ.ವಿ. ಇಲ್ಲಿ ಆಚಾರ್ಯರು, 'ಸುವಾಕ್ಯಯತ್ನ' ಎಂಬ ಪದವನ್ನು ಬಹು ಚಮತ್ಕಾರವಾಗಿ ಬಳಸಿದ್ದಾರೆ. ಈ ಪದವು ಪೃಥಾ (ಕುಂತಿ) ಮತ್ತು ಭಾಸ್ಕರ ಇಬ್ಬರಿಗೂ ಅನ್ವಯವಾಗುತ್ತದೆ.

ಕುಂತಿಯ ಪರವಾಗಿ:– ಕೈಜೋಡಿಸಿ, ವಿನಯದಿಂದ, "ನಾನು ಕನ್ಯೆ. ಮದುವೆಯಾಗಿಲ್ಲ. ಈಗ ಪುತ್ರಪ್ರಾಪ್ತಿ ಸರಿಯಲ್ಲ" ಎಂದು ಬಹು ಒಳ್ಳೆಯ ಮಾತುಗಳಿಂದ ಬೇಡಿಕೊಂಡಳು.

ಸೂರ್ಯನ ಪರವಾಗಿ:– ಮಂದಸ್ಮಿತನಾಗಿ "ಎಲೈ ಸುಂದರಿಯೇ, ನೀನು ಚಿಂತಿಸಬೇಡ. ಇದರಿಂದ ನಿನಗೆ ಯಾವ ಅಪಾಯವೂ ಇಲ್ಲ. ಕನ್ಯಾತ್ವಕ್ಕೆ ನಾಶವಿಲ್ಲ" ಎಂದು ನಾನಾ ರೀತಿಯಿಂದ ಒಳ್ಳೆಯ ಮಾತುಗಳನ್ನು ಅನುಗ್ರಹಿಸಿದನು. 'ಕನ್ಯಾತ್ವಕ್ಕೆ' ನಾಶವಿಲ್ಲ ಎಂಬ ಮಾತನ್ನು ಲಕ್ಷಿಸಬೇಕು.

**ಸ ತತ್ರ ಜಜ್ಞಿವಾನ್ ಸ್ವಯಂ ದ್ವಿತೀಯ ರೂಪಕೋ ವಿಭುಃ ।**
**ಸ ವರ್ಮದಿವ್ಯಕುಂಡಲೋಜ್ವಲನ್ನಿವಸ್ವತೇಜಸಾ ॥೧೫೫॥**

ಆಗ ಅಲ್ಲಿ ಸೂರ್ಯದೇವನು, ದಿವ್ಯವಾದ ಸುವರ್ಣಕರ್ಣಕುಂಡಲಗಳಿಂದ, ಉತ್ತಮ ಕವಚದಿಂದ ಶೋಭಿತನಾಗಿ ಉಜ್ವಲ ತೇಜಸ್ಸಿನಿಂದ ಕೂಡಿದವನಾಗಿ ಸ್ವಯಂ ತಾನೇ ಎರಡನೆಯ ರೂಪದಿಂದ ಉದ್ಭವಿಸಿದನು. 'ಉದ್ಭವಿಸಿದನು' ಎಂಬುದನ್ನು ಗಮನಿಸಬೇಕು.

ಪುರಾ ಸ ವಾಲಿಮಾರಣ ಪ್ರಭೂತ ದೋಷ ಕಾರಣಾತ್ ।
ಸಹಸ್ರ ವರ್ಮನಾಮಿನಾಸುರೇಣವೇಷ್ಟಿತೋಽ ಜನಿ ॥೧೫೬॥

ಇಲ್ಲಿ ಶ್ರೀಮದಾಚಾರ್ಯರು ಆ ಮಗುವಿನ ಪೂರ್ವ ವೃತ್ತಾಂತವನ್ನು ಸೂಚಿಸುತ್ತಾರೆ.

ಪೂರ್ವದಲ್ಲಿ ಇದೇ ಸೂರ್ಯನು ಸುಗ್ರೀವನಾಗಿ ವಾಲಿಯನ್ನು ಕೊಲ್ಲಿಸಿದ್ದನು. ಆ ದೋಷದ ಪ್ರಯುಕ್ತ ಇಂದು ಇಲ್ಲಿ 'ಸಹಸ್ರವರ್ಮ' ಎಂಬ ಅಸುರನ ಆವೇಶಹೊಂದಿ ಹುಟ್ಟಿದ್ದಾನೆ.

'ಸಹಸ್ರವರ್ಮ' ಇದರ ಸಂಕ್ಷಿಪ್ತ ರೂಪವೇ 'ವರ್ಮ' ಅದನ್ನೇ ೧೫೫ನೆಯ ಶ್ಲೋಕದಲ್ಲಿ ಬಳಸಲಾಗಿದೆ.

ಅಸುರಾವೇಶದ ಫಲ.

**ಯಥಾ ಗ್ರಹೈರ್ವಿದೂಷ್ಯತೇ ಮತಿರ್ನೃಣಾಂ ತಥೈವ ಹಿ ।**
**ಅಭೂಚ್ಚ ದೈತ್ಯದೂಷಿತಾ ಮತಿರ್ದಿವಾಕರಾತ್ಮನಃ ॥೧೫೭॥**
**ತಥಾಪಿ ರಾಮಸೇವನಾದ್ಧರೇಶ್ಚ ಸನ್ನಿಧಾನ ಯುಕ್ ।**
**ಸುದರ್ಶನೀಯ ಕರ್ಣತಃ ಸ ಕರ್ಣನಾಮಕೋಽ ಭವತ್ ॥೧೫೮॥**

ಮಾನವನಿಗೆ ಪಿಶಾಚಿಯ ಬಾಧೆಯಾದಾಗ ಹೇಗೆ ಬುದ್ಧಿಯು ದೂಷಿತವಾಗುತ್ತದೆಯೋ, ಅದೇ ರೀತಿಯಾಗಿ ದೈತ್ಯನ ಆವೇಶದಿಂದ ಸೂರ್ಯಪುತ್ರನ ಬುದ್ಧಿಯೂ ಕಲುಷಿತವಾಯಿತು.

ಆದರೂ ರಾಮಾವತಾರದಲ್ಲಿ ಸಾಕಷ್ಟು ಸೇವೆ ಮಾಡಿದ ಫಲವಾಗಿ ಆವೇಶದ ಹೆಚ್ಚು ಪರಿಣಾಮ ಆಗುತ್ತಿರಲಿಲ್ಲ.

ಕರ್ಣಕುಂಡಲಗಳಿಂದ ಪ್ರಕಟನಾದ ಪ್ರಯುಕ್ತ ಆತನನ್ನು 'ಕರ್ಣ' ಎಂದೇ ಕರೆದರು.

**ಸ ರತ್ನ ಪೂರ್ಣ ಮಂಜುಷಾಗತೋ ವಿಸರ್ಜಿತೋ ಜಲೇ ।**
**ಜನಾಪವಾದ ಭೀತಿಸ್ತಯಾ ಯಮಸ್ವ ಸುದ್ರ್ಯುತಮ್ ॥೧೫೯॥**
**ನದೀ ಪ್ರವಾಹತೋ ಗತಂ ದದರ್ಶ ಸೂತನಂದನಃ ।**
**ತಮಗ್ರಹೀತ್ ಸರತ್ನಕಂ ಚಕಾರ ಪುತ್ರಕಂ ನಿಜಮ್ ॥೧೬೦॥**

ಆ ಕುಂತೀದೇವಿಯು ಜನಾಪವಾದ ಭೀತಿಯಿಂದ ಆ ಮಗುವನ್ನು ರತ್ನ ತುಂಬಿದ ಮೊರದಲ್ಲಿಟ್ಟು (ಮೊರದ ಬಾಗಿನ ಕೊಟ್ಟಂತೆ) ಜಲದಲ್ಲಿ ವಿಸರ್ಜಿಸಿದಳು.

ಆ ನದಿಯ ಪ್ರವಾಹದಲ್ಲಿ ಹರಿದು ಬರುತ್ತಿರುವ ಮೊರವನ್ನು ಸೂತನಂದನನು (ಅಧಿರಥನು) ಕಂಡನು. ರತ್ನದಿಂದ ಯುಕ್ತವಾದ ಮೊರವನ್ನು, ಅದರಲ್ಲಿರುವ ಪುತ್ರರತ್ನವನ್ನು ಅವನು ಸ್ವೀಕರಿಸಿದನು. ಆ ಮಗುವನ್ನು ತನ್ನ ಮಗನೆಂದೇ ರಕ್ಷಿಸಿದನು.

**ಸೂತೇನಾಧಿರಥೇನ ಲಾಲಿತತನುಸ್ತದ್ಭಾರ್ಯಯಾ ರಾಧಯಾ ।**
**ಸಂವೃದ್ಧೋ ನಿಖಿಲಾಃ ಶ್ರುತೀರಧಿಜಗೌ ಶಸ್ತ್ರಾಣಿ ಮನೋವಸ- ।**
**ಬಾಲ್ಯಾದೇವ ಮಹಾಬಲೋ ನಿಜಗುಣೈಃ ಸಂಭಾಸಮಾನೋವಸ-**
**ನ್ನಾಮ್ನಾಸೌ ವಸುಷೇಣ ತಾಮಗಮದಪ್ಯಾ (ಸ್ಯಾ) ಸೀದ್ವಮಾ**
**ತದ್ವಸು ॥೧೬೧॥**

ಸೂತನಾದ ಅಧಿರಥನು ತಂದ ಆ ಮಗು, ಅವನ ಭಾರ್ಯೆಯಾದ ರಾಧೆಯ ಹತ್ತಿರದಲ್ಲಿ ಲಾಲಿಸಲ್ಪಟ್ಟಿತು. ಅಲ್ಲಿ ಅವನು ಚೆನ್ನಾಗಿ ಬೆಳೆದು ಸಕಲ ವೇದ, ಶಾಸ್ತ್ರ, ಶ್ರುತಿಗಳನ್ನು ಚೆನ್ನಾಗಿ ಕಲಿತನು. ಬಾಲ್ಯದಿಂದಲೇ ಅವನು ಬಲಾಢ್ಯ ಮತ್ತು ಉತ್ರಮ ಗುಣಗಳಿಂದ ಕೂಡಿದವನಾಗಿದ್ದನು. ಆ ಮಗು ವಸುವಿನಲ್ಲಿ (ಬಂಗಾರದಲ್ಲಿ) ವಾಸಿಸಿದ ಕಾರಣದಿಂದ ಆ ಅಧಿರಥನು ಆ ಮಗುವಿಗೆ 'ವಸುಷೇಣ' ಎಂದೇ ಕರೆದನು. 'ವಸುಸೇಷ'

'ವಸು' ಎಂದರೆ ಬಂಗಾರ, 'ಸೇಷ' ಎಂದರೆ ವಾಸ ಮಾಡಿದವ.

'ರಾಧೆ' ಯಲ್ಲಿ ಬೆಳೆದ ಪ್ರಯುಕ್ತ ಅವನು ರಾಧೇಯ ಎಂದು ಕೂಡ ಪ್ರಸಿದ್ಧನಾಗಿದ್ದಾನೆ.

**ಅಥ ಕುಂತೀದತ್ತಾ ಸಾ ಪಂಡೋಃ**
**ಸೋಽಪ್ಯೇತಯಾ ಚಿರಂ ರಮೇ ।**
**ಶೂರಾಚ್ಛೂದ್ರ್ಯಾಂ ಜಾತಾಂ ವಿದುರೋಽವಹ**
**ಧಾರುಣೇಂ ಗುಣಾಢ್ಯಾಂ ಸಃ (ಚ) ॥೧೬೨॥**

ನಂತರ ಕುಂತಿಯನ್ನು ಪಾಂಡುರಾಜನಿಗೆ ಕೊಟ್ಟು ಮದುವೆ ಮಾಡಿದರು. ಪಾಂಡುರಾಜನು ಕುಂತಿಯಿಂದೊಡಗೂಡಿ ಬಹಳ ದಿನಗಳವರೆಗೆ ಸಂತೋಷದಿಂದ ಇದ್ದನು.

ಶೂರರಾಜನಿಗೆ ಶೂದ್ರಕನ್ನಿಕೆಯಲ್ಲಿ ಹುಟ್ಟಿದ 'ಆರುಣಿ' ಎಂಬ ಕನ್ಯೆಯನ್ನು ವಿದುರನು ಮದುವೆ ಮಾಡಿಕೊಂಡನು. ಅವಳು ಒಳ್ಳೆಯ ಗುಣವತಿ ಆಗಿದ್ದಳು.

ಮಾದ್ರಿಯ ಹುಟ್ಟಿನ ಹಿನ್ನೆಲೆ.

**ಅಥ ಚರ್ತಾಯನ ನಾಮಾ ಮದ್ರೇಶಃ ಶಕ್ರತುಲ್ಯ ಪುತ್ರಾರ್ಥೀ ।**
**ಕನ್ಯಾರತ್ನಂ ಚಾಪ್ತುಂ ಚಕ್ರೇ ಬ್ರಾಹ್ಮಂ ತಪೋ ವರಂ ಚಾಪ॥೧೬೩॥**

ಮದ್ರ ದೇಶದ ರಾಜನಾದ ಋತಾಯನನು, ತನಗೆ ಇಂದ್ರನಿಗೆ ಸಮನಾದ ಮಗನಾಗಬೇಕು, ಜೊತೆಯಲ್ಲಿ ಒಂದು ಶ್ರೇಷ್ಠ ಕನ್ಯಾರತ್ನವು ಹುಟ್ಟಬೇಕು ಎಂದು ಭಕ್ತಿಯಿಂದ ಬ್ರಹ್ಮನನ್ನು ಕುರಿತು ತಪಸ್ಸುಮಾಡಿ ವರವನ್ನು ಪಡೆದಿದ್ದನು.

**ಪ್ರಹ್ಲಾದಾವರ ಜೋ ಯಃ**
**ಸಹ್ಲಾದೋ ನಾಮತೋ ಹರೇರ್ಭಕ್ತಃ ।**
**ಸೋಽಭೂದ್ ಬಹ್ಮವರಾಂತೇ**
**ವಾಯೋ ರಾವೇಶಯುಕ್ ಸುತೋ ರಾಜ್ಞಃ ॥೧೬೪॥**

ಪ್ರಹ್ಲಾದ ರಾಜರ ತಮ್ಮ ಸಹ್ಲಾದ. ಆತನು ಮಹಾ ಹರಿಭಕ್ತನು. ಬ್ರಹ್ಮನ ವರವಿದ್ದ ಪ್ರಯುಕ್ತ ಆತನೇ ಋತಾಯನ ರಾಜನಿಗೆ ಮಗನಾಗಿ ಹುಟ್ಟಿದನು. ಆತನಲ್ಲಿ ವಾಯುವಿನ ಆವೇಶವೂ ಇದ್ದಿತು.

**ಸ ಮಾರುತಾವೇಶವಶಾತ್ ಪೃಥಿವ್ಯಾಂ**
**ಬಲಾಧಿಕೋಽಭೂದ್ವರತಶ್ಚ ಧಾತುಃ ।**
**ಶಲ್ಯಶ್ಚ ನಾಮ್ನಾಖಿಲ ಶತ್ರು ಶಲ್ಯೋ**
**ಬಭೂವ ಕನ್ಯಾಸ್ಯ ಚ ಮಾದ್ರನಾಮ್ನಾ ॥೧೬೫॥**

ಆ ಬಾಲಕನಲ್ಲಿ ವಾಯುವಿನ ಆವೇಶ ಮತ್ತು ಬ್ರಹ್ಮನ ವರ, ಎರಡೂ ಇದ್ದುದರಿಂದ ಅವನು ಪೃಥ್ವಿಯಲ್ಲಿ ಬಲಶಾಲಿಯಾಗಿ ಪ್ರಸಿದ್ಧನಾದನು. ವೈರಿಗಳಿಗೆ 'ಶಲ್ಯ' ರೂಪನಾಗಿದ್ದ ಪ್ರಯುಕ್ತ ಅವನಿಗೆ 'ಶಲ್ಯ' ಎಂದೇ ಹೆಸರಿಟ್ಟರು. ಮದ್ರದೇಶದ ರಾಜನ ಮಗಳಾದ ಕಾರಣ ಆ ಕನ್ಯೆಗೆ 'ಮಾದ್ರಿ' ಎಂದು ಕರೆದರು.

ಮಾದ್ರಿಯ ಮೂಲರೂಪ.

**ಸಾ ಪಾಂಡುಭಾರ್ಯೈವ ಚ ಪೂರ್ವಜನ್ಮ**
**ನ್ಯಭೂತ್ಪುನಶ್ಚ ಪ್ರತಿಪಾದಿತಾಸ್ಮೈ ।**
**ಶಲ್ಯಶ್ಚ ರಾಜ್ಯಾಂ ಪಿತೃದತ್ತ ಮಂಜೋ**
**ಜುಗೋಪ ಧರ್ಮೇಣ ಸಮಸ್ತ ಶಾಸ್ತ್ರವಿತ್ ॥೧೬೬॥**

ಮಾದ್ರಿದೇವಿಯವರು ಮೂಲರೂಪದಲ್ಲಿ ಪಾಂಡುರಾಜನ ಪತ್ನಿಯೇ ಆಗಿದ್ದಳು (ನಿಯತಪತ್ನಿ) ಅಂತೆಯೇ ಈಗ ಪಾಂಡುರಾಜನಿಗೆ ಪುನಃ ಪತ್ನಿಯಾಗಿ ಸೇವೆಸಲ್ಲಿಸಲು ಹುಟ್ಟಿದ್ದಾಳೆ.

ತಂದೆಯಿಂದ ಬಂದ ರಾಜ್ಯ ಮತ್ತು ಅಧಿಕಾರವನ್ನು, ಶಲ್ಯರಾಜನು ಧರ್ಮ ಮತ್ತು ಶಾಸ್ತ್ರಗಳ ನಿಯಮಗಳಿಗೆ ಅನುಸರಿಸಿ ಪಾಲಿಸುತ್ತಿದ್ದನು.

**ಅಥಾಂಗನಾರತ್ನಮವಾಪ್ಯ ತದ್ವಯಂ**
**ಪಾಂಡುಸ್ತು ಭೋಗಾನ್ ಬುಭುಜೇ ಯಥೇಷ್ಟಿತಃ ।**
**ಅಶೇಷಲಬ್ಧಧರ್ಮಸಮಾಶ್ರಯೋ ಮಹೀಂ**
**ಜ್ಯೇಷ್ಠಾಪಚಾಯೀ ವಿದುರೋಕ್ತ ಮಾರ್ಗತಃ ॥೧೬೭॥**

ಆ ಕನ್ಯಾರತ್ನವಾದ ಮಾದ್ರಿಯನ್ನು ತಂದಮೇಲೆ, ಪಾಂಡುರಾಜನು ಇಬ್ಬರು ಮಡದಿಯರೊಡನೆ ಯಥೇಷ್ಟವಾಗಿ ಸುಖಜೀವನವನ್ನು ಸಾಗಿಸುತ್ತಿದ್ದನು. ಎಲ್ಲ ಧರ್ಮಗಳಿಗೂ ಆಶ್ರಯನಾಗಿದ್ದು ರಾಜ್ಯವನ್ನು ವಿದುರನ ಮಾರ್ಗದರ್ಶನದಲ್ಲಿ ಪಾಲಿಸುತ್ತಿದ್ದನು. ಅಣ್ಣನನ್ನು ಅನುಸರಿಸಿಕೊಂಡು ಹೋಗುತ್ತಿದ್ದನು.

ಭೀಷ್ಮೋऽಹಿ ರಾಷ್ಟ್ರೇ ಧೃತರಾಷ್ಟ್ರಮೇವ
ಸಂಸ್ಥಾಪ್ಯಪಾಂಡುಂ ಯುವರಾಜಮೇವ
ಚಕ್ರೇ ತಥಾಪ್ಯಂಧ ಇತಿಸ್ಮ ರಾಜ್ಯಂ
ಚಕಾರ ವಾಸವಕರೋಽಚ್ಚ ಪಾಂಡುಃ ॥೧೬೮॥

ರಾಷ್ಟ್ರಕ್ಕೆ ಅಧಿಪತಿಯನ್ನಾಗಿ ಧೃತರಾಷ್ಟ್ರನನ್ನು, ಯುವರಾಜನನ್ನಾಗಿ ಪಾಂಡುವನ್ನು ಭೀಷ್ಮಾಚಾರ್ಯರೇ ನಿಯಮಿಸಿದರು. ಆದರೂ ಧೃತರಾಷ್ಟ್ರನು ಅಂಧನಾದ ಪ್ರಯುಕ್ತ ಪಾಂಡುವೇ ರಾಜ್ಯದ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದನು.

ಭೀಷ್ಮಾಂಬಿಕೇಯೋಕ್ತಿ ಪರಃ ಸದೈವ
ಪಾಂಡುಃ ಶಶಾಸಾವನಿಮೇಕ ವೀರಃ ।
ಅಥಾಂಬಿಕೇಯೋ ಬಹು ಭಿಕ್ಷ ಯಜ್ಞೈ
ರೀಜೇ ಸ ಪಾಂಡಶ್ಚ ಮಹಾಧನೌಘೈಃ ॥೧೬೯॥

ಪಾಂಡುರಾಜನು ಮಹಾವೀರನಿದ್ದ ಕಾರಣ ಆತನಿಗೆ ಎದುರಾಳಿಗಳು ಯಾರೂ ಇರಲಿಲ್ಲ. ಪಾಂಡುರಾಜನು ಭೀಷ್ಮಾಚಾರ್ಯ ಮತ್ತು ಧೃತರಾಷ್ಟ್ರ ಇವರ ಆಜ್ಞೆಯಂತೆಯೇ ನಡೆದುಕೊಳ್ಳುತ್ತಿದ್ದನು. ಪಾಂಡು ಮತ್ತು ಧೃತರಾಷ್ಟ್ರ ಇಬ್ಬರೂ ಕೂಡಿಯೇ ಯಜ್ಞಯಾಗಾದಿಗಳನ್ನು ಮಾಡುತ್ತಿದ್ದರು. ಪಾಂಡು ಬಹಳಷ್ಟು ಸಂಪತ್ತನ್ನು ಸಂಗ್ರಹಿಸಿದನು.

ನೈಷಾ ವಿರೋಧೇ ಕುರುಪಾಂಡವಾನಾಂ
ತಿಷ್ಠೇದಿತಿ ವ್ಯಾಸ ಉದೀರ್ಣ ಸದ್ಗುಣಃ
ಸ್ವಮಾತರಂ ಸ್ವಾಶ್ರಮಮೇವ ನಿನ್ಯೇ
ಸ್ನುಷೇ ಚ ತಸ್ಯಾ ಯಯುತುಃ ಸ್ಮ ತಾಮನು ॥೧೭೦॥

ಭವಿಷ್ಯವನ್ನು ಚೆನ್ನಾಗಿ ಬಲ್ಲ, ಎಲ್ಲಾ ಘಟನೆಗಳನ್ನೂ ಅರಿಯಬಲ್ಲ ವ್ಯಾಸರು, ಕೌರವ ಪಾಂಡವರಲ್ಲಿ ಬೆಳೆಯಬಹುದಾದ ದ್ವೇಷವನ್ನು, ಸತ್ಯವತಿಯಾದ ತಾಯಿಯು ನೋಡದಿರಲಿ ಎಂದು ಆಕೆಯನ್ನು ತಮ್ಮ

ಆಶ್ರಮಕ್ಕೆ ಕರೆದುಕೊಂಡು ಹೋದರು. ಆಕೆಯ ಸೊಸೆಯಂದಿರು ಕೂಡ ಅತ್ತೆಯನ್ನು ಅನುಸರಿಸಿ ನಡೆದರು.

ವಿ.ವಿ. ಎಷ್ಟಾದರೂ ವ್ಯಾಸರು ಸರ್ವಜ್ಞರಲ್ಲವೇ!

**ಸುತೋಕ್ತ ಮಾರ್ಗೇಣ ವಿಚಿಂತ್ಯ ತಂ ಹರಿಂ**
**ಸುತಾತ್ಮನಾ ಬ್ರಹ್ಮತಯಾ ಚ ಸಾ ಯಯೌ ।**
**ಪರಂ ಪದಂ ವೈಷ್ಣವಮೇವ ಕೃಷ್ಣ–**
**ಪ್ರಸಾದತಃ ಸ್ವರ್ಯಯತುಃ ಸ್ನುಷೇ ಚ ॥೧೭೧॥**

ಮಗನು ತೋರಿದ ಮಾರ್ಗದಲ್ಲಿಯೇ ಧ್ಯಾನಗೈದು, ವ್ಯಾಸರನ್ನು ಪರಬ್ರಹ್ಮನೆಂದೇ ಧ್ಯಾನಿಸುತ್ತ ಭಗವಂತನ ಸನ್ನಿಧಾನವಾದ ವೈಕುಂಠವನ್ನು ಸತ್ಯವತಿಯು ಪಡೆದಳು. ಸೊಸೆಯಂದಿರು ಕೂಡ ವ್ಯಾಸರ ಪ್ರಸಾದದಿಂದ ತಮತಮಗೆ ಯೋಗ್ಯವಾದ ಲೋಕಗಳನ್ನು ಪಡೆದರು.

ವಿ.ವಿ. ವ್ಯಾಸರು ಎಲ್ಲ ಸ್ತ್ರೀಯರನ್ನು ಕರೆದೊಯ್ದಿದ್ದಾರೆ. ಒಬ್ಬರಿಗೆ ವೈಕುಂಠ, ಇನ್ನೊಬ್ಬರಿಗೆ ಸತ್ಯಲೋಕ, ಮತ್ತೊಬ್ಬರಿಗೆ ಸ್ವರ್ಗ ದಯಪಾಲಿಸಿದರು ಎಂದು ಬೇರೆಡೆಗೆ ಬಂದಿದೆ. ಇದು ಪಕ್ಷಪಾತ ಆಗಲಿಲ್ಲವೇ?

ಇಲ್ಲಿಯೇ ತಾರತಮ್ಯದ ಗುಟ್ಟು ಅಡಗಿದೆ. ಎಲ್ಲ ಜೀವರು ಸಮಾನರಲ್ಲ. ಅವರವರ ಭಕ್ತಿ, ಜ್ಞಾನ ಮತ್ತು ವಿಶ್ವಾಸಗಳೇ ಈ ವ್ಯತ್ಯಾಸಕ್ಕೆ ಕಾರಣ. ಸತ್ಯವತಿಯಲ್ಲಿದ್ದ ನಂಬಿಕೆ, ಭಕ್ತಿ ಸೊಸೆಯಂದಿರರಲ್ಲಿರಲಿಲ್ಲ ಎಂಬುದನ್ನು ಓದುಗರು ಬಲ್ಲರು. ಅಷ್ಟೇ ಏಕೆ, ದಾಸಿಯಲ್ಲಿದ್ದ ಜ್ಞಾನ ಭಕ್ತಿಗಳು ಅಂಬಿಕೆ–ಅಂಬಾಲಿಕೆಯರಿಗೆ ಇರಲಿಲ್ಲ. ಕಾರಣ ಅವರು ಯೋಗ್ಯತೆಗೆ ಅನುಗುಣವಾಗಿ ಫಲಗಳನ್ನು ಪಡೆದಿದ್ದಾರೆ. ಇದರಲ್ಲಿ ವ್ಯಾಸರ ದೃಷ್ಟಿಯಲ್ಲಿ ವೈಷಮ್ಯ ಎಲ್ಲಿಂದ ಬಂತು?

**ಮಾತಾ ಚ ಸಾ ವಿದುರಸ್ಯಾಪ ಲೋಕಂ**
**ವೈರಿಂಚಮನ್ವೇನ ಗತಾಂಬಿಕಾಂ ಸತೀ ।**
**ವ್ಯಾಸ ಪ್ರಸಾದಾತ್ ಸುತಸದ್ಗುಣೈಶ್ಚ**
**ಕಾಲೇನ ಮುಕ್ತಿಂ ಚ ಜಗಾಮ ಸನ್ಮತಿಃ ॥೧೭೨॥**

ವಿದುರನ ತಾಯಿಗೆ ಬ್ರಹ್ಮನ ಲೋಕ ಪ್ರಾಪ್ತವಾಯಿತು. ಇದಕ್ಕೆ ಮೂರು ಕಾರಗಳುಂಟು. ೧. ವಿದುರನಂಥ ಸುಪುತ್ರನನ್ನು ಪಡೆದಿದ್ದಳು, ೨. ವ್ಯಾಸರ ಸೇವೆಯನ್ನು ಭಕ್ತಿಪೂರ್ವಕ ಮಾಡಿ ಅನುಗ್ರಹವನ್ನು ಸಂಪಾದಿಸಿದ್ದಳು, ೩. ಅಲ್ಲದೆ ಆಕೆಯು ಸುಜೀವಿ ಆಗಿರಲೇಬೇಕು. ಆದರೂ ಮೊದಲು ಸತ್ಯಲೋಕ ನಂತರ ಮುಕ್ತಿಯನ್ನು ಪಡೆದಿದ್ದಾಳೆ.

ವಿ.ವಿ. ೧. " ಅಪುತ್ರಸ್ಯ ಗತಿರ್ನಾಸ್ತಿ" ಎಂಬುದು ಇದನ್ನೇ ಹೇಳುತ್ತದೆ. ಕೇವಲ ಮಕ್ಕಳಲ್ಲ, ಒಳ್ಳೆಯ ಮಕ್ಕಳಿದ್ದಾಗ ಮಾತ್ರ ತಂದೆ-ತಾಯಿಗಳಿಗೆ ಪರಲೋಕ ಸಾಧ್ಯ.

೨. ಪರಮಾತ್ಮನ ಸೇವೆ ಎಂದೂ ವ್ಯರ್ಥವಾಗಲಾರದು.

೩. ಸುಜೀವಿಯಲ್ಲದ ವಿನಃ ಮುಕ್ತಿ ದೊರೆಯಲಾರದು.

**ಅಂಬಾಲಿಕಾಪಿ (ತು) ಕ್ರಮಯೋಗತೋಽಗಾತ್**

**ಪರಾಂ ಗತಿಂ ನೈವ ತಥಾಂಬಿಕಾ ಯಯೌ ।**

**ಯಥಾ ಯಥಾ ವಿಷ್ಣು ಪರಶ್ಚಿದಾತ್ಮಾ**

**ತಥಾ ತಥಾ ಹ್ಯಸ ಗತಿ: ಪರತ್ರ ॥೧೭೩॥**

ಅಂಬಾಲಿಕೆಯೂ ಕಾಲಕ್ರಮದಲ್ಲಿ ಅವಳ ಯೋಗ್ಯತೆಗೆ ತಕ್ಕಂತೆ ಪರಗತಿಯನ್ನು ಪಡೆದಳು. ಅಂಬಿಕೆಗೆ ಮಾತ್ರ ಆಗಲಿಲ್ಲ. ಇದಕ್ಕೆ ಕಾರಣ ಅವಳಲ್ಲಿದ್ದ ಕಟಪಬುದ್ಧಿ ಮತ್ತು ಕುಯುಕ್ತಿ.

ಹೇಗೆಹೇಗೆ ಪರಮಾತ್ಮನಲ್ಲಿ ಭಕ್ತಿ-ಜ್ಞಾನಗಳು ವೃದ್ಧಿಯಾಗುವವೋ ಅಥವಾ ಯಾವ ಪ್ರಮಾಣದಲ್ಲಿ ಪರಮಾತ್ಮನ ಬಗೆಗೆ ಜ್ಞಾನ-ಭಕ್ತಿಗಳಲ್ಲಿ ವ್ಯತ್ಯಾಸವಿರುತ್ತದೆಯೋ, ಅದೇ ಪ್ರಮಾಣದಲ್ಲಿ ಪರಗತಿಗಳಲ್ಲೂ ವ್ಯತ್ಯಾಸಗಳು ಉಂಟಾಗುತ್ತವೆ. ಅಧಕ್ಕೆ ಅವರವರ ಜೀವಗಳ ಯೋಗ್ಯತೆಯೇ ಕಾರಣವೆಂದು ಹೇಳಬಹುದು. ಅಂತೆಯೇ "ಜೀವ ತ್ರೈವಿಧ್ಯ" ಸಿದ್ಧಾಂತ.

**ಪಂಡುಸ್ತತೋ ರಾಜ್ಯಭರಂ ನಿಧಾಯ**

**ಜ್ಯೇಷ್ಠೇಽನುಜೇ ಚೈವ ವನಂ ಜಗಾಮ ।**

**ಪತ್ನೀದ್ವಯೇನಾನುಗತೋ ಬದರ್ಯಾ-**

**ಮುವಾಸ ನಾರಾಯಣ ಪಾಲಿತಾಯಾಮ್ ॥೧೭೪॥**

ಪಾಂಡುರಾಜನು, ರಾಜ್ಯಭಾರವನ್ನು ಅಣ್ಣನಾದ ಧೃತರಾಷ್ಟ್ರನಿಗೂ, ತಮ್ಮನಾದ ವಿದುರನಿಗೂ ಒಪ್ಪಿಸಿ, ತನ್ನ ಇಬ್ಬರು ಹೆಂಡಂದಿರೊಡನೆ ಬದರಿಕಾಶ್ರಮದಲ್ಲಿ ವಾಸಿಸಹತ್ತಿದನು. ಆ ಆಶ್ರಮವು ಶ್ರೀಮನ್ನಾರಾಯಣನಿಂದ ಪಾಲಿಸಲ್ಪಟ್ಟಿತ್ತು.

**ಗೃಹಾಶ್ರಮೋಣ್ಯೆವ ವನೇ ನಿವಾಸಂ**
**ಕುರ್ವನ್ ಸ ಭೋಗಾನ್ ಬುಭುಜೇ ತಪಶ್ಚ ।**
**ಚಕ್ರೇ ಮುನೀಂದ್ರೈಃ ಸಹಿತೋ ಜಗತ್ಪತಿಂ**
**ರಮಾಪತಿಂ ಭಕ್ತಿ ಯುತೋಽಭಿ ಪೂಜಯನ್ ॥೧೭೫॥**

ಪಾಂಡುರಾಜನು ಗೃಹಾಶ್ರಮದಲ್ಲಿಯೇ ಅಡವಿಯಲ್ಲಿ ವಾಸವಾಗಿದ್ದನು. ಗೃಹಸ್ಥಾಶ್ರಮದ ಭೋಗಕ್ಕೆ ಕೊರತೆಯಿರಲಿಲ್ಲ. ಆದರೂ ಮುನಿಗಳಿಂದ ಕೂಡಿಕೊಂಡು ಜಗತ್ಪ್ರಭುವೂ, ರಮಾಪತಿಯೂ ಆದ ಶ್ರೀಹರಿಯನ್ನು ಭಕ್ತಿಯಿಂದ ಪೂಜಿಸುತ್ತಿದ್ದನು.

ಇಲ್ಲಿ ಶ್ರೀಮದಾಚಾರ್ಯರು 'ಗೃಹಾಶ್ರಮ' ಎಂಬ ಪದವನ್ನು ಬಳಸಿ ಪಾಂಡುರಾಜನ ಸ್ವಭಾವವನ್ನು ವ್ಯಕ್ತಗೊಳಿಸಿದ್ದಾರೆ. ಅಂದರೆ ಆತನು 'ವಾನಪ್ರಸ್ಥಾಶ್ರಮದಲ್ಲಿ' ಇರಲಿಲ್ಲ. ಆತನು ವಿಷಯ ಭೋಗಗಳನ್ನು ಬಿಟ್ಟಿರಲಿಲ್ಲ ಎಂದು ಸ್ಪಷ್ಟೀಕರಿಸಿದ್ದಾರೆ. ಇದು ಒಂದು ರೀತಿಯಿಂದ ಭವಿಷ್ಯದ ಸೂಚನೆಯಾಗಿದೆ.

**ಸ ಕಾಮತೋ ಹರಿಣತ್ವಂ ಪ್ರಪನ್ನಂ**
**ದೈವಾದೃಷಿಂ ಗ್ರಾಮ್ಯ ಕರ್ಮಾನು ಷಕ್ತಮ್ ।**
**ವಿದ್ಧ್ವಾ ಶಾಪಂ ಪ್ರಾಪ ತಸ್ಮಾತ್ ಸ್ತ್ರೀಯಾ ಯುಙ್**
**ಮರಿಷ್ಯಸೀತ್ಯೇವ ಬಭೂವ ಚಾರ್ತಃ ॥೧೭೬॥**

ಒಂದು ದಿನ ಪಾಂಡುರಾಜನು ವನಕ್ಕೆ ಹೋಗಿದ್ದನು. ಅಲ್ಲಿ ಎರಡು ಜಿಗರೆಗಳು ಕಾಮಕೇಳಿಯಲ್ಲಿ ತೊಡಗಿದ್ದವು. ಅವುಗಳನ್ನು ಕೇವಲ ಮೃಗಗಳೆಂದು ಭಾವಿಸಿ, ಪಾಂಡುರಾಜನು ಬಾಣಪ್ರಯೋಗ ಮಾಡಿದನು. ಸಾಯುವ ಮುನ್ನ ಅದರಲ್ಲೊಂದು ಜಿಂಕೆ, "ನೀನು ಕೂಡ ಸ್ತ್ರೀಯನ್ನು ಕೂಡಿದಾಗ ಮೃತನಾಗು" ಎಂದು ಶಾಪವನ್ನು ಕೊಟ್ಟಿತು. ಪರಮಾತ್ಮನ

ಇಚ್ಛಾನುಸಾರವಾಗಿಯೇ ಶಾಪವನ್ನು ಪಡೆದು ಚಿಂತಾಕ್ರಾಂತನಾಗಿ ಹಿಂದಿರುಗಿದನು.

ಇದರಲ್ಲಿ ಆಚಾರ್ಯರು 'ದೈವಾದ್ವಷಿಂ' ಎಂಬ ಪದವನ್ನು ಬಳಸಿ, ಎಲ್ಲವೂ ದೈವೇಚ್ಛೆಯೆಂದೇ ಹೇಳಿದ್ದಾರೆ. ಒಂದು ಮಹತ್ತರವಾದ ವಿಷಯವನ್ನು, ವಿಸ್ತಾರವಾದ ಘಟನೆಯನ್ನು ಸಂಕ್ಷಿಪ್ತವಾಗಿ ಒಂದೇ ಶ್ಲೋಕದಲ್ಲಿ ಮುಗಿಸಿದ್ದಾರೆ. ಇದು ಆಚಾರ್ಯರ ಶೈಲಿಗೆ ಒಂದು ಶ್ರೇಷ್ಠ ಉದಾಹರಣೆ ಎಂದರೆ ಸತ್ಯಕ್ಕೆ ಅಪಚಾರವಾಗಲಾರದು. ಇಲ್ಲಿ ನೋಡಿ.

**ಸ ಚ ರಾಜನ್ ಮಹಾತೇಜಾಃ ಋಷಿ ಪುತ್ರಸ್ತಪೋಧನಃ ।**
**ಭಾರ್ಯಯಾ ಸಹ ತೇಜಸ್ವೀ ಮೃಗರೂಪೇಣ ಸಂಗತಃ ॥೧೪॥**
**ಅಹಂ ಹಿ ಕಿಂದಮೋ ನಾಮ ತಪಸಾ ಭಾವಿತೋಮುನಿಃ ।**
**ವ್ಯ ಪತ್ರ ಪನ್ಮನುಷ್ಯಾಣಾಂ ಮೃಗ್ಯಾಂ ಮೈಥುನ—**
**॥೨೫॥**

(ಮಹಾಭಾರತ ಆದಿಪರ್ವ ಅಧ್ಯಾಯ ೧೨೩.)

ಮೇಲಿನ ಶ್ಲೋಕಗಳಿಂದ ಆ ಮೃಗಗಳು ಯರು? ಏಕೆ ಹೀಗಾಯಿತು? ಇತ್ಯಾದಿಗಳು ಸ್ಪಷ್ಟವಾಗುತ್ತವೆ. ದೈವೇಚ್ಛೆಯಿಂದ ಯಾರಿಗೆ, ಯಾವ ಕಾಲಕ್ಕೆ ಏನು ಬುದ್ಧಿ ಉಂಟಾಗುವುದೋ ತಿಳಿಯದು. ಅದನ್ನು ಸೂಚ್ಯವಾಗಿ ಆಚಾರ್ಯರು 'ದೈವಾದ್ವಷಿಂ' ಎಂಬ ಪದದಲ್ಲಿ ಅಡಗಿಸಿದ್ದಾರೆ.

ವಿ.ವಿ. ಕೆಲವು ವಿಮರ್ಶಕರು 'ದುರ್ವಾಸರ ವರದಲ್ಲಿ ಮಹಾಭಾರತದ ಬೀಜವನ್ನು ನೆಡಲಾಯಿತು. ಅದು ಕಿಂದಮರ ಶಾಪದಲ್ಲಿ ಒಡೆದು ಮೊಳಕೆಯಾಗಲು ಪ್ರಾರಂಭಿಸಿತು' ಎಂದು ಅಭಿಪ್ರಾಯಪಟ್ಟಿದ್ದಾರೆ.

**ನ್ಯಸಿಷ್ಣುರುಕ್ತಃ ಪೃಥಯಾ ಸ ನೇತಿ**
**ಪ್ರಣಾಮ ಪೂರ್ವ ನ್ಯವಸತ್ತಥೈವ ।**
**ತಾಭ್ಯಾಂ ಸಮೇತಃ ಶತಶೃಂಗ ಪರ್ವತೇ**
**ನಾರಾಯಣಸ್ಯಾಶ್ರಮ ಮಧ್ಯಗೇ ಪುರಃ ॥೧೭೭॥**

ಜೀವನದಲ್ಲಿ ಜಿಗುಪ್ಸೆ ಹೊಂದಿದವನಾಗಿ ಪಾಂಡುರಾಜನು ಸನ್ಯಾಸಿಯಾಗಬೇಕೆಂದು ಬಯಸಿದನು. ಇದನ್ನರಿತ ಪೃಥೆಯು ಹಾಗೆ ಮಾಡಬಾರದು ಎಂದು ಪ್ರಣಾಮ ಪೂರ್ವಕವಾಗಿ ಬೇಡಿಕೊಂಡಳು. ಆ ಮೇಲೆ ಪಾಂಡುರಾಜನು ಆಕೆಯಿಂದ ಕೂಡಿಕೊಂಡು ಶತಶೃಂಗ ಪರ್ವತದ ಮಧ್ಯದಲ್ಲಿರತಕ್ಕ 'ನಾರಾಯಣಾಶ್ರಮ'ದಲ್ಲಿ ವಾಸಿಸಿದನು.

ಪಾಂಡುರಾಜನ ಜೀವನ ಕ್ರಮ.

**ತಪ್ಪೋ ನಿತಾಂತಂ ಸ ಚಕಾ (ಚಾ)ರ ತಾಭ್ಯಾಂ**
**ಸಮನ್ವಿತ: ಕೃಷ್ಣ ಪದಾಂಬುಜಾಶ್ರಯ:**
**ತತ್ಸಂಗ ಪೂತದ್ಯುಸತಿದ್ವರಾಂಭ:**
**ಸದಾವಗಾಹಾತಿ ಪವಿತ್ರ ತಾಂಗ: ॥೧೭೮॥**

ಶ್ರೀಹರಿಯ ಪಾದಾಂಬುಜದಿಂದ ಹುಟ್ಟಿದ ಭಾಗೀರಥಿ (ಅಲಕನಂದಾ) ನದಿಯಲ್ಲಿ ನಿಯತ ಕಾಲದಲ್ಲಿ ಸ್ನಾನಾದಿಗಳನ್ನು ಮಾಡುತ್ತ, ಯಾವಾಗಲೂ ತಪಸ್ಸಿನಲ್ಲಿ ತೊಡಗಿರುತ್ತಿದ್ದನು. ಶ್ರೀ ಕೃಷ್ಣನ ಪಾದಾಂಬುಜದಲ್ಲಿ ಮನಸ್ಸನ್ನಿಟ್ಟವನಾಗಿ ಇದ್ದನು. ಭಾಗೀರಥಿಯ ಸ್ನಾನಾದಿಂದಲೂ, ತಪಸ್ಸಿನ ಪ್ರಭಾವದಿಂದಲೂ, ಅಂತರ್ಬಾಹ್ಯ ಶುದ್ಧನಾಗಿ, ಪವಿತ್ರಾಂಗನಾಗಿ ಕಾಲ ಕಳೆಯುತ್ತಿದ್ದನು.

**ಕೃಷ್ಣಾವತಾರದ ಪೀಠಿಕೆ**

ವ್ಯಾಸಾವತಾರದಿಂದ ಜ್ಞಾನಕಾರ್ಯಕ್ಕೆ ಅನುಕೂಲವಾಯಿತು. ಜನರ ಮನಗಳಲ್ಲಿ ಅಡಗಿರುವ ಕಲಿಯ ನಾಶಕ್ಕಾಗಿ ಸಹಾಯವಾಯಿತು. ಆದರೆ ದೈಹಿಕ ಬಲದಿಂದಲೂ, ಅಧಿಕಾರದ ಮದದಿಂದ ಮತ್ತರಾದ ದೈತ್ಯರು ಇನ್ನು ಅನೇಕರು ಪ್ರಬಲರಾಗಿಯೇ ಇದ್ದರು. ಅವರ ನಾಶವೂ ಅನಿವಾರ್ಯವಾಗಿತ್ತು. ಅವರೆಲ್ಲರೂ ಭೂದೇವಿಗೆ ಭಾರವಾಗಿದ್ದರು. ಧರ್ಮಕಂಟಕರಾಗಿದ್ದರು. ಭೂಭಾರವನ್ನು ಇಳುಹುದಕ್ಕಾಗಿ ಪರಮಾತ್ಮನ ಅವಿರ್ಭಾವ ಅವಶ್ಯಕವಾಗಿತ್ತು. ಅದಕ್ಕಾಗಿ ಆ ಕಾರ್ಯವನ್ನು ಶ್ರೀಮದಾಚಾರ್ಯರು ಈ ಶ್ಲೋಕದಿಂದ ಮುಂದುವರಿಸಿದ್ದಾರೆ.

ಏತಸ್ಮಿನ್ನೇವಕಾಲೇ ಕಮಲಭವ ಶಿವಾ

–ಗ್ರೇಸರಾಃ ಶಕ್ರಪೂರ್ವಾ

ಭೂಮ್ಯಾ ಪಾಪಾತ್ಮ ದೈತ್ಯೈರ್ಭುವಿ ಕೃತನಿಲಯೈ

–ರಾಕ್ರಮಂ ಚಾಸ ಹಂತ್ಯಾ ।

ಈಯುರ್ದೇವಾಧಿದೇವಂ ಶರಣಮಜಗು (ಮು) ರುಂ

ಪೂರ್ಣಷಾಡ್ಗುಣ್ಯ ಮೂರ್ತಿಂ

ಕ್ಷೀರಾಬ್ಧೌ ನಾಗಭೋಗೇ ಶಯಿತಮನುಪಮಾ

–ನಂದ ಸಂದೋಹ ದೇಹಮ್ ॥೧೭॥

ಅದೇ ಕಾಲದಲ್ಲಿಯೇ ಬ್ರಹ್ಮ ರುದ್ರಾದಿ ಅಗ್ರೇಸರರಾದ ದೇವತೆಗಳು, ಇಂದ್ರನೊಂದಿಗೆ ಇತರ ದೇವತೆಗಳ ಸಹಿತರಾಗಿ ಭೂದೇವಿಯನ್ನು ಮುಂದೆಮಾಡಿಕೊಂಡು ಪರಮಾತ್ಮನಲ್ಲಿಗೆ ಬಂದರು.

ಭೂದೇವಿಯನ್ನು ಕರೆತಂದದ್ದು ಏಕೆ?

ಭೂದೇವಿಯು, ತನ್ನ ಮೇಲೆ ಪಾಪಾತ್ಮರಾದ ಅನೇಕ ದೈತ್ಯರು ವಾಸಿಸಿ, ಆಕ್ರಮಿಸಿ ಅನೇಕ ಪ್ರಕಾರದ ಹಿಂಸೆ ಕೊಡುತ್ತಿರುವುದನ್ನು ತಾಳಲಾರದೆ, ಅವರ ಭಾರವನ್ನು ಹೊರಲಾರದೆ ಬ್ರಹ್ಮ ರುದ್ರಾದಿ ದೇವತೆಗಳಿಗೆ ಮೊರೆಹೊಕ್ಕಿದ್ದಳು. ಕಾರಣ ಎಲ್ಲರು ಸೇರಿ ದೇವಾಧಿದೇವನಾದಂಥ, ಶರಣಾಗತರಾದ ಬ್ರಹ್ಮ-ರುದ್ರಾದಿಗಳಿಗೆ ಗುರುವಾದಂಥ, ಸರ್ವಸದ್ಗುಣಗಳಿಗೆ ಪೂರ್ಣನಾದ, ಷಡ್ಗುಣಗಳಿಗೆ ಮೂರ್ತಿಯಾದ, ಕ್ಷೀರ ಸಾಗರದಲ್ಲಿ ಶೇಷಶಾಯಿಯಾಗಿ ಮಲಗಿರುವ, ಅನುಪಮ ಆನಂದವೇ ದೇಹವಾಗಿರುವ ಶ್ರೀಮನ್ನಾರಾಯಣನಲ್ಲಿಗೆ ಬಂದು ಈ ರೀತಿಯಾಗಿ ಪ್ರಾರ್ಥಿಸಿಕೊಂಡರು.

ವಿ.ವಿ. ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು, ಕಮಲಭವ, ಶಿವಾಗ್ರೇಸರಾಃ, ಶಕ್ರಪೂರ್ವಾ ಒಂದು ಪದದಿಂದಲೇ ಪರಮಾತ್ಮನ ನಂತರ ಬ್ರಹ್ಮ, ರುದ್ರ, ಇಂದ್ರ ನಂತರ ಮಿಕ್ಕ ದೇವತೆಗಳು ಎಂಬ

'ತಾರತಮ್ಯ'ವನ್ನು ಸೂಚ್ಯವಾಗಿ ಸೂಚಿಸಿದ್ದಾರೆ ಎಂದರೆ ಅತಿಶಯೋಕ್ತಿಯಲ್ಲ.

**ಊಚು: ಪರಂ ಪುರುಷಮೇನಮನಂತ ಶಕ್ತಿಂ**
**ಸೂಕ್ತೇನ ತೇಬ್ಜಜ ಮುಖಾ ಅಪಿ ಪೌರುಷೇಣ ।**
**ಸ್ತುತ್ವಾ ಧರಾಽಸುರವರಾಕ್ರಮಣಾತ್ ಪರೇಶ**
**ಖಿನ್ನಾ ಹ್ಯತೋಽತೀಯತೋ (ಹಿ) ವಿಮುಖಾಸ್ತವತೇಽತಿ**
**ಪಾಪಾ: ॥೧೮೦॥**

ಆ ಬ್ರಹ್ಮ ಮೊದಲಾದ ದೇವತೆಗಳು ಅನಂತ ಶಕ್ತಿಯುಳ್ಳ ಪರಮಾತ್ಮನನ್ನು "ಪುರುಷ ಸೂಕ್ತ"ದಿಂದ ಸ್ತೋತ್ರ ಮಾಡಿದರು. ಭೂದೇವಿಯ ಮೇಲೆ ಅಸುರರು ಆಕ್ರಮಿಸಿರುವುದನ್ನು, ಅದರಿಂದ ಆಕೆ ಖಿನ್ನಳಾಗಿ ದುಃಖಿಸುತ್ತಿರುವುದನ್ನು, ಅಲ್ಲದೆ ಆ ಪಾಪಾತ್ಮರು ಪರಮಾತ್ಮನಿಗೆ ವಿಮುಖರಾಗಿರುವುದನ್ನು ವಿವರವಾಗಿ ತಿಳಿಸುತ್ತ ಈ ರೀತಿ ಪ್ರಾರ್ಥಿಸಿಕೊಂಡರು.

**ದುಸ್ಸಂಗತಿರ್ಭವತಿ ಭಾರವದೇವ ದೇವ**
**ನಿತ್ಯಂ ಸತಾಮಪಿ ಹಿನ: ಶೃಣು ವಾಕ್ಯಮೀಶ ।**
**ಪೂರ್ವಂ ಹತಾ ದಿತಿಸುತಾ ಭವತಾ ರಣೇಷು**
**ಹ್ಯಸ್ಮತ್ಪ್ರಿಯಾರ್ಥಮಧುನಾ ಭುವಿ ತೇಽಭಿಜಾತಾ: ॥೧೮೧॥**

ದುಷ್ಟರ ಸಂಗವೇ ಒಂದು ಭಾರವಿದ್ದಂತೆ. ಅದರಲ್ಲಿ ಅವರು ನಿತ್ಯವೂ ಸಜ್ಜನರಿಗೆ ಕೊಡುವ ಹಿಂಸೆ, ಕೇಳಬಾರದ ಮಾತುಗಳನ್ನು ಕೇಳುವುದು. ಇವೆಲ್ಲವುಗಳಿಂದ ಭೂದೇವಿಯು ಅತಿ ದುಃಖಿತಳಾಗಿದ್ದಾಳೆ. "ಹೇ ದೇವಾ! ನಮ್ಮ ಪ್ರಾರ್ಥನೆಯನ್ನು ಆಲಿಸು. ಹಿಂದಕ್ಕೆ ನಮ್ಮ ಹಿತಕ್ಕಾಗಿಯೇ ದೈತ್ಯರನ್ನು ನೀನು ರಣದಲ್ಲಿ ಸಂಹರಿಸಿದಿಯಲ್ಲವೇ? ಅವರೇ ಇಂದು ಭೂಲೋಕದಲ್ಲಿ ಮತ್ತೆ ಹುಟ್ಟಿ ಬಂದಿದ್ದಾರೆ. ಇಂದು ಕೂಡ ನಮ್ಮ ಪ್ರೀತಿಗಾಗಿಯೇ ಅವರನ್ನು ಸಂಹರಿಸು" ಎಂದು ವಿನಂತಿಸಿದರು.

ವಿ.ವಿ. ಶ್ರುತಿಯಲ್ಲಿ ಹೇಳಿದಂತೆ "ಆಪ್ತ ಕಾಮಸ್ಯ ಕಾ ಸ್ಪೃಹಾ" ಪರಮಾತ್ಮನು ಆಪ್ತಕಾಮನು. ಆತನಿಗೆ ಯುದ್ಧದಿಂದ ಯಾವ

ಪ್ರಯೋಜನವೂ ಇಲ್ಲ. ದೇವರು ಮಾಡುವ ಕಾರ್ಯಗಳೆಲ್ಲವೂ ಕೇವಲ ಸಜ್ಜನರ ಹಿತಕ್ಕಾಗಿ ಎಂಬುದು ಸತ್ಯ.

ಅಂದಿನ ಯುದ್ಧದ ಪರಿಚಯ

**ಆಸೀತ್ ಪುರಾದಿತಿ ಸುರೈರಮರೂತ್ತಮಾನಂ**
**ಸಂಗ್ರಾಮ ಉತ್ತಮ ಗಜಾಶ್ವರಥ ದ್ವಿಪದ್ಭಿಃ ।**
**ಅಕ್ಷೌಹಿಣೀ ಶತಮಹೌಘ ಮಹೌಘ ಮೇವ**
**ಸೈನ್ಯಂ ಸುರಾತ್ಮಕಮ ಭೂತ್ ಪರಮಾಸ್ತ್ರ ಯುಕ್ತಮ್ ॥೧೮೨॥**

ಹಿಂದೆ ದೇವತೆಗಳ ಸೈನ್ಯ, ಅನೇಕ ಉತ್ತಮವಾದ ಆನೆ, ಕುದುರೆ, ರಥ, ಪದಾತಿಗಳಿಂದ ಕೂಡಿದ್ದು ನೂರು ಅಕ್ಷೋಹಿಣಿ, ಓಘ ಮತ್ತು ಮಹೌಘಗಳಷ್ಟು ಸಂಗ್ರಹವಾಗಿತ್ತು. ಉತ್ತಮ ಅಸ್ತ್ರಗಳಿಂದಲೂ ಸಜ್ಜಿತವಾಗಿತ್ತು. ಇದು ದೇವತೆಗಳ ಸೈನ್ಯ.

ಅಕ್ಷೋಹಿಣಿ - ಓಘ ಮತ್ತು ಮಹ ಓಘ ಇವು ಅಂದಿನ ಸೈನ್ಯದ ಗಣಿತದ ಪ್ರಮಾಣ. ಸಾಹಿತ್ಯದ ದೃಷ್ಟಿಯಿಂದ ಉತ್ಸಾಹ, ಅತಿ ಉತ್ಸಾಹ ಎಂದು ಹೇಳಬಹುದು.

**ತಸ್ಮಾನ್ಮಹೌಘ ಗುಣಮಾಸ ಮಹಾಸುರಾಣಾಂ**
**ಸೈನ್ಯಂ ಶಿಲಾಗಿರಿ ಮಹಾಸ್ತ್ರಧರಂ ಸುಘೋರಮ್ ।**
**ತೇಷಾಂ ರಥಾಶ್ಚ ಬಹುನಲ್ಪ ಪರಿಪ್ರಮಾಣಾ**
**ದೇವಾಸುರ ಪ್ರವರಕಾರ್ಮುಕ ಬಾಣಪೂರ್ಣಾಃ ।**
**ನಾನಾಂಬರಾಭರಣ ವೇಷವರಾಯುಧಾಢ್ಯಾ**
**ದೇವಾಸುರಾಃ ಸಸ್ರು ಪದಾಶು ಪರಸ್ಪರಂ ತೇ ॥೧೮೩॥**

ದೈತ್ಯರ ಸೈನ್ಯ ದೇವತೆಗಳ ಸೈನ್ಯಕ್ಕಿಂತಲೂ, ಮಹೌಘ ಗುಣಗಳಿಂದಲೂ ಅತಿಶಯವಾಗಿ ಹೆಚ್ಚಾಗಿತ್ತು. ಆ ಅಸುರ ಸೈನ್ಯಕ್ಕೆ ಕಲ್ಲು-ಬಂಡೆ, ಗಿರಿ-ಗುಡ್ಡ, ಇವುಗಳೇ ಅಸ್ತ್ರಗಳಾಗಿದ್ದವು.

ಮಹಾಘೋರತರವಾಗಿದ್ದಿತು. ಆ ಸೈನ್ಯದಲ್ಲಿರುವ ರಥಗಳ ಪ್ರಮಾಣ ಬಹು ನಲ್ಪವಾಗಿತ್ತು. ದೇವಾಸುರ ಇಬ್ಬರಲ್ಲೂ ನಾನಾ ಪ್ರಕಾರದ

ಬಿಲ್ಲುಬಾಣಗಳು ತುಂಬಿದ್ದವು. ಎರಡೂ ಸೈನ್ಯಗಳು ನಾನಾ ವಸ್ತ್ರಾಭರಣಗಳಿಂದ ಭೂಷಿತವಾಗಿದ್ದವು. ಶ್ರೇಷ್ಠವಾದ ಆಯುಧಗಳಿಂದ ಸಜ್ಜಾಗಿದ್ದವು. ಇಂತಹ ಸೈನ್ಯಗಳನ್ನು ಹೊಂದಿದ ದೇವಾಸುರರು ಪರಸ್ಪರರನ್ನು ಎದುರಿಸಲು ಸಿದ್ಧರಾಗಿದ್ದರು.

'ನಲ್ವ' ಎಂದರೆ ನಾಲ್ಕುನೂರ ಹಸ್ತ, ಮೊಳ ಅಥವಾ ಮಾರು ಎಂದು ಹೇಳುತ್ತಾರೆ. ನಿಶ್ಚಿತವಾದ ಅಳತೆಯಿಲ್ಲ.

**ಜಘ್ನುರ್ಗಿರೀಂದ್ರ ತಲ ಮುಷ್ಟಿ ಮಹಾಸ್ತ್ರ ಶಸ್ತ್ರೈ**
**ಶ್ಚಕ್ರುರ್ನರೀಶ ರುಧಿರೌಘವಹಾ ಮಹೌಘಮ್ ।**
**ತತ್ರ ಸ್ಮ ದೇವ ವೃಷಭೈರಸುರೇಶಚಮ್ವಾ**
**ಯುದ್ಧೇ ನಿಘೂದಿತ ಉತೌಘಬಲೈಃ ಶತಾಂ (ಬಲಾಚ್ಛತಾಂ)**

ಅವರಿಬ್ಬರ ಕಾಳಗ ಪ್ರಾರಂಭವಾಯಿತು. ಗಿರಿಗಳ ಮತ್ತು ಕಲ್ಲುಗಳ ಸಹಾಯದಿಂದ ಹೊಡೆದಾಡಿದರು. ತುಮುಲಯುದ್ಧ, ಮುಷ್ಟಿಯುದ್ಧ, ಶಸ್ತ್ರಾಸ್ತ್ರಗಳ ಯುದ್ಧ ಈ ಪ್ರಕಾರ ನಾನಾ ರೀತಿಯಿಂದ ಹೋರಾಡಿದರು. ನದಿ–ನದಗಳೆಲ್ಲ ರಕ್ತದ ಹೊಳೆಗಳಾದವು. ರಕ್ತದ ನದಿಗಳೇ ಹರಿದವು. ದೈತ್ಯರ ಸೈನ್ಯದಲ್ಲಿಯ ನೂರರಲ್ಲಿ ಒಂದು ಭಾಗವು ಮಾತ್ರ ದೇವತೆಗಳಿಂದ ಕೊಲ್ಲಲ್ಪಟ್ಟಿತು.

'ಓಘ' ಎಂದರೆ ಪರಂಪರೆ ಎಂದು ಇಲ್ಲಿ ಅರ್ಥಮಾಡಲಾಗಿದೆ.

**ಅಥಾತ್ಮ ಸೇನಾಮವಮೃದ್ಯಮಾನಾಂ**
**ವೀಕ್ಷ್ಯಾಸುರಃ ಶಂಬರನಾಮಧೇಯಃ ।**
**ಸಸಾರ ಮಾಯಾವಿದಸಹ್ಯಮಾಯೋ**
**ಪರಾದುಮೇಶಸ್ಯ ಸುರಾನ್ ವಿಮೋಹಯನ್ ॥೧೮೫॥**
**ಮಾಯಾ ಸಹಸ್ರೇಣ ಸುರಾವಿ(ಸ್ವ) ರ್ಮದಿತಾ**
**ರಣೇ ವಿಷೇದುಃ ಶಶಿಸೂರ್ಯಮುಖ್ಯಾಃ ।**
**ತಾನ್ ವೀಕ್ಷ್ಯ ವಜ್ರೀ ಪರಮಾಖ್ಯ (ಮಾಂತು) ವಿದ್ಯಾಂ**
**ಸ್ವಯಂಭುದತ್ತಾಂ ಪ್ರಯುಯೋಜ ವೈಷ್ಣವೀಮ್ ॥೧೮೬॥**

ತನ್ನ ಸೈನ್ಯವು ಸಾಯುತ್ತಿರುವುದನ್ನು ಶಂಬರ ಎಂಬ ಅಸುರನು ನೋಡಿದನು. ದೇವತೆಗಳಿಗೆ ಮೋಹ ಹುಟ್ಟಿಸುವುದಕ್ಕಾಗಿ, ತಾನು ಉಮೇಶನಿಂದ ಪಡೆದ ವರಬಲದಿಂದ, ಸಹಿಸಲಸಾಧ್ಯವಾದ ಮಾಯಾಜಾಲವನ್ನೇ ರಚಿಸಿದನು.

ಆ ಅಸುರನು ಬಿಟ್ಟ ಶೈವಾಸ್ತ್ರದ ಸಹಸ್ರಾರು ಮಾಯೆಗಳಿಂದ ದೇವತೆಗಳು ತತ್ತರಿಸಿದರು. ಚಂದ್ರ ಸೂರ್ಯರೂ ಗಾಬರಿಯಾದರು. ಇದನ್ನು ಇಂದ್ರನು ನೋಡಿದನು. ತಾನು ಬ್ರಹ್ಮನಿಂದ ಪಡೆದ ವೈಷ್ಣವಾಸ್ತ್ರವನ್ನು ಪ್ರಯೋಗಿಸಿದನು.

**ಸಮಸ್ತ ಮಾಯಾಪರಹಯಾ ತಯೈವ**
**ವರಾದ್ರುಮೇಶಸ್ಯ ಸದಾಪ್ಯ ಸಹ್ಯಯಾ ।**
**ಮಾಯಾ ವಿನೇಶುರ್ದಿತಿಜೇಂದ್ರ ಸೃಷ್ಟಾ**
**ವಾರೀಶವಹ್ನೀಂದುಮುಖಾಶ್ಚ ಮೋಚಿತಾಃ ॥೧೮೭॥**

ಸಹಿಸಲಸಾಧ್ಯವಾದ ಶೈವಾಸ್ತ್ರದ ಪ್ರಭಾವವು ಕೂಡ ವೈಷ್ಣವಾಸ್ತ್ರದ ಬಲದಿಂದ ಮಾಯವಾಯಿತು. ವರುಣ, ಅಗ್ನಿ, ಚಂದ್ರ ಮೊದಲಾದ ದೇವತೆಗಳೆಲ್ಲರೂ ಶಂಬರಾಸುರನ ಮಾಯೆಯಿಂದ ಬಿಡುಗಡೆಯಾದರು.

ವಿ.ವಿ. ಇಲ್ಲಿಯು ಕೂಡ ಶ್ರೀಮದಾಚಾರ್ಯರು ತಾರತಮ್ಯವನ್ನು ಸೂಚಿಸಿದ್ದಾರೆ. ಶೈವಾಸ್ತ್ರದ ಪ್ರಭಾವ . ಕಡಿಮೆಯಾಗಬೇಕಾದರೆ, ಅದಕ್ಕಿಂತಲು ಪ್ರಬಲವಾದ ಅಸ್ತ್ರ ಅಗತ್ಯ. ಉಳಿದ ದೇವತೆಗಳೆಲ್ಲರೂ ಶಿವನಿಗಿಂತ ಕಡಿಮೆಯವರೇ, ಕಾರಣ ಅವರ ಮೇಲೆ ಅಸ್ತ್ರವು ತನ್ನ ಪ್ರಭಾವವನ್ನು ಬೀರಿತು. ವೈಷ್ಣವಾಸ್ತ್ರ ಬಂದಾಗ ತಾನಾಗಿಯೇ ಹಿಂಜರಿಯಿತು.

**ಯಮೇಂದು ಸೂರ್ಯಾದಿ ಸುರಾಸ್ತತೋಽಸುರಾನ್**
**ನಿಜಘ್ನು ರಾಪ್ಯಾಯಿತ ವಿಕ್ರಮಾಸ್ತದಾ ।**
**ಸುರೇಶ್ವರೇಣೋರ್ಜಿತ ಪೌರುಷಾ ಬಹೂನ್**
**ವಜ್ರೇಣ ವಜ್ರೀ ನಿಜಘಾನ ಶಂಬರಮ್ ॥೧೮೮॥**

ಯಮ, ಇಂದು, ಸೂರ್ಯ ಮೊದಲಾದ ದೇವತೆಗಳು ಅನೇಕ ಅಸುರರನ್ನು ಕೊಂದು ವಿಕ್ರಮವನ್ನು ಸಾಧಿಸಿದರು. ಇಂದ್ರನು ಕೂಡ ತನ್ನ ಪೌರುಷವನ್ನು ತೋರಿ ತನ್ನ ವಜ್ರಾಯುಧದಿಂದ ಶಂಬರಾಸುರನನ್ನು ಸಂಹರಿಸಿದನು.

ವಿ.ವಿ. ಪ್ರದ್ಯುಮ್ನನಿಂದ ಸಂಹರಿಸಲ್ಪಟ್ಟ ಶಂಬರಾಸುರನೇ ಬೇರೆ. ಇಂದ್ರನು ಸಂಹರಿಸಿದ ಶಂಬರಾಸುರನೇ ಬೇರೆ ಎಂಬುದನ್ನು ಓದುಗರು ಅರಿಯಬೇಕು.

**ತಸ್ಮಿನ್ ಹತೇ ದಾನವ ಲೋಕ ಪಾಲೇ**
**ದಿತೇ ಸುತಾ ದುದ್ರುವುರಿಂದ್ರ ಭೀಷತಾಃ ।**
**ತಾನ್ ವಿಪ್ರಚಿತ್ತಿರ್ವಿನಿವಾರ್ಯ ಧನ್ವೀ**
**ಸಸಾರ ಶಕ್ರ ಪ್ರಮುಖಾನ್ ಸುರೋತ್ತಮಾನ್ ॥೧೮೯॥**

ದಾನವರನ್ನು ರಕ್ಷಿಸತಕ್ಕ ಶಂಬರಾಸುನೇ ಈ ರೀತಿ ಹತನಾದ ಮೇಲೆ ದೈತ್ಯರೆಲ್ಲರು ಇಂದ್ರನಿಂದ ಭಯಗೊಂಡವರಾಗಿ ಓಡಹತ್ತಿದರು. ವೀರನಾದ 'ವಿಪ್ರಚಿತ್ತಿ' ಎಂಬ ದಾನವನು ಅವರನ್ನೆಲ್ಲ ತಡೆದು, ದೇವೇಂದ್ರನೇ ಮೊದಲಾದ ದೇವತೆಗಳನ್ನು ಪುನಃ ಯುದ್ಧಕ್ಕೆ ಕರೆದನು.

**ವರಾದಜೇಯನ ವಿಧಾತುರೇವ**
**ಸುರೋತ್ತಮಾಂಸ್ತೇನ ಶರೈಪಾತಿತಾನ್ ।**
**ನಿರೀಕ್ಷ್ಯ ಶಕ್ರಂ ಚ ವಿಮೋಹಿತಂ ದ್ರುತಂ**
**ನ್ಯ ವಾರಯತ್ತಂ ಪವನಃ ಶರೌಘೈ ॥೧೯೦॥**

ಆ ವಿಪ್ರಚಿತ್ತಿಗೆ ಬ್ರಹ್ಮನ ವರಬಲವಿದ್ದಿತು. ಅದರಿಂದಾಗಿ ಎಲ್ಲ ದೇವತೆಗಳು ಬಾಣಗಳ ಪೆಟ್ಟುಗಳನ್ನು ತಾಳಲಾರದೆ ಮೂರ್ಛಿತರಾದರು. ಇಂದ್ರನು ಕೂಡ ಗಾಬರಿಯಿಂದ ಓಡಹತ್ತಿದನು. ವಿಪ್ರಚಿತ್ತಿ ಇಂದ್ರನ ಬೆನ್ನು ಹತ್ತಿದನು. ಇದನ್ನು ಕಂಡ ವಾಯುದೇವರು ತನ್ನ ಬಾಣಗಳ ಪ್ರಭಾವದಿಂದ ಅವನನ್ನು ತಡೆದರು.

**ಅಸ್ತ್ರಾಣಿ ತಸ್ಯಾಸ್ತ್ರವರೈರ್ನಿವಾರ್ಯ**
**ಚಿಕ್ಷೇಪ ತಸ್ಯೋರಸಿ ಕಾಂಚನೀಂ ಗದಾಮ್।**
**ವಿ ಚೂರ್ಣಿತೋಽಸೌ ನಿಸಪಾತಮೇ ರೌ**
**ಮಹಾಬಲೋ ವಾಯುಬಲಾಭಿನುನ್ನಃ ॥೯೧॥**

'ತಸ್ಯ' ಅಂದರೆ ಆ ವಿಪ್ರಚಿತ್ತಿಯ ಅಸ್ತ್ರಗಳನ್ನು ವಾಯುದೇವರು ತಮ್ಮ ಅಸ್ತ್ರಗಳಿಂದ ತಡೆದರು. ನಂತರ ಬಂಗಾರದ ಗದೆಯಿಂದ ಆ ವಿಪ್ರಚಿತ್ತಿಯ ವಕ್ಷಸ್ಥಳಕ್ಕೆ ಹೊಡೆದರು. ಅದರಿಂದ ಅವನು ಚೂರ್ಣಿತನಾಗಿ, ವಾಯುವೇಗಕ್ಕೆ ತುತ್ತಾಗಿ ಮೇರು ಪರ್ವತದ ಮೇಲೆ ಬಂದು ಬಿದ್ದನು. ವಾಯುದೇವರು ಬಲಶಾಲಿಗಳಲ್ಲಿ ಬಲಶಾಲಿಗಳಾಗಿದ್ದರು.

**ಅಥಾಸಸಾದಾಶು ಸಕಾಲನೇಮಿ**
**ಸ್ತದಾಜ್ಞಯಾ ಯಸ್ಯ ವರಂ ದದೌ ಪುರಾ ।**
**ಸರ್ವೈ ರಜೇಯತ್ವ ಮಜೋಽಸುರಃ ಸ**
**ಸಹಸ್ರ ಶೀರ್ಷೋ ದ್ವಿಸಹಸ್ರಬಾಹುಯುಕ್ ॥೯೨॥**

ಈ ರೀತಿ ವಿಪ್ರಚಿತ್ತಿ ಬಿದ್ದಮೇಲೆ, ಕಾಲನೇಮಿ ಎಂಬ ರಾಕ್ಷಸನು ವಾಯುದೇವರಿಗೆ ಎದುರಾದನು. ಅವನಿಗೂ ಬ್ರಹ್ಮದೇವರು ನೀನು ಆ ಪರಮಾತ್ಮನ ಆಜ್ಞೆಯಿಂದಲೇ 'ಅಜೇಯ' ನಾಗು ವರವನ್ನು ಕೊಟ್ಟರು. ಆ ಅಸುರನಿಗೆ ಸಹಸ್ರ ಶಿರಗಳು, ಎರಡು ಸಹಸ್ರ ಬಾಹುಗಳಿದ್ದವು.

ವಿ.ವಿ. ಕಾಲನೇಮಿಯು ರಾಕ್ಷಸನು ಮಾಯಾವಿ. ಅವನಿಗೆ ಸಹಸ್ರ ಶಿರಗಳು ಮತ್ತು ಎರಡು ಸಹಸ್ರ ಬಾಹುಗಳನ್ನು ಸೃಷ್ಟಿಸಿಕೊಳ್ಳುವ ಶಕ್ತಿಯಿದ್ದಿತು ಅಥವಾ ಅಷ್ಟು ತಲೆಗಳ ಬುದ್ಧಿ ಮತ್ತು ಅಷ್ಟು ಬಾಹುಗಳ ಸಾಮರ್ಥ್ಯ ಅವನಲ್ಲಿ ಇದ್ದತು ಎಂದು ಹೇಳಬಹುದು.

**ತಮಾಪತಂತಂ ಪ್ರಸಮೀಕ್ಷ್ಯ ಮಾರುತ-**
**ಸ್ತದಾಜ್ಞಯಾ ದತ್ತ ವರಸ್ತ್ವಯೈವ ।**
**ಹಂತವ್ಯ ಇತಿ ಸ್ಮರದಾಶು ಹಿ ತ್ವಾಂ**
**ತದಾವಿರಾಸೀಸ್ಸ ಮನಂತ ಪೌರುಷಃ ॥೯೩॥**

ಆ ಕಾಲನೇಮಿ ಬರುವುದನ್ನು ವಾಯುದೇವರು ನೋಡಿ [illegible]ತಮ್ಮ ಆಜ್ಞೆಯಿಂದಲೇ ಬ್ರಹ್ಮದೇವರು ವರವನ್ನು ಕೊಟ್ಟಿದ್ದರು. ತಮ್ಮಿಂದಲೇ ಅವನು ಹತನಾಗಬೇಕೆಂಬ ಸಂಕಲ್ಪವೂ ತಮ್ಮದೇ ಇದೆ.'' ಹೀಗೆಂದು ಸ್ಮರಿಸಿದರು. ಬಲಿಷ್ಠರಾದ ವಾಯುದೇವರು ಅವನ ಹತ್ತಿರ ಪ್ರಾದುರ್ಭೂತರಾದರು.(ತಮ್ಮ ಎಂಬ ಪದ ಪರಮಾತ್ಮನ ಪರ ಸಂಕೇತ)

ಇದರಲ್ಲಿ ಶ್ರೀ ವಾಯುದೇವರ ವಿನಯ ಪರಮಾತ್ಮನಲ್ಲಿರುವ ಅವರ ಭಕ್ತಿ ಎದ್ದು ಕಾಣುತ್ತದೆ. ಅವರಿಗೆ 'ನಾನು ಮಾಡುವೆನು' ಎಂಬ ಅಹಂಭಾವವಿಲ್ಲ. ಎಲ್ಲವೂ ಪರಮಾತ್ಮನೇ ಮಾಡಿಸುತ್ತಾನೆ. ಎಲ್ಲಕ್ಕೂ ಪರಮಾತ್ಮನ ಸಂಕಲ್ಪವೇ ಮುಖ್ಯ ಎಂಬ ದೃಢವಾದ ವಿಶ್ವಾಸ ವ್ಯಕ್ತವಾಗುತ್ತದೆ.

**ತವಸ್ತ್ರ-ಶಸ್ತ್ರಾಣಿ ಬಹೂನಿ ಬಾಹುಭಿಃ**
**ಪ್ರವರ್ಷಮಾಣಂ ಭುವನಾಪ್ತದೇಹಮ್**
**ಚಕ್ರೇಣ ಬಾಹುನ್ವಿನಿಕೃತ್ಯ ಕಾನಿ ಚ**
**ನ್ಯವೇದಯಶ್ಚಾಶು ಯಮಾಯ ಪಾಪಮ್** ॥೧೯೪॥

ಅನಂತರ, 'ಎಲೈ ಪರಮಾತ್ಮನೇ, ನೀನೇ ನಿನ್ನ ಚಕ್ರದಿಂದ ಅವನ ಸಮಸ್ತ ಅಸ್ತ್ರ-ಶಸ್ತ್ರಗಳನ್ನು ಅನೇಕ ಬಾಹುಗಳನ್ನು, ವಿಸ್ತಾರವಾಗಿ ವ್ಯಾಪಿಸಿದ ದಾನವನ ಆ ಮಹಾದೇಹವನ್ನು ನಾಶಮಾಡಿ, ಪಾಪಗಳಿಂದ ತುಂಬಿದ ಅವನ ಶರೀರವನ್ನು ಯಮಲೋಕಕ್ಕೆ ಕಳುಹಿಸು'' ಎಂದು ಪ್ರಾರ್ಥಿಸಿದರು.

**ತತೋಽಸುರಾಸ್ತೇ ನಿಹತಾ ಅಶೇಷಾ**
**ಸ್ತ್ವಯಾ ತ್ರಿಭಾಗಾ ನಿಹಿತಾಶ್ಚತುರ್ಥಮ್** ।
**ಜಘಾನ ವಾಯುಃ ಪುನರೇವ ಜಾತಾ-**
**ಸ್ತೇ ಭೂತಲೇ ಧರ್ಮಬಲೋಪಪನ್ನಾಃ** ॥೧೯೫॥

ಆಗ ಆ ಅಸುರನ ಮತ್ತು ಅವನ ಸೈನ್ಯದ ಮೂರುನಾಲ್ಕಾಂಶವು ನಿನ್ನಿಂದ ಹತವಾಯಿತು. ಉಳಿದ ಒಂದು ನಾಲ್ಕಾಂಶವನ್ನು ವಾಯುದೇವರು ಸಂಹರಿಸಿದರು. ಈಗ ಅದೇ ಅಸುರನೇ ಪುನಃ ಭೂಮಿಯ ಮೇಲೆ ಬಲವನೇ ದರ್ಮವನ್ನಾಗಿಸಿ ಜನ್ಮ ತಾಳಿದ್ದಾನೆ.

ರಾಜ್ಞಾಂ ಮಹಾವಂಶಸುಜನ್ಮನಾಂ ತು
ತೇಷಾಮು ಭೂಧ್ವರ್ಮಮತಿ ರ್ವಿಪಾಪಾ ।
ಶಿಕ್ಷಾಮವಾಪ್ಯ ದ್ವಿಜ ಪುಂಗವಾನಾಂ
ತ್ವದ್ಭಕ್ತಿರಪ್ಯೇಷು ಹಿ ಕಾಚನ ಸ್ಯಾತ್ ॥೧೯೬॥

ಅಂದಿನ ಅವರೆಲ್ಲರೂ ಇಂದು ಒಳ್ಳೆಯ ರಾಜರ ಮನೆಗಳಲ್ಲಿ ಹುಟ್ಟಿದ್ದಾರೆ. ಕೆಲವರು ಒಳ್ಳೆಯ ವಂಶಗಳಲ್ಲೂ ಜನ್ಮ ತಾಳಿದ್ದಾರೆ. ಅವರಿಗೆ ಪಾಪರಹಿತ ಬುದ್ಧಿ ಬಂದಂತೆ ಕಾಣುತ್ತದೆ. ಅಲ್ಲದೆ ಸದಾ (ದ್ವಿಜಪುಂಗ) ಸಜ್ಜನರ ಸಂಗದಲ್ಲಿ ಇರುವುದರಿಂದ ಭಕ್ತಿಯೂ ಉಂಟಾದಂತೆ ಕಾಣುತ್ತದೆ. ಆದರೂ ಅದು ಕೃತಕ, ಮತ್ತು ತೋರಿಕೆಗೆ ಮಾತ್ರ.

ಉದಾಃ ರತ್ನಗಳ ಮಧ್ಯೆ ಗಾಜಿನ ಚೂರು ಸೇರಿದಂತೆ. ಅದರಲ್ಲಿ ತಾತ್ಕಾಲಿಕ ಪ್ರಭಾವ ಮತ್ತು ಬಣ್ಣ ಗೋಚರವಾಗಬಹುದು ಅಷ್ಟೆ.

ಅವರಲ್ಲಿ ಭಕ್ತಿಯುಂಟಾದರೆ ಇತರರಿಗೆ ಏನು ನಷ್ಟ? ಅಂದರೆ

ತ್ವದ್ಭಕ್ತಿಲೋಕಾಭಿಯತಃ ಸುಕರ್ಮಾ
ವ್ರಜೇನ್ನ ಪಾಪಾಂ ತು ಗತಿಂ ಕಥಂಚಿತ್ ।
ದೈತ್ಯೇಶ್ವರಾಣಾಂ ಚ ತಮೋಂಧಮೇವ
ತ್ವಯ್ಯೈವ ಕ್ಲೃಪ್ತಂ ನನು ಸತ್ಯಕಾಮ ॥೧೯೭॥

ನಿನ್ನಲ್ಲಿ ಸ್ವಲ್ಪ ಭಕ್ತಿಯುಂಟಾದರೂ, ಅದರ ಪ್ರಭಾವದಿಂದ ಅವರು ಒಳ್ಳೆಯ ಕರ್ಮಗಳನ್ನು ಆಚರಿಸುತ್ತಾರೆ. ಒಳ್ಳೆಯ ಗತಿ ನಿಶ್ಚಯ ಅಂದ ಮೇಲೆ ಪಾಪಾತ್ಮರಾದ ದೈತ್ಯರಿಗೆ ಒಳ್ಳೆಯ ಗತಿ ಹೇಗೆ? 'ದೈತ್ಯೇಶ್ವರರೆಲ್ಲರಿಗೂ ಅಂಧಂ ತಮಸ್ಸು' ಎಂದು ನಿನ್ನಿಂದಲೇ ಕ್ಲಿಪ್ತವಾಗಿದೆ. ದೈತ್ಯರಿಗೆ ಸದ್ಗತಿಯೋ? ಸತ್ಯಕಾಮನಾದ ನಿನ್ನ ಸಂಕಲ್ಪವೂ ಹುಸಿಯಾಗಲು ಸಾಧ್ಯವೇ?

ಕೃಣ್ವೇ ವೀರ ಉದ್ರಮುದ್ರಂ ದಮಾಯುನ್ ॥(ಶ್ರುತಿ)
ಮಮ ಪ್ರಾಪ್ಯೈವ ಕೌಂತೇಯ ತತೋಯಾಂತ್ಯಧಮಾಗತಿಮ್
(ಗೀತೆ)

ಇತ್ಯಾದಿ ಮೇಲಿನ ವಾಕ್ಯಗಳಿಗೆ ಅರ್ಥವಿಲ್ಲದಂತೆ ಆದೀತು. ಅಂದರೆ ದುರ್ಜನರಿಗೆ ಸದ್ಗತಿ ಎಂಬುದು ಇಲ್ಲವೇ ಇಲ್ಲ. ಇದು ನಿಶ್ಚಯ.

ಧರ್ಮಸ್ಯ ಮಿಥ್ಯಾತ್ವಭಯಾದ್ವಯಂ ತ್ವಾ-
ಮಥಾಪಿ ವಾದ್ಯೈತ್ಯ ಶುಭಾಪ್ತಿ ಭೀಷಾ।
ಸಂಪ್ರಾರ್ಥಯಾಮೋ ದಿತಿಜಾನ್ ಸುಕರ್ಮಣ-
ಸ್ತದ್ಭಕ್ತಿ ತಶ್ಚಾಲ(ಶ್ಚ್ಯಾವ) ಯಿತುಂ ಚ ಶೀಘ್ರಮ್ ॥೧೯೮॥

' 'ಧರ್ಮ' ಎಂಬ ಶಬ್ದಕ್ಕೆ ಇದುವರೆಗೆ ಬಂದಿರುವ ತತ್ತ್ವಯುತ ಅರ್ಥ ಹೋಗಿ ಮಿಥ್ಯತ್ವ ಬರಬಹುದೆಂಬ ಭಯದಿಂದಲೂ, ಅಯೋಗ್ಯರಾದ ದೈತ್ಯರಿಗೆ ಶುಭಫಲ ದೊರೆಯಬಾರದು' ಎಂಬ ಅಭಿಪ್ರಾಯದಿಂದ ನಿಮ್ಮನ್ನು ಈ ರೀತಿ ಪ್ರಾರ್ಥಿಸುತ್ತಿದ್ದೇನೆ. ಕಾರಣ ದಿತಿಜರು ಮಾಡುತ್ತಿರುವ ಒಳ್ಳೆಯ ಕರ್ಮ, ಮತ್ತು ಭಕ್ತಿ ಇವುಗಳನ್ನು ಆದಷ್ಟು ಬೇಗ ಬಿಡಿಸಬೇಕೆಂದು ವಿನಂತಿಸಿಕೊಳ್ಳುತ್ತೇನೆ.

ಹಿಂದೆ ಹೇಳಿದ 'ಭುವಿ ತೇ ಪ್ರಜಾತಃ' ಎಂಬ ಅಭಿಪ್ರಾಯದ ವಿಸ್ತರಣೆ ಮುಂದಿನ ಶ್ಲೋಕಗಳಲ್ಲಿದೆ.

ಯ ಉಗ್ರಸೇನಃ ಸುರಗಾಯಕಃ ಸ
ಜಾತೋ ಯದುಷ್ವೇ ತಥಾಭಿಧೇಯಃ
ತವೈವ ಸೇವಾರ್ಥಮಮುಷ್ಯ ಪುತ್ರೋ
ಜಾತೋऽಸುರಃ ಕಾಲನೇಮಿಃ ಸ ಈಶ ॥೧೯೯॥

ದೇವಲೋಕದ ಗಾಯಕ ಉಗ್ರಸೇನನು, ಇಂದು ಅದೇ ಹೆಸರಿನಲ್ಲಿ ಯಾದವರ ಮನೆತನದಲ್ಲಿ ಹುಟ್ಟಿದ್ದಾನೆ. ತಮ್ಮ ಸೇವೆಯೇ ಅವನ ಮುಖ್ಯ ಉದ್ದೇಶವಾಗಿದೆ. ಹಿಂದಿನ ಕಾಲನೇಮಿಯೇ ಇಂದು ಉಗ್ರಸೇನನಿಗೆ ಮಗನಾಗಿ ಜನಿಸಿದ್ದಾನೆ. ಅಲ್ಲದೆ,

ಕಂಸನ ಉತ್ಪತ್ತಿ ಮತ್ತು ಪ್ರಭಾವ

ಯಸ್ತತ್ಪ್ರಿಯಾರ್ಥಂ ನ ಹತೋ ಹಿ ವಾಯುನಾ
ಭವತ್ಪ್ರಸಾದಾತ್ಪರಮೋಚಿತಾಪಿ ।

**ಸ ಏಷ ಭೋಜೇಷು ಪುನಶ್ಚಜಾತೋ**
**ವರಾದುಮೇಶಸ್ಯ ಪರೈರಜೇಯಃ ॥೨೦೦॥**

ನಿನ್ನ ಪ್ರೀತಿ ಮತ್ತು ಅನುಗ್ರಹಕ್ಕಾಗಿ ವಾಯುದೇವರು ಅಂದು ಅವನನ್ನು ಕೊಲ್ಲಲಿಲ್ಲ. ಅವನೇ ಭೋಜಮನೆತನದಲ್ಲಿ ಪುನಃ ಹುಟ್ಟಿ ಬಂದಿದ್ದಾನೆ. ಉಮಾಪತಿಯ ವರಬಲದಿಂದ ಅವನು 'ಪರರಿಂದ ಅಜೇಯ'ನೂ ಆಗಿದ್ದಾನೆ.

**ಸ ಔಗ್ರಸೇನೇ ಜನಿತೋಽಸುರೇಣ**
**ಕ್ಷೇತ್ರೇ ಹಿ ತದ್ರೂಪಧರೇಣ ಮಾಯಯಾ ।**
**ಗಂಧರ್ವಜೇನ ದ್ರಮಿಲೇನ ನಾಮ್ನಾ**
**ಕಂಸೋ ಜಿತೋ ಯೇನ ವರಾಚ್ಛಚೀ ಪತಿಃ ॥೨೦೧॥**

'ದ್ರಮಿಲ' ಎಂಬ ಅಸುರನು ಗಂಧರ್ವಮಾಯೆಯಿಂದ ಉಗ್ರಸೇನ ರೂಪತಾಳಿ, ಉಗ್ರಸೇನನ ಪತ್ನಿಯಲ್ಲಿ ಕ್ರೀಡಿಸಲಿಕ್ಕೆ, ಅಲ್ಲಿ ಕಾಲನೇಮಿಯೇ 'ಕಂಸ'ನಾಗಿ ಹುಟ್ಟಿದ್ದಾನೆ. ವರಬಲದಿಂದ ಅವನು ಇಂದ್ರನನ್ನೂ ಗೆದ್ದಿದ್ದಾನೆ. ಅಲ್ಲದೆ,

**ಜಿತ್ವಾ ಜಲೇಶಂ ಚ ಹೃತಾನಿಯೇನ**
**ರತ್ನಾನಿ ಯಕ್ಷಾಶ್ಚ ಜಿತಾಃ ಶಿವಸ್ಯ ।**
**ಕನ್ಯಾವನಾರ್ಥಂ ಮಗಧಾಧಿಪೇನ**
**ಪ್ರಯೋಜಿತಾಸ್ತೇ ಚ ಹೃತೇ ಬಲೇನ ॥೨೦೨॥**

ಆ ಕಂಸನು ವರುಣನನ್ನು ಗೆದ್ದಿದ್ದಾನೆ. ಅವರ ರತ್ನ ಭಂಡಾರವನ್ನು ದೋಚಿದ್ದಾನೆ. ಶಿವನಿಂದ ನಿಯೋಜಿಸಲ್ಪಟ್ಟ ಯಕ್ಷರನ್ನೂ ಗೆದ್ದಿದ್ದಾನೆ. ಮಗಧರಾಜನ ಕನ್ನಿಕೆಯರನ್ನು ಬಲಾತ್ಕಾರದಿಂದ ಅಪಹರಿಸಿದ್ದಾನೆ.

ಮಗಧರಾಜನಾರು?

**ಸ ವಿಪ್ರಚಿತ್ತಿಶ್ಚ ಜರಾಸುತೋಽಭೂ**
**ದ್ವರಾದ್ವಿಧಾತುರ್ಗಿರೀಶಸ್ಯ ಚೈವ ।**

ಸರ್ವೈರಜೇಯೋ ಬಲಮುತ್ತಮಂ ತತ್(ತತೋ)
ಜ್ಞಾತ್ವೈವ ಕಂಸಸ್ಯ ಮುದಾ ಸುತೇ ದದೌ ॥೨೦೩॥

ನಿವಾರಯಾಮಾಸ ನ ಕಂಸಮುದ್ಧತಂ
ಶಕ್ತೋಽಪಿ ಯೋ ಯಸ್ಯಬಲೇನ ಕಶ್ಚಿತ್ ।
ತುಲ್ಯಃ ಪೃಥಿವ್ಯಾಂ ವಿವರೇಷು ವಾ ಕ್ವಚಿತ್
ವಶೇ ಬಲಾಢ್ಯೋ(ದೋ) ನೃಪತೀಂಶ್ಚ ಚಕ್ರೇ ॥೨೦೪॥

ಹಿಂದೆ ಹತನಾದ ವಿಪ್ರಚಿತ್ತಿಯೇ ಇಂದು 'ಜರೆ'ಗೆ ಮಗನಾಗಿದ್ದಾನೆ. ಅವನಿಗೆ ಬ್ರಹ್ಮ ಮತ್ತು ಮಹಾರುದ್ರರ ವರಬಲಗಳೂ ಇವೆ. ಉತ್ತಮ ಬಲಶಾಲಿಯೂ ಅಹುದು. ಆದರೂ ಕಂಸನ ಬಲವನ್ನರಿತ ಅವನು, (ಜರಾಸಂಧನು) ತನ್ನ ಮಕ್ಕಳನ್ನು ಕಂಸನಿಗೆ ಸಂತೋಷದಿಂದ ಧಾರೆಯೆರೆದು ಕೊಟ್ಟಿದ್ದಾನೆ.

ಜರಾಸಂಧನು ಸಾಮಾನ್ಯನಲ್ಲ. ಬಲದಲ್ಲಿ ಅವನಿಗೆ ಸಮನಾದ ರಾಜರು ಪೃಥ್ವಿಯಲ್ಲಿ ಯಾರೂ ಇರಲಿಲ್ಲ. ತನ್ನ ಮಕ್ಕಳನ್ನು ಕಂಸನ ಬಂಧನದಿಂದ ಬಿಡಿಸುವ ಸಾಮರ್ಥ್ಯವೂ ಅವಲ್ಲಿದ್ದಿತು. ಆದರೂ ಒಬ್ಬ ಬಲಾಢ್ಯ ರಾಜನನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವುದಕ್ಕಾಗಿ ಜರಾಸಂಧನು ಹಾಗೆ ಮಾಡಿದನು.

ವಿ.ವಿ. ಇಲ್ಲಿ ಕಂಸನ ಪ್ರಾಬಲ್ಯದೊಂದಿಗೆ, ಜರಾಸಂಧನ ರಾಜನೀತಿಯೂ ವ್ಯಕ್ತವಾಗುತ್ತದೆ. ತನಗಿಂತಲೂ ಬಲಶಾಲಿಯಾದ ವೈರಿಯನ್ನು ವಶಪಡಿಸಿಕೊಳ್ಳಲು ಹಲವು ಉಪಾಯಗಳುಂಟು. ಅವುಗಳಲ್ಲಿ ಇದೂ ಒಂದು ಉಪಾಯ.

ಹತೌ ಪುರಾ ಯೌ ಮಧುಕೈಟಭಾಖ್ಯೌ
ತ್ವಯ್ಯೈವ ಹಂಸೋ ಡಿಭಿ(ಭ) ಕಶ್ಚ ಜಾತೌ ।
ವರಾದಜೇಯೌ ಗಿರೀಶಸ್ಯವೀರೌ
ಭಕ್ತೌ ಜರಾಸಂಧಮನು ಸ್ಮ ತೌಶಿವೇ ॥೨೦೫॥

ಮಧು–ಕೈಟಭ ರಕ್ಕಸರು ನಿನ್ನಿಂದ ಹಿಂದೆ ಹತರಾಗಿದ್ದವರು. ಇಂದು ಪುನಃ ಹಂಸ–ಡಿಭಿಕರಾಗಿ ಹುಟ್ಟಿದ್ದಾರೆ. ಅವರೂ ಗಿರೀಶನ ವರಬಲದಿಂದ ಅಜೇಯರಾಗಿ, ವೀರರೂ ಆಗಿದ್ದಾರೆ. ಜರಾಸಂಧನ ನಂತರ ಇವರೇ ಶಿವಭಕ್ತಿಯಲ್ಲಿ ಪ್ರಸಿದ್ಧರಾದವರು.

ವಿ.ವಿ. ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು 'ತ್ವಯೈವ' ಎಂಬ ಪದವನ್ನು ಬಳಸಿ, 'ಹಿಂದೆ ಹಯಗ್ರೀವನಾದ ನಾರಾಯಣನಿಗೂ ಇಂದು ಕೃಷ್ಣನಾಗುವ ನಾರಾಯಣನಿಗೂ ಭೇದವಿಲ್ಲ' ಎಂಬುದನ್ನು ಎತ್ತಿ ತೋರಿದ್ದಾರೆ. ಹಿಂದೆ ಮಧು–ಕೈಟಭರನ್ನು ಕೊಂದವರು ಹಯಗ್ರೀವ ದೇವರೇ ಅಲ್ಲವೇ? "ಅವತಾರಗಳಲ್ಲಿ ಭೇದವನ್ನು ಎಣಿಸಬಾರದು" ಎಂಬುದೇ ದ್ವೈತ ಸಿದ್ಧಾಂತ.

ಅದೇ ರೀತಿಯಲ್ಲಿ 'ಅನು' ಎಂಬ ಪದದಿಂದ ಜರಾಸಂಧನ ನಂತರ, ಶಿವಭಕ್ತಿಯಲ್ಲಿ ಇವರು ಎರಡನೆಯವರು ಎಂಬಲ್ಲಿ ಇಬ್ಬರು ಶಿವಭಕ್ತರಾಗಿದ್ದರೂ ಅವರ ಭಕ್ತಿಯ ಅಂತಸ್ತಿನಲ್ಲಿ ಅಂತರವಿದೆ ಎಂಬುದನ್ನು ತೋರಿ ತಾರತಮ್ಯವನ್ನು ಪ್ರತಿಪಾದಿಸಿದ್ದಾರೆ, ಎಂದರೆ ತಪ್ಪಲ್ಲ.

**ಅನ್ಯೇಽಪಿ ಭೂಮಾವಸುರಾಃ ಪ್ರಜಾತಾ–**
**ಸ್ತ್ವಯಾ ಹತಾ ಯೇ ಸುರದೈತ್ಯ ಸಂಗರೇ ।**
**ಅನ್ಯೇ ತಥೈವಾಂಧತಮಃ ಪ್ರಪೇದಿರೇ**
**ಕಾರ್ಯಂ ತಥೈಷಾಂ ಚ ತಮೋ ಗತಿಸ್ತ್ವಯಾ ॥೨೦॥**

ದೇವಾಸುರರ ಯುದ್ಧದಲ್ಲಿ ಅನೇಕ ದೈತ್ಯರು ನಿನ್ನಿಂದ ಹತರಾಗಿ ತಮೋಲೋಕಕ್ಕೆ ಸೇರಿದ್ದಾರೆ. ಆದರೂ ಪಾಪಕಾರ್ಯ ಪೂರ್ತಿಯಾಗದ ಕೆಲವು ದೈತ್ಯರು ಪುನಃ ಭೂಲೋಕದಲ್ಲಿ ಅವತರಿಸಿದ್ದಾರೆ. ಅವರೆಲ್ಲರೂ ತಮೋಯೋಗ್ಯರೇ. ಅವರೆಲ್ಲರಿಗೂ ನಿನ್ನಿಂದಲೇ ತಮೋಲೋಕ ಪ್ರಾಪ್ತವಾಗಬೇಕಾಗಿದೆ.

**ವ್ಯಾಸಾವತಾರೇ ನಿಹತಸ್ತ್ವಯಾ ಯಃ**
**ಕಲಿಃ ಸುಶಾಸ್ತ್ರೋಕ್ತಿಭಿರೇವ ಚಾದ್ಯ ।**

**ಶ್ರುತ್ವಾ ತ್ವದುಕ್ತೀಃ ಪುರುಷೇಷು ತೀಕ್ಷ್ಣ-**
**ನ್ನಿಷಚ್ಛಕಾರೇವ ಮನಸ್ತ್ವಯೀಶ ॥೨೦೭॥**

ವ್ಯಾಸಾವತಾರದಲ್ಲಿ ನೀನು ರಚಿಸಿದ ಸುವಾಕ್ಯಗಳು ಮತ್ತು ಸಚ್ಛಾಸ್ತ್ರಗಳ ಪ್ರಭಾವದಿಂದ, ಕಲಿಯಿಂದ ನಿರ್ಮಿತವಾದ ಮಿಥ್ಯಾಜ್ಞಾನ, ವಿಪರೀತ ಜ್ಞಾನಗಳು ತಕ್ಕಮಟ್ಟಿಗೆ ನಾಶವಾಗಿವೆ. ಆದರೂ ಈಗ ಅದೇ ಕಲಿಯು ಸಜ್ಜನರಲ್ಲಿ ಪ್ರವೇಶಿಸಿ ಸಂಶಯಜ್ಞಾನವನ್ನು ಹುಟ್ಟಿಸುತ್ತಿದ್ದಾನೆ. ಸಂಶಯ ಜ್ಞಾನದ ಪ್ರಭಾವ, ದೈತ್ಯರ ಬಲ, ಹೇ ಪ್ರಭೋ, ಅವು ನಿನ್ನಿಂದಲೇ ಈಗ ನಾಶವಾಗಬೇಕಾಗಿವೆ.

**ರಾಮಾತ್ಮನಾ ಯೇ ನಿಹತಾಶ್ಚರಾಕ್ಷಸಾ**
**ದೃಷ್ಟ್ವಾ ಬಲಂ ತೇಽಪಿ ತದಾ ತವಾದ್ಯ ।**
**ಸಮಂ ತವಾದ್ಯಂ ನ ಹಿ ಚಿಂತಯಂತಿ**
**ಸು ಪಾಪಿನೋಽಪೀಶ ತಥಾ ಹನೂಮತಃ ॥೨೦೮॥**

ರಾಮಾವತಾರದಲ್ಲಿ ಯಾವ ರಾಕ್ಷಸರು ನಿನ್ನಿಂದ ಹತರಾದರೋ, ಅವರು ಅಂದಿನ ನಿನ್ನ ಬಲವನ್ನು ಚೆನ್ನಾಗಿ ಬಲ್ಲವರಾಗಿದ್ದಾರೆ. ಇಂದು ಅವರು ಭೂಲೋಕದಲ್ಲಿ ಹುಟ್ಟಿದರೂ ನಿನ್ನನ್ನು ಸರ್ವೋತ್ತಮನೆಂದೇ ಧ್ಯಾನಿಸುತ್ತಿದ್ದಾರೆ. ಹನುಮಂತನ ಬಗೆಗೂ ಕೂಡ ಅದೇ ಭಾವನೆ ಇದೆ. ಆದರೂ (ಅದಕ್ಕೆ ಅರ್ಹರಲ್ಲ) ಎಷ್ಟಾದರೂ ಅವರು ಪಾಪಿಗಳೇ.

**ಯೇ ಕೇಶವ ತ್ವದ್ಬಹುಮಾನಯುಕ್ತಾ-**
**ಸ್ತಥೈವ ವಾಯೋ ನ ಹಿ ತೇ ತಮೋಂಧಮ್ ।**
**ಯೋಗ್ಯಾಃ ಪ್ರವೇಷ್ಟುಂ ತದತೋಹಿಮಾರ್ಗಾ-**
**ಚ್ಚಾಲ್ಯಾಸ್ತ್ವಯೊ ಜನಯತ್ಯೈವ ಭೂಮೌ ॥೨೦೯॥**

ಹೇ ಕೇಶವ! ನಿನಗೆ ಪ್ರಿಯರಾದವರು, ವಾಯುವಿಗೂ ಪ್ರಿಯರಾದವರೇ. ಅಂಥವರು ಅಂಧಂತಮಸ್ಸಿಗೆ ಹೋಗಲಾರರು. ಅಯೋಗ್ಯರು ಯೋಗ್ಯರ ಮಾರ್ಗವನ್ನು ಇಂದು ಅನುಸರಿಸುತ್ತಿರುವರು. ಭೂಲೋಕದಲ್ಲಿ ಈಗ

ಅವರನ್ನು ಆ ಮಾರ್ಗದಿಂದ ಬಿಡಿಸಬೇಕಾಗಿದೆ. ಅದಕ್ಕಾಗಿ ನೀನೇ ಅವತರಿಸಬೇಕು. (ಸನ್ಮಾರ್ಗಭ್ರಷ್ಟರನ್ನಾಗಿ ಮಾಡಲು ಉಪಾಯ)

ನಿತಾಂತಮುತ್ಪಾದ್ಯ ಭವದ್ವಿರೋಧಂ
ತಥೈವ (ಥಆಚ) ವಾಯೌ ಬಹುಭಿಃ ಪ್ರಕಾರೈಃ ।
ಸರ್ವೇಷು ದೇವೇಷು ಚ ಪಾತನೀಯಾ-
ಸ್ತಮಸ್ಯಥಾಂಧೇ ಕಲಿಪೂರ್ವ ಕಾಸುರಾಃ ॥೨೧೦॥

ಯಾವಾಗಲೂ, ನಿನ್ನಲ್ಲಿ ಮತ್ತು ವಾಯುವಿನಲ್ಲಿ ದ್ವೇಷವು ಹೆಚ್ಚಿಸುವಂತೆ ಪ್ರಯತ್ನಿಸಬೇಕು. ಅಲ್ಲದೆ ಎಲ್ಲ ದೇವತೆಗಳಲ್ಲೂ ಕೆಟ್ಟ ಭಾವನೆಗಳನ್ನು ಹುಟ್ಟಿಸಬೇಕು. ಇದರಿಂದ ಕಲಿ ಮೊದಲುಗೊಂಡು ಎಲ್ಲ ಅಸುರರೂ ತಾವಾಗಿಯೇ ಅಂಧಂ ತಮಸ್ಸಿನಲ್ಲಿ ಬೀಳುತ್ತಾರೆ. ಅಲ್ಲದೆ

ಹತೌ ಚ ಯೌ ರಾವಣಕುಂಭಕರ್ಣೌ
ತ್ವಯಾ ತ್ವದೀ ಯೌ ಪ್ರತಿಹಾರಪಾಲೌ ।
ಮಹಾಸುರಾವೇಶ ಯುತೌ ಹಿ ಶಾಪಾತ್
ತ್ವಯೈವ ತಾವದ್ಯ ವಿಮೋಚನೀಯೌ ॥೨೧೧॥

ರಾವಣ-ಕುಂಭಕರ್ಣರನ್ನು ನೀನೇ ಸಂಹರಿಸಿರುವಿ. ಅವರು ನಿನ್ನ ದ್ವಾರಪಾಲಕರು. ಅವರು ಇಂದು ಶಾಪ ನಿಮಿತ್ತವಾಗಿ ಮಹಾ ಅಸುರಾವೇಶಯುಕ್ತರಾಗಿ ಹುಟ್ಟಿದ್ದಾರೆ. (ಶಿಶಿಪಾಲ ಮತ್ತು ದಂತವಕ್ರ) ಅವರಿಗೆ ನೀನೇ ಇಂದು ಶಾಪದಿಂದ ವಿಮೋಚನ ಮಾಡಬೇಕಾಗಿದೆ.

ಯೌ ತೌ ತವಾರೀಹ ತಯೋಃ ಪ್ರವಿಷ್ಟೌ
ದೈತ್ಯೌ ತು ತವಾಂಧತಮಃ ಪ್ರವೀಶ್ಯೌ ।
ಯೌ ತೌ ತ್ವದೀಯ ಭವದೀಯವೇಶ್ಮ
ತ್ವಯಾ ಪುನಃ ಪ್ರಾಪಣೀಃ ಪರೇಶ ॥೧೧೨॥

ಯಾವ ದೈತ್ಯಶರೀರಗಳಲ್ಲಿ ಆ ಜಯ, ವಿಜಯಾದಿಗಳ ಪ್ರವೇಶವಾಗಿದೆಯೋ, ಆ ದೇಹಗಳ ದೈತ್ಯರಿಗೆ ತಮಸ್ಸು ಆಗಲೇಬೇಕು.

ಅದೇ ರೀತಿಯಾಗಿ ಶಾಪಗ್ರಸ್ತ ದ್ವಾರಪಾಲಕರು ಶಾಪದಿಂದ ವಿಮೋಚಕರಾಗಿ ಮೂಲರೂಪವನ್ನು ಪಡೆಯಬೇಕು.

ಆವಿಶ್ಯ ಯೋ ಬಲಿಮುಂಜಶ್ಚಕಾರ
ಪ್ರತೀಪಮಸ್ಮಾಸು ತಥಾ ತ್ವಯಾಶ ।
ಸ ಚಾಸುರೋ ಬಲಿನಾಮ್ನೈವ ಭೂಮೌ
ಸಾಲ್ವೋ ನಾಮ್ನಾ ಬ್ರಹ್ಮದತ್ತಸ್ಯ ಜಾತಃ ॥೨೧೩॥

ಬಲಿನಾಮಕ ದೈತ್ಯನು ಅಲ್ಲಲ್ಲಿ ಆವಿಷ್ಟನಾಗಿ ಜನರಮನದಲ್ಲಿ ಪರಮಾತ್ಮನ ಬಗೆಗೂ, ದೇವತೆಗಳ ಬಗೆಗೂ ಸಾಕಷ್ಟು ದ್ವೇಷವನ್ನು ಹುಟ್ಟಿಸಿದ್ದಾನೆ. ಇಂದು ಅವನೇ ಇಲ್ಲಿ ಸಾಲ್ವನಾಗಿ ಹುಟ್ಟಿದ್ದಾನೆ. ಅವನು ಬ್ರಹ್ಮದತ್ತನ ಮಗನು.

ಮಾಯಾಮಯಂ ತೇನ ವಿಮಾನಮಗ್ರ್ಯ-
ಮಭೇದ್ಯಮಾಪ್ತಂ ಸಕಲೈರ್ಗಿರೀಶಾತ್ ।
ವಿದ್ರಾವಿತೋಯೋ ಬಹುಶಸ್ತ್ವಯೈವ
ರಾಮಸ್ವರೂಪೇಣ ಭೃಗೂದ್ವಹೇನ ॥೧೧೪॥

ಹಿಂದೆ ಇದೇ ಸಾಲ್ವನೇ, ಪರಶುರಾಮ ಅವತಾರದಲ್ಲಿ ನಿನ್ನೊಡನೆ ದ್ವೇಷಿಸಿ, ಯುದ್ಧಮಾಡಿ ಸೋತಿದ್ದಾನೆ. ಇಂದು ರುದ್ರದೇವರನ್ನು ಉಪಾಸಿಸಿ ಮಾಯಾಮಾಯ ವಿಮಾನ ಪಡೆದಿದ್ದಾನೆ. ಅದು ಅನ್ಯರಿಗೆ ಅಭೇದ್ಯವಾಗಿದೆ. ಆ ವಿಮಾನದ ಹೆಸರು ಸೌಭಾಖ.

ಪರಶುರಾಮರಿಗೆ ಅವನನ್ನು ಕೊಲ್ಲಲು ಶಕ್ತಿಯಿರಲಿಲ್ಲವೇ?

ನಾ ಸೌ ಹತಃ ಶಕ್ತಿಮತಾಪಿ ತತ್ರ
ಕೃಷ್ಣಾವತಾರೇ ಸಮಯೈವ ವಧ್ಯಃ ।
ಇತ್ಯಾತ್ಮಸಂಕಲ್ಪಮೃತಂ ವಿಧಾತುಂ
ಸ ಚಾತ್ರ ವಧ್ಯೋ ಭವತಾತಿಪಾಪಿ ॥೨೧೫॥

ಆ ಸಮಯದಲ್ಲಿಯೇ ನೀನು ಅವನನ್ನು ಕೊಲ್ಲಲು ಸಮರ್ಥನಾದರೂ ಕೊಲ್ಲಲಿಲ್ಲ. ಕೃಷ್ಣಾವತಾರದಲ್ಲಿಯೇ ಅವನು ನಿನ್ನಿಂದಲೇ ಸಾಯಬೇಕು. ಇದು ಬ್ರಹ್ಮನ ಸಂಕಲ್ಪ. ಅದು ನಿನ್ನದೂ ಆಹುದು. ಆ ಸಂಕಲ್ಪ ಇಂದು ಪೂರ್ತಿಯಾಗಬೇಕಾಗಿದೆ. ಕಾರಣ ತಾವೇ ಈಗ (ಅವನನ್ನು) ಆ ಪಾಪಿಯನ್ನು ವಧಿಸಿರಿ.

ಸಾಲ್ವನ ತಂದೆಗೆ 'ಸೌಭಪತಿ' ಎನ್ನಲು ಕಾರಣ

**ಯದೀಯ ಮಾರುಹ್ಯ ವಿಮಾನಮಸ್ಯ**
**ಪಿತಾಭವತ್ ಸೌಭಪತಿಶ್ಚ ನಾಮಾ ।**
**ಯದಾ ಸ ಭೀಷ್ಮೇಣ ಜಿತಃ ಪಿತಾಸ್ಯ**
**ತದಾ ಸ ಸಾಲ್ವಸ್ತಪಸ್ ಸ್ಥಿತೋಽಭೂತ್** ॥೨೧೬॥

ಆ ವಿಮಾನವನ್ನು ಮಗನೇ ಸಂಪಾದಿಸಿದ್ದರೂ, ತಂದೆಯೇ ಅದರಲ್ಲಿ ಆರೂಢನಾಗಿ ತಿರುಗಾಡುತ್ತಿದ್ದನು. ಆ ವಿಮಾನ ಹೆಚ್ಚಾಗಿ ತಂದೆಯಲ್ಲಿಯೇ ಇರುತ್ತಿತ್ತು ಕಾರಣ 'ಸೌಭಪತಿ' ಎಂದು ಪ್ರಸಿದ್ಧನಾದನು. ಇಂತಹ ವಿಮಾನವಿದ್ದಾಗಲೂ ಭೀಷ್ಮರು ಅವನನ್ನು ಹೇಗೆ ಗೆದ್ದರು? ಬ್ರಹ್ಮದತ್ತನು ಭೀಷ್ಮರೊಡನೆ ಯುದ್ಧಮಾಡಿ–ಸೋಲುವಾಗ ಆ ವಿಮಾನ ಅವನ ಹತ್ತಿರ ಇರಲಿಲ್ಲ. ಆಗ ಸಾಲ್ವನು ಅದರ ಪ್ರಾಪ್ತಿಗಾಗಿ ತಪಸ್ಸಿನಲ್ಲಿದ್ದನು.

**ಸ ಚಾದ್ಯ ತಸ್ಮಾತ್ತಪಸೋ ನಿವೃತ್ತೋ**
**ಜರಾಸುತಸ್ಯಾನುಮತೇ ಸ್ಥಿತೋ ಹಿ ।**
**ಅನನ್ಯವಧ್ಯೋ ಭವತಾದ್ಯ ವಧ್ಯಃ**
**ಸ ಪ್ರಾಪಣೀಯಶ್ಚ ತಮಸ್ಯಥೋಂಧೇ (ಥೋಽಗ್ರೇ)** ॥೨೧೭॥

ಅವನು ವಿಮಾನವನ್ನು ಪಡೆದ ಮೇಲೆ ತಪಸ್ಸಿನಿಂದ ನಿವೃತ್ತನಾಗಿದ್ದಾನೆ. ಈಗ ಅವನು ಜರಾಸಂಧನ ಅನುಮತಿಯಂತೇ ನಡೆಯುತ್ತಾನೆ. ನಿಮ್ಮ ಹೊರತು ಅನ್ಯರಿಂದ ಅವನನ್ನು ವಧಿಸಲು ಶಕ್ಯವಿಲ್ಲ. ಅಲ್ಲದೇ ಈಗ ಅವನು ತಮಸ್ಸಿನ ಪ್ರಾಪ್ತಿಗಾಗಿ ಯೋಗ್ಯನಾಗಿದ್ದಾನೆ.

**ಯೋ ಬಾಣ ಮಾವಿಶ್ಯ ಮಹಾಸುರೋಽಭೂತ್**
**ಸ್ಥಿತಃ ಸ ನಾಮ್ನಾ ಪ್ರಥಿತೋಽಪಿ ಬಾಣಃ ।**
**ಸ ಕೀಚಕೋನಾಮ ಬಭೂವ ರುದ್ರ–**
**ವರಾದವಧ್ಯಃ ಸ ತಮಃ ಪ್ರವೇಶ್ಯಃ ॥೨೧೮॥**

'ಬಾಣ' ಕರ್ಮಜ ದೇವತೆ. ಅವನಲ್ಲಿ ಅಸುರನ ಪ್ರವೇಶ ಆಗಿದೆ. ಆದರೂ ಅವನು ಬಾಣನೆಂದೇ ಪ್ರಸಿದ್ಧನಾದನು. ಇಂದು ಅವನೇ ಕೀಚಕನಾಗಿ ಹುಟ್ಟಿದ್ದಾನೆ. ರುದ್ರದೇವರ ವರದಿಂದ ಅವಧ್ಯನಾಗಿದ್ದಾನೆ. ಕ್ರೂರ ಕರ್ಮಗಳಿಂದ ಅವನೂ ತಮ್ಮ ಪ್ರವೇಶಕ್ಕೆ ಯೋಗ್ಯನಾಗಿದ್ದಾನೆ.

(ಪ್ರಾರ್ಥನೆ)

**ಅತಸ್ತ್ವಯಾ ಭುವ್ಯತೀರ್ಯ ದೇವ–**
**ಕಾರ್ಯಾಣಿ ಕಾರ್ಯಾಣ್ಯಖಿಲಾನಿ ದೇವ ।**
**ತ್ವಮೇವ ದೇವೇಶ ಗತಿಃ ಸುರಾಣಾಂ**
**ಬ್ರಹ್ಮೇಶ ಶಕ್ರೇಂದು ಯಮಾದಿ ಕಾನಾಮ್ ॥೨೧೯॥**

ಹೇ ದೇವ, ಈಗ ನೀನು ಭೂಮಿಯಲ್ಲಿ ಅವತರಿಸಿ, ದೇವತೆಗಳು ಮಾಡಬೇಕಾದ ಎಲ್ಲ ಕಾರ್ಯಗಳಿಗೆ ಅವಕಾಶ ಮಾಡಿಕೊಡು. ಹೇ ದೇವ, ನೀನೇ ದೇವೇಶ, ನೀನೇ ಸರ್ವೋತ್ತಮನು. ಬ್ರಹ್ಮ, ರುದ್ರ, ಚಂದ್ರ, ಇಂದ್ರ, ಯಮ ಮೊದಲಾದ ಅನೇಕ ದೇವತೆಗಳಿಗೆ ನೀನೇ ಗತಿಯಲ್ಲವೇ? ಆಧಾರನೂ ಅಹುದು.

ಪರಮಾತ್ಮನ ಗುಣವರ್ಣನೆ

**ತ್ವಮೇವ ನಿತ್ಯೋದಿತ ಪೂರ್ಣಶಕ್ತಿ**
**ತ್ವಮೇವ ನಿತ್ಯೋದಿತ ಪೂರ್ಣಚಿದ್ಘನಃ ।**
**ತ್ವಮೇವ ನಿತ್ಯೋದಿತ ಪೂರ್ಣಸತ್ಸುಖ–**
**ಸ್ತ್ವಾದೃಙ್ನ ಕಶ್ಚಿತ್ಕುತ ಏವ ತೇಽಧಿಕಃ ॥೨೨೦॥**

ಹೇ ದೇವ! ನೀನು ಸದಾ ಉದಯವಾಗುತ್ತಿರುವ ಪೂರ್ಣ ಶಕ್ತಿಸಂಪನ್ನ. ನೀನೇ ಯಾವಾಗಲೂ ಅಭಿವ್ಯಕ್ತನಾಗುವ ಪೂರ್ಣಜ್ಞಾನಾನಂದನು. ನೀನೆಯೇ ದುಃಖರಹಿತವಾದ ಸಂಪೂರ್ಣ ಸುಖದಿಂದ ಕೂಡಿದ ಮೂರ್ತಿಯು. ನಿನಗೆ ಸದೃಶವಾಗಲಿ, ಅಧಿಕರಾಗಲಿ ಇನ್ನು ಯಾರಿದ್ದಾರೆ?

**ಇತೀರಿತೋ ದೇವವರ್ಯೈರುದಾರ–**
**ಗುಣಾರ್ಣವೋಽಕ್ಷೋಭ್ಯತಮಾ ಮೃತಾಕೃತಿ: ।**
**ಉತ್ಥಾಯ ತಸ್ಮಾತ್ ಪ್ರಯಯಾವನಂತ**
**ಸೋಮಾರ್ಕಕಾಂತಿ ದ್ಯುತಿರನ್ವಿತೋಽಮರ್ತ್ಯೈ: ॥೨೨೧॥**

ಈ ರೀತಿಯ ಪ್ರಾರ್ಥನೆಯನ್ನು ಆಲಿಸಿ, ಉದಾರ ಮತ್ತು ಉತ್ತಮ ಗುಣಗಳಿಗೆ ಸಮುದ್ರನಾದ, ಕ್ಷೋಭರಹಿತ ಅಮೃತ ಆಕೃತಿಯುಳ್ಳ, ಅನಂತ ಸೂರ್ಯ ಚಂದ್ರರ ಕಾಂತಿಗಳಿಂದ ಕೂಡಿದ, ವಿಚಿತ್ರವಾದ ಪ್ರಕಾಶ ಹೊರಹೊಮ್ಮುವ ಪರಮಾತ್ಮನು ಶೇಷನ ಮೇಲಿಂದ ಎದ್ದು ಸಕಲ ದೇವತೆಗಳ ಮಧ್ಯ ನಿಂತನು.

ಕಾಂತಿ – ದ್ಯುತಿ ಎರಡು ಪದಗಳಿಂದ ಸೂರ್ಯನ ಕಿರಣಗಳ ಪ್ರಭಾವ ಮತ್ತು ಚಂದ್ರನ ಕಾಂತಿಯ ಪ್ರಭಾವ ಬೇರೆ ಬೇರೆ ಎಂಬುದನ್ನು ಸೂಚಿಸಿದ್ದಾರೆ.

**ಸ ಮೇರುಮಾಪ್ಯಾಹ ಚತುರ್ಮುಖಂ ಪ್ರಭು–**
**ಯತ್ರ ತ್ವಯೋಕ್ತೋಽಸ್ಮಿ ಹಿ ತತ್ರ ಸರ್ವಥಾ ।**
**ಪ್ರಾಧುರ್ಭವಿಷ್ಯೇ ಭವತೋ ಹಿ ಭಕ್ತ್ಯಾ**
**ವಶಸ್ತ (ಸ್ತ್ರಿ) ವಾಹಂ ಸ್ವವಶೋಽಪಿ ಚೇಚ್ಛಯಾ ॥೨೨೨॥**

ಪರಮಾತ್ಮನು ಮೇರುಪರ್ವತಕ್ಕೆ ಬಂದನು. ನಂತರ ಬ್ರಹ್ಮನನನು ಕುರಿತು, ನೀನು ಯಾವ ಸ್ಥಳದಲ್ಲಿ ಹೇಳುತ್ತಿಯೋ, ಅಲ್ಲಿಯೇ ನಾನು ನಿಶ್ಚಯವಾಗಿ ಪ್ರಾದುರ್ಭವಿಸುತ್ತೇನೆ. ನೀನು ಶ್ರೇಷ್ಠ ಭಕ್ತನಾಗಿರುವಿ. ನಾನು ಸ್ವಇಚ್ಛೆಯಿಂದ ವ್ಯವಹರಿಸಬಲ್ಲೆನು. ಆದರೂ ನಾನು ಭಕ್ತಿಽವಶನಾಗಿದ್ದೇನೆ.

**ಅಹಂ ಭಕ್ತ ಪರಾಧೀನೋಹ್ಯ ಸ್ವತಂತ್ರ ಇವ ದ್ವಿಜ ।**
**ವಶೀ ಕುರ್ವಂತಿ ಮಾಂ ಭಕ್ತ್ಯಾ ಸತ್ಸ್ತ್ರಿಯಃ ಸತ್ಪತಿಂ ಯಥಾ ॥**

ಈ ಶ್ಲೋಕವು ಮೇಲಿನ ಭಾವನೆಯನ್ನು ಇನ್ನೂ ಚೆನ್ನಾಗಿ ಸ್ಪಷ್ಟೀಕರಿಸುತ್ತದೆ– ಎಂದರೆ ತಪ್ಪಾಗಲಿಕ್ಕಿಲ್ಲ.

"ಪ್ರಾದುರ್ಭವಿಷ್ಯೇ" ಎನ್ನುವ ಪದದಿಂದ ಆಚಾರ್ಯರು ಪರಮಾತ್ಮನಿಗೆ ನಮ್ಮಂತೆ ಜನನವಿಲ್ಲ. ಆತನು ಪ್ರಾದುರ್ಭಾವಿಸುತ್ತಾನೆ ಎಂದು ತೋರಿಸಿದ್ದಾರೆ. ಪ್ರಕಟನಾಗು, ಅವಿರ್ಭೂತನಾಗು ಪರ್ಯಾಯ ಪದಗಳು.

ಬ್ರಹ್ಮನ ವಿನಂತಿ

**ಬ್ರಹ್ಮಾ ಪ್ರಣಮ್ಯಾಹ ತಮಾತ್ಮ ಕಾರಣಂ**
**ಪ್ರಾದಾಂ ಪುರಾಹಂ ವರುಣಾಯ ಗಾಃ ಶುಭಾಃ ।**
**ಜಹಾರ ತಾಸ್ತಸ್ಯ ಪಿತಾಮೃತಸ್ರವಾಃ**
**ಸ ಕಶ್ಯಪೋ ದ್ರಾಕ್ಸಹಸಾತಿಗರ್ವಿತಃ ॥೨೨॥**

ಬ್ರಹ್ಮನು ತನ್ನ ಜನ್ಮಕ್ಕೆ ಕಾರಣನಾದ ನಾರಾಯಣನಿಗೆ ನಮಸ್ಕರಿಸಿ, ಪೂರ್ವದಲ್ಲಿ ನಾನು ವರುಣನಿಗೆ ಕೆಲವು ಒಳ್ಳೆಯ ಆಕಳುಗಳನ್ನು ಕೊಟ್ಟೆನು. ಎಲ್ಲ ದೇವತೆಗಳಿಗಿದ್ದಂತೆ ನಾನು ಅವನಿಗೆ ತಂದೆಯೇ ಅಲ್ಲವೇ? ಆದರೆ ಕಶ್ಯಪನು ಗರ್ವದಿಂದ, ನಾನು ಕೊಟ್ಟ ಆ ಗೋವುಗಳನ್ನು ಅಪಹರಿಸಿದನು.

**ಮಾತ್ರಾ ತ್ವದಿತ್ಯಾ ಚ ತಥಾ ಸುರಭ್ಯಾ**
**ಪ್ರಚೋದಿತೇನೈವ ಹೃತಾಸು ತಾಸು ।**
**ಶ್ರುತ್ವಾ ಜಲೇಶಾತ್ ಸ ಮಯಾಭಿ(ತು) ಶಪ್ತಃ**
**ಕ್ಷತ್ರೇಷು ಗೋಜಿವನಕೋ ಭವೇತಿ । ॥೨೩॥**

ತಾಯಿಯಾದ ಅದಿತಿಯ ಉಪದೇಶ, ಸುರಭಿಯ ಆಕರ್ಷಣೆ ಇವುಗಳಿಂದ ಪ್ರಚೋದಿತನಾಗಿ ಕಶ್ಯಪನು ಈ ಕೆಲಸ ಮಾಡಿದನೆಂದು ವರುಣನಿಂದಲೇ ಕೇಳಿ, "ನೀನು ಕ್ಷತ್ರಿಯನಲ್ಲಿ ಹುಟ್ಟಿ ಗೋವಿನಿಂದಲೇ ಉಪಜೀವಿಸು" ಎಂದು ನಾನೇ ಕಶ್ಯಪರಿಗೆ ಶಾಪಕೊಟ್ಟಿದ್ದೇನೆ.

ಕ್ಷತ್ರಿಯನಾದವನಿಗೆ 'ಗೋಜೀವನವು' ನೀಚ ಕೆಲಸವೇ ಸೈ.

**ಶೂರಾತ್ ಸ ಜಾತೋ ಬಹು ಗೋಧನಾಢ್ಯೋ**
**ಭೂಮಾ ಯಮಾಹುರ್ವಸುದೇವ ಇತ್ಯಪಿ ।**
**ತಸ್ಯೈವ ಭಾರ್ಯಾ ತ್ವದಿತಿಶ್ಚ ದೇವಕೀ**
**ಬಭೂವ ಚಾನ್ಯಾ ಸುರಭಿಶ್ಚ ರೋಹಿಣೀ ॥೨೨೫॥**

ಆ ಕಶ್ಯಪನೇ 'ಶೂರ' ಎಂಬ ಯಾದವರ ಮನೆತನದಲ್ಲಿ ಹುಟ್ಟಿದ್ದಾನೆ. ಬಹಳಷ್ಟು ಗೋಸಂಪತ್ತು ಹೊಂದಿದ್ದಾನೆ. ಅವನೇ ಶೂರ ಪುತ್ರನಾದ ವಸುದೇವನು. ಅದಿತಿಯೇ ದೇವಕಿಯಾಗಿ ಅವನಿಗೆ ಹೆಂಡತಿಯಾಗಿದ್ದಾಳೆ. ಸುರಭಿಯು ರೋಹಿಣಿಯಾಗಿ ಅವನಿಗೆ ಮತ್ತೊಬ್ಬಳು ಹೆಂಡತಿಯಾಗಿದ್ದಾಳೆ.

**ತತ್ತ್ವಂ ಭವಸ್ವಾಶು ಚ ದೇವಕೀ ಸುತ**
**ಸ್ತಥೈವ ಯೋ ದ್ರೋಣ ನಾಮಾವಸುಃ ಸಃ ।**
**ಸ್ವಭಾರ್ಯಯಾ ಧರಯಾ ತ್ವತ್ಪಿತೃತ್ವಂ**
**ಪ್ರಾಪ್ತುಂ ತಪಸ್ತೇಪ ಉದಾರ ಮಾನಸಃ ॥೨೨೬॥**

ಈಗ ನೀನು ಅಲ್ಲಿ ದೇವಕಿಯ ಮಗನಾಗಿ ಅವತರಿಸು. ಅಲ್ಲದೆ ದ್ರೋಣನಾಮಕ ವಸು, ಹೆಂಡತಿಯಾದ ಧರಾದೇವಿ ಸಹಿತ ಅಲ್ಲಿಯೇ ಹುಟ್ಟಿದ್ದಾನೆ. ಆತನೂ ನಿನ್ನ ತಂದೆಯಾಗಬೇಕೆಂಬ ಇಚ್ಛೆಯಿಂದ ತಪಸ್ಸು ಆಚರಿಸುತ್ತಿದ್ದಾನೆ. ಅವನು ಬಹಳ ಉದಾರಿ ಮತ್ತು ಒಳ್ಳೆಯವನು.

**ತಸ್ಮೈ ವರಃ ಸ ಮಯಾಸನ್ನಿಸೃಷ್ಟಃ**
**ಸ ಚಾಸ ನಂದಾಖ್ಯ ಉತಾಸ್ಯ ಭಾರ್ಯಾ ।**
**ನಾಮ್ನಾ ಯಶೋದಾ ಸಚ ಶೂರತಾತ**
**ಸುತಸ್ಯ ವೈಶ್ಯಾ ಪ್ರಭಾವೋಽಥ ಗೋಪಃ ॥೨೨೭॥**

ಅವನಿಗೆ, "ನಿನ್ನ ಇಚ್ಛೆ ಫಲಿಸಲಿ' ಎಂದ ನಾನು ವರವನ್ನು ಕೊಟ್ಟಿದ್ದೇನೆ. ಅವನೇ ಇಂದು ನಂದ ಎಂಬ ಹೆಸರಿನಿಂದ ಹುಟ್ಟಿದ್ದಾನೆ. ಅವನ

ಹೆಂಡತಿಯೇ ಯಶೋದೆ. ಶೂರನಿಂದ ಸ್ವೀಕರಿಸಲ್ಪಟ್ಟ ವೈಶ್ಯಯಲ್ಲಿ ಹುಟ್ಟಿದ ಪ್ರಯುಕ್ತ, ಅವನು ಗೋಪಾಲಕನಾಗಿದ್ದಾನೆ.

**ತೌ ದೇವಕೀ ವಸುದೇವೌ ತೇಪತು**
**ಸ್ತಪಸ್ತ್ವದೀಯಂ ಸುತಮಿಚ್ಛಮಾನೌ ।**
**ತ್ವಾಮೇವ ತಸ್ಮಾತ್ ಪ್ರಥಮಂ ಪ್ರದರ್ಶ್ಯ**
**ತತ್ರ ಸ್ವರೂಪಂ ಹಿ ತತೋ ವ್ರಜಂ ವ್ರಜ ॥೨೨೮॥**

ಆ ವಸುದೇವ ದೇವಕಿಯರು ಕೂಡ, ನೀನೇ ತಮ್ಮ ಮಗನಾಗಬೇಕೆಂದು ತಪಸ್ಸು ಮಾಡಿದ್ದಾರೆ. ಕಾರಣ ಮೊದಲು ನೀನು ಅಲ್ಲಿ ಮೂಲಸ್ವರೂಪದಿಂದ ಪ್ರಕಟನಾಗು. ನಂತರ ಗೋಕುಲದಲ್ಲಿ ನಂದಗೋಪನ ಮನೆಗೆ ಹೋಗು.

**ಇತೀರಿತ: (ತೇ) ಸೋऽಬ್ಜ ಭವೇನ ಕೇಶವ**
**ಸ್ತಥೇತಿ ಚೋಕ್ತ್ವಾ ಪುನರಾಹ ದೇವತಾ: ।**
**ಸರ್ವೇ ಭವಂತೋ ಭವತಾಶು ಮಾನುಷೇ**
**ಕಾರ್ಯಾನುಸಾರೇಣ ಯಥಾನುರೂಪತ: ॥೨೨೯॥**

ಬ್ರಹ್ಮನಿಂದ ಈ ರೀತಿ ಕೇಳಿದ ಶ್ರೀಹರಿ, 'ಹಾಗೇ ಆಗಲಿ' ಎಂದು ಹೇಳಿದನು. "ನೀವೆಲ್ಲ ದೇವತೆಗಳು ಭೂಲೋಕದಲ್ಲಿ ಮಾನವರಾಗಿ ಹುಟ್ಟಿರಿ. ಆದರೆ ನಿಮ್ಮ ನಿಮ್ಮ ಕಾರ್ಯ ಮತ್ತು ನಿಮ್ಮ ನಿಮ್ಮ ಯೋಗ್ಯತೆಗಳಿಗೆ ಅನುಗುಣವಾಗಿ ಜನ್ಮತಾಳಿರಿ" ಎಂದು ಪರಮಾತ್ಮನು ಅಪ್ಪಣೆ ಇತ್ತನು.

ವಿ.ವಿ. ಇದರಲ್ಲಿ ಬ್ರಾಹ್ಮಣ,ಕ್ಷತ್ರಿಯ ಮತ್ತು ಶೂದ್ರ, ಈ ವರ್ಣಗಳವರು ಆಯಾ ವರ್ಣಗಳಲ್ಲಿಯೇ ಜನಿಸಿ, ನಿಯೋಜಿತ ಮತ್ತು ನಿರ್ದಿಷ್ಟ ಕಾರ್ಯಗಳನ್ನು ಮರೆಯಬಾರದು ಎಂಬ ಮಾತು ವಾಚಕರು ಅರಿಯಬೇಕಾಗಿ ವಿನಂತಿ.

**ಅಥಾವತೀರ್ಣಾ: ಸಕಲಾಶ್ಚ ದೇವತಾ**
**ಯಥಾ ಯಥೈವಾಹ ಹರಿಸ್ತಥಾ ತಥಾ ।**

**ವಿತ್ತೇಶ್ವರ: ಪೂರ್ವಮಭೂದ್ಧಿ ಭೌಮಾ**
**ದ್ಧರೇಣ ಸುತತ್ವೇಽಪಿ ತರಿಚ್ಛಯಾ ಸುರಾತ್ ॥೨೩೦॥**

ಶ್ರೀಹರಿಯಿಂದ ಈ ರೀತಿಯ ಆಜ್ಞೆಯನ್ನು ಪಡೆದ ನಂತರ ಎಲ್ಲ ದೇವತೆಗಳು ಪರಮಾತ್ಮನ ಇಚ್ಛೆಯಂತೆಯೇ ಅಲ್ಲಲ್ಲಿ ಹುಟ್ಟಿದರು. ಆದರೆ ಕುಬೇರನು ಮಾತ್ರ ತಾನು ದೇವತೆಯಾದರೂ, ನರಕಾಸುರನ ಮಗನಾಗಿ ಹುಟ್ಟಿದನು.

ಅಸುರರ ಹೊಟ್ಟೆಯಲ್ಲಿ ಸುರನಾದ ಕುಬೇರನು ಹುಟ್ಟಲು ಕಾರಣ.

**ಪಾಪೇನ ತೇನಾಪಹೃತೋ ಹಿ ಹಸ್ತಿ**
**ಶಿವ ಪ್ರದತ್ತ: ಸುಪ್ರತೀಕಾಭಿಧಾನ: ।**
**ತದರ್ಥ ಮೇವಾಸ್ಯ ಸುತೋಽಭಿ ಜಾತೋ**
**ಧನೇಶ್ವರೋ ಭಗದತ್ತಾಭಿ ದಾನ: ॥೨೩೧॥**

ಪಾಪಿಷ್ಠನಾದ ನರಕಾಸುರನು, ರುದ್ರದೇವರು ಕುಬೇರನಿಗೆ ಕೊಟ್ಟ 'ಸುಪ್ರತೀಕ' ಎಂಬ ಆನೆಯನ್ನು ಬಲತ್ಕಾರದಿಂದ ಅಪಹರಿಸಿದನು. ಅದನ್ನು ಮರಳಿ ಪಡೆಯುವ ಉದ್ದೇಶದಿಂದಲೇ ಕುಬೇರನು ನರಕಾಸುರನಿಗೆ ಮಗನಾಗಿ ಹುಟ್ಟಿದನು. ಅವನೇ ಭಗದತ್ತನು.

ವಿ.ವಿ. ಒಂದು ವಸ್ತುವಿನ ಮೋಹ, ವ್ಯಕ್ತಿಯನ್ನು ಯಾವ ಮಟ್ಟಕ್ಕೆ ಮುಟ್ಟಿಸುತ್ತದೆ ಎಂಬುದನ್ನು ಓದುಗರು ಮನಗಾಣಬಹುದು. ಜಿಗರೆಯ ಮೋಹ ಜಡಭರತನಿಗೆ, ಆನೆಯ ಮೋಹ ಕುಬೇರನಿಗೆ ಇವೆರಡನ್ನೂ ಲಕ್ಷ್ಯದಲ್ಲಿಟ್ಟು ವ್ಯಕ್ತಿ ಬಾಳಿದರೆ ಅವನ ಬಾಳು ಬಂಗಾರವಾಗುವುದು.

**ಮಹಾಸುರಸ್ಯಾಂಶಯುತ: ಸ ಏವ**
**ರುದ್ರಾವೇಶಾದ್ಬಲವಾನಸ್ತ್ರವಾಂಶ್ಚ ।**
**ಶಿಷ್ಯೋ ಮಹೇಂದ್ರಸ್ಯ ಹತೇ ಬಭೂವ**
**ತಾತೇ ಸ್ವಧರ್ಮಾಭಿರತಶ್ಚ ನಿತ್ಯಮ್ ॥೨೩೨॥**

ಆ ಭಗದತ್ತನಿಗೆ ಮಹಾಸುರಾವೇಶವಿದ್ದಿತು. ಜೊತೆಯಲ್ಲಿ ರುದ್ರಾವೇಶವು ಕೂಡ. ಈ ಎರಡು ಕಾರಣಗಳಿಂದ ಅವನು ಬಲಿಷ್ಠನೂ, ಶಾಸ್ತ್ರಾಸ್ತ್ರ

ವೇತ್ತನೂ ಆಗಿದ್ದನು. ದೇವೇಂದ್ರನ ಶಿಷ್ಯನೂ ಅಹುದು. ತಂದೆಯಾದ ನರಕಾಸುರನು ಹತನಾದ ನಂತರ ಅವನು ಸ್ವಧರ್ಮದಲ್ಲಿ ನಿರತನಾದನು. ಅಸುರಾವೇಶವೂ ಮುಕ್ತಾಯವಾಯಿತು.

ದೇವತೆಗಳ ಅವತಾರ

**ಅಭೂಚ್ಛಿನಿರ್ನಾಮ ಯದುಪ್ರವೀರ–**
**ಸ್ತಸ್ಯಾತ್ಮಜಃ ಸತ್ಯಕ ಆಸ ತಸ್ಮಾತ್ ।**
**ಕೃಷ್ಣಃ ಪಕ್ಷೋ ಯುಯುಧಾನಾಭಿಧೇಯೋ**
**ಗರುತ್ಮತೋಂಶೇನ ಯುತೋ ಬಭೂವ ॥೨೩॥**

'ಶಿನಿ' ಎಂಬ ಶ್ರೇಷ್ಠನಾದ ಯಾದವನಿದ್ದನು. ಅವನ ಮಗನೇ ಸತ್ಯಕನು. ಅವನ ಹೊಟ್ಟೆಯಲ್ಲಿ 'ಯುಯುಧಾನ' ಎಂಬ ಮಗನಾದನು. ಅವನು ಗರುಡನ ಅಂಶದಿಂದ ಕೂಡಿದವನಾಗಿದ್ದನು. ಅವನು ಕೃಷ್ಣನ ಪಕ್ಷದವನೂ ಅಹುದು.

**ಯಃ ಸಂವಹೋ ನಾಮಮರುತ್ತದಂಶ**
**ಶ್ಚಕ್ರಸ್ಯ ವಿಷ್ಣೋಶ್ಚ ಬಭೂವ ತಸ್ಮಿನ್ ।**
**ಯದುಷ್ವಭೂದ್ಧೃದಿಕೋ ಭೋಜ ವಂಶೇ**
**ಸಿತಃ ಪಕ್ಷಸ್ತಸ್ಯ ಸುತೋ ಬಭೂವ ॥೨೪॥**

ಯಾವನಲ್ಲಿ 'ಸಂವಹ' ಎಂಬ ವಾಯುವಿನ ಅಂಶವಿದ್ದಿತು. ವಿಷ್ಣುವಿನ ಚಕ್ರಾಭಿಮಾನಿಯಾದ ಕಾಮನ ಅಂಶವೂ ಕೂಡಿತ್ತು. ಜೊತೆಯಲ್ಲಿ ವಿಷ್ಣುವಿನ ಅಂಶವು ಇತ್ತು. ಅವನೇ 'ಹೃದಿಕನು' ಭೋಜ ಮನೆತನದವನ ಶುಕ್ಲಪಕ್ಷಕ್ಕೆ ಅಭಿಮಾನಿಯಾದ ದೇವತೆಯ ಮಗನು ಕೂಡ.

**ಸ ಪಾಂಚ ಜನ್ಯಾಂಶಯುತೋ ಮರುತ್ಸ**
**ತಥಾಂಶಯುಕ್ತಃ ಪ್ರವಹಸ್ಯ ವೀರಃ ।**
**ನಾಮಸ್ಯ ಚಾಭೂತ್ ಕ್ರತವರ್ಮೇತ್ಯಥಾನ್ಯೆ**
**ಯೇ ಯಾದವಾಸ್ತೇಽಪಿ ಸುರಾಃ ಸಗೋಪಾಃ ॥೨೫॥**

ಆ ಹೃದಿಕನ ಮಗನೇ 'ಕೃತವರ್ಮ'ನು ಅವನಲ್ಲಿ ಶಂಖಾಭಿಮಾನಿ ಅನಿರುದ್ಧನ ಆವೇಶವಿದ್ದಿತು. ಪ್ರವಹ ಎಂಬ ವಾಯುವಿನ ಅಂಶವೂ ಇದ್ದಿತು. ಇವನೂ ಯಾದವ ಮನೆತನಕ್ಕೆ ಸೇರಿದ ಗೋಪಾಲಕನು. ಅನೇಕ ದೇವತೆಗಳು ಗೋಪಾಲಕರಾಗಿ ಅವತರಿಸಿದ್ದರು.

**ಯೇ ಪಾಂಡವಾನಾಮ ಭವನ್ ಸಹಾಯಾ**
**ದೇವಾಶ್ಚ ದೇವಾನುಚರಾಃ ಸಮಸ್ತಾಃ ।**
**ಅನ್ಯೇऽಪಿ (ತು) ಸರ್ವೇ ತ್ವ (ಪ್ಯ) ಸುರಾಹಿ ಮಾಧ್ಯಮಾ**
**ಯೇ ಮಾನುಷಾಸ್ತೇ ಚಲಬುದ್ಧಿ ವೃತ್ತಯಃ ॥೨೩೭॥**

ಪಾಂಡವರಿಗೆ ಸಹಾಯ ಮಾಡಿದವರೆಲ್ಲರೂ ದೇವತೆಗಳು ಮತ್ತು ಅವರಿಗೆ ಅನುಚರರಾದ ಗಂಧರ್ವರು. ಅವರಿಗೆ ಪ್ರತಿಕೂಲರೆಲ್ಲರು ಅಸುರರು. ಉದಾಸೀನರಾಗಿದ್ದವರೇ ಮಧ್ಯಮರಾದ ಮನುಷ್ಯರು.

**ಲಿಂಗಂ ಸುರಾಣಾಂ ಹಿ ಪರೈವ ಭಕ್ತಿ**
**ರ್ವಿಷ್ಣೌ ತಥನ್ಯೇಷು ಚ ತತ್ಪ್ರತೀಪರಾ ।**
**ಅತೋऽತ್ರಯೇ ಯೇ ಹರಿಭಕ್ತಿ ತತ್ಪರಾಸ್ತೇ**
**ತೇ ಸುರಾಸ್ತದ್ಧರಿತಾ ವಿಶೇಷತಃ ॥೨೩೭॥**

ವಿಷ್ಣುವಿನಲ್ಲಿ ಪರಮ ಭಕ್ತಿ ಮಾಡುವವರೆಲ್ಲರೂ ದೇವತೆಗಳೇ. ಆತನ ಭಕ್ತರಲ್ಲೂ ಪ್ರೀತಿಸುವವರು ದೇವತೆಗಳೇ. ವಿಷ್ಣುವಿನಲ್ಲಿ ಭಕ್ತಿಯಿಲ್ಲದವರು, ಆತನ ಭಕ್ತರನ್ನು ದ್ವೇಷಿಸುವವರು ಅಸುರರು.

'ಲಿಂಗಂ' ಎಂದರೆ ಲಕ್ಷಣ. ಇದರಲ್ಲಿ ದೇವ, ದಾನವರ ಲಕ್ಷಣಗಳನ್ನು ಸೂಚಿಸಲಾಗಿದೆ.

ಕುರು-ಪಾಂಡವರ, ಮತ್ತು ಅವರ ಸೈನಿಕರ ವರ್ಗೀಕರಣವು ಇದರಲ್ಲಿ ಅಡಗಿದೆ.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ**
**ಭಗವದವತಾರ ಪ್ರತಿಜ್ಞಾನಾಮ ಏಕಾದಶೋऽಧ್ಯಾಯಃ ।**

ಇಲ್ಲಿಗೆ

ಶ್ರೀಮದಾಚಾರ್ಯರಿಂದ ರಚಿತವಾದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಶ್ರೀಕೃಷ್ಣಚರಿತೆ ಅಂಶಾವರಣ ಎಂಬ ಹನ್ನೊಂದನೆಯ ಅಧ್ಯಾಯ ಮುಗಿದುದು.

ಇದನ್ನು ಶಾಂಡಿಲ್ಯಗೋತ್ರೋತ್ಪನ್ನರಾದ ಶ್ರೀ ಹನುಮಂತರಾಯರ ಸುತ ರಾಘವೇಂದ್ರ ಶರ್ಮ ಕನ್ನಡಕ್ಕೆ ಅನುವಾದಿಸಿ ಶ್ರೀಹರಿಯ ಚರಣಾರವಿಂದದಲ್ಲಿ ಅರ್ಪಿಸಿದರು. ಇದನ್ನು ಶ್ರೀಹರಿ ಸ್ವೀಕರಿಸಿ ಅನುಗ್ರಹಿಸಲೆಂದು ಪ್ರಾರ್ಥನೆ.

---0---

## ಓಂ

## ೧೧ನೆಯ ಅಧ್ಯಾಯದ ವಿಶಿಷ್ಟ ವಿಚಾರ

ಶ್ರೀಮದಾಚಾರ್ಯರು ೧೧ನೆಯ ಅಧ್ಯಾಯದ ಪ್ರಾರಂಭದಲ್ಲಿ ಸೂರ್ಯ ಮತ್ತು ಚಂದ್ರ ವಂಶದವರ ಮನೆತನಗಳ ಪೀಠಿಕೆಯನ್ನು ನೀಡುತ್ತ ಸೂರ್ಯವಂಶ ರಾಮಾಯಣಕ್ಕೆ ಮೀಸಲಾಯಿತು. ಚಂದ್ರವಂಶದಿಂದ ಮಹಾಭಾರತ ಖ್ಯಾತಿಯನ್ನು ಪಡೆಯಿತು ಎಂಬ ನಿರ್ದಿಷ್ಟವಾದ ದಿಕ್ಕನ್ನು ತೋರಿದ್ದಾರೆ. ಇದರಿಂದ ಸೂರ್ಯ ಚಂದ್ರರು ನಮ್ಮ ಜ್ಞಾನ ಚಕ್ಷುಗಳು ಅಂತೆಯೇ ರಾಮಾಯಣ, ಮಹಾಭಾರತಗಳು ಕೂಡ.

ಈ ಅಧ್ಯಾಯದ ಸುಮಾರು ೧೨೮ ಶ್ಲೋಕಗಳವರೆಗೆ ಕುರುವಂಶದ ಚರಿತ್ರೆಯನ್ನು ವಿವರಿಸುತ್ತ ಕೌರವ ಪಾಂಡವರ ಬಾಲ್ಯದವರೆಗೆ ತಂದು ನಿಲ್ಲಿಸಿದ್ದಾರೆ. ಇಲ್ಲಿ ಶ್ರೀಮದಾಚಾರ್ಯರು ಕೇವಲ ಚರಿತ್ರೆಯನ್ನು ಹೇಳಿಲ್ಲ. ಅದು ಅವರ ಉದ್ದೇಶವೂ ಅಲ್ಲ.

ಇದರಲ್ಲಿ ಬಂದ ವ್ಯಕ್ತಿಗಳು ಯಾರು? ಅವರ ಮೂಲ ಏನು? ಏತಕ್ಕಾಗಿ ಇಲ್ಲಿಗೆ ಬಂದರು? ಹೇಗೆ ಬಂದರು? ಮುಂತಾದ ಅನೇಕ ವಿಷಯಗಳ ಪೂರ್ವಾಪರಗಳನ್ನು ವಿವರಿಸಿದ್ದಾರೆ. ಉದಾಹರಣೆಗೆ ಭೀಷ್ಮರೇ ಇಲ್ಲಿ ಕೇಂದ್ರಬಿಂದುವಾಗಿದ್ದರೂ ವ್ಯಾಸರು ಚಾಲಕರು ಮತ್ತು ನಿರ್ದೇಶಕರಾಗಿದ್ದಾರೆ.

ಶಂತನು ಚಕ್ರವರ್ತಿ, ಗಂಗಾದೇವಿ, ಕೃಪಾಚಾರ್ಯ, ದ್ರೋಣಾಚಾರ್ಯ ಮೊದಲಾದವರ ಚರಿತ್ರೆಗಳೊಂದಿಗೆ ವ್ಯಕ್ತಿ ಬಾಳಬೇಕಾದ ಆದರ್ಶ, ರೀತಿ-ನೀತಿಗಳನ್ನು ಅಲ್ಲಲ್ಲಿ ವಿವರಿಸುತ್ತ ಮಾನವನಿಗೆ ಉತ್ತಮ ಮಾರ್ಗ ಯಾವುದು ಎಂಬುದನ್ನು ತೋರಿ ಯುಕ್ತ ಮಾರ್ಗದರ್ಶನ ಇತ್ತಿದ್ದಾರೆ.

ಶಿಖಂಡಿಯ ಚರಿತ್ರೆಯಿಂದ ನಾರಿ ಮುನಿದರೆ ಏನು ಮಾಡಬಲ್ಲಳು? ಅವಳ ಕ್ರೋಧಕ್ಕೆ ತುತ್ತಾದರೆ ಮಾನವನ ಗತಿ ಏನಾದೀತು? ಇವುಗಳಿಗೆ ಪ್ರತ್ಯಕ್ಷ ದೃಷ್ಟಾಂತಗಳಿಂದ ಸಾಕ್ಷೀಕರಿಸಿದ್ದಾರೆ.

ಪರಶುರಾಮನು ಬೇರೆಯಲ್ಲ. ಸಾಕ್ಷಾತ್ ನಾರಾಯಣನ ಅವತಾರ ಎಂದು ಕೆಲವು ಘಟನೆಗಳಿಂದ ಸ್ಥಿರೀಕರಿಸಿದ್ದಾರೆ.

ವ್ಯಾಸರು ಸಾಮಾನ್ಯರಲ್ಲ. ಜ್ಞಾನ ಕಾರ್ಯಕ್ಕಾಗಿಯೇ ಅವತರಿಸಿದ ನಾರಾಯಣ ಎಂದು ಹಿಂದಿನ ಅಧ್ಯಾಯದಲ್ಲಿ ವಿವರಿಸಿ, ಮಹಾಭಾರತವು ಆತನ ವ್ಯಕ್ತಿತ್ವವನ್ನು ಯಾವ ಔನ್ನತ್ಯಕ್ಕೆ ಏರಿಸಿದೆ ಎಂಬುದನ್ನು ತೋರಿಸಿ, ಧೃತರಾಷ್ಟ್ರ, ಪಾಂಡು ಮತ್ತು ವಿದುರರ ಜನನದ ಮೂಲಕ ಪರಮಾತ್ಮನ ಅಘಟನಾಶಕ್ತಿ, ಅಚಿಂತ್ಯ ಸಾಮರ್ಥ್ಯವನ್ನು ವ್ಯಕ್ತಪಡಿಸಿದ್ದಾರೆ.

ಭವಿಷ್ಯವನ್ನು ಸೂಚಿಸಿದರೋ ಎಂಬಂತೆ ತಾಯಿಯನ್ನು ಪಾಂಡು ಮತ್ತು ಆತನ ಪತ್ನಿಯರನ್ನು ಕರೆದುಕೊಂಡು ಬದರಿಕಾಶ್ರಮದತ್ತ ಸಾಗಿದ್ದಾರೆ.

ವಿದುರನ ಚರಿತ್ರೆಯಲ್ಲಿ ಆಚಾರ್ಯರು, ಧರ್ಮದ ತಳಹದಿ, ಸಿದ್ಧಾಂತಗಳ ಹಿನ್ನೆಲೆ, ಆದರ್ಶ ನೀತಿ ಮುಂತಾದ ಅನೇಕ ವಿಷಯಗಳನ್ನು ಸಂಗ್ರಹಿಸಿ ಒಂದೆಡೆ ಸೇರಿದ್ದಾರೆ.

ದುರ್ವಾಸರು ಕುಂತಿಗಿತ್ತ ವರವೇ ಮಹಾಭಾರತದ ಚಾಲನೆಗೆ ನಾಂದಿಯಾಯಿತು. ಮುಂದೆ ಕಿಂದಮಋುಷಿಗಳ ಶಾಪದಿಂದ ಆ ಗತಿ ತ್ವರಿತಗೊಂಡಿತು ಎಂಬುದನ್ನು ಓದುಗರಿಗೆ ಸೂಚ್ಯವಾಗಿ ತೋರಿಸಿಕೊಟ್ಟಿದ್ದಾರೆ.

ಕೃಷ್ಣಾವತಾರದ ಹಿನ್ನೆಲೆಯಲ್ಲಿ ಭೂದೇವಿಯ ದಾರುಣ ಸ್ಥಿತಿ, ಅಧರ್ಮದ ಚೆಲ್ಲಾಟ, ದೈತ್ಯರಾದಿ ದುಷ್ಟರ ಉಪಟಳ ಇತ್ಯಾದಿಗಳನ್ನು ವಿವರಿಸುತ್ತ ಅಂಗಭೂತವಾಗಿ ಹುಟ್ಟಿರುವ ಸುರಾಸುರರ ಪಟ್ಟಿಯನ್ನೇ ಕೊಟ್ಟಿದ್ದಾರೆ. ಅವುಗಳನ್ನು ಅರಿತಾಗ ಆಯಾ ವ್ಯಕ್ತಿಗಳ ಆಚಾರ-ವಿಚಾರ, ನಡೆ-ನುಡಿ, ಗುರಿ ಇವುಗಳ ಬಗೆಗೆ ಒಂದು ನಿಶ್ಚಿತವಾದ ಕಲ್ಪನೆ ಬರಲು ಸಾಧ್ಯವಿದೆ.

ಅಂಗಭೂತ ದೇವತೆಗಳು ಪರಮಾತ್ಮನ ಕಾರ್ಯದಲ್ಲಿ ಸೇವೆ ಸಲ್ಲಿಸಿ, ಕೃತಾರ್ಥರಾಗಿ ಧರ್ಮ ಸ್ಥಾಪನೆಯ ಕಾರ್ಯದಲ್ಲಿ ಸಹಕರಿಸಿದ್ದಾರೆ.

ಅಂಗಭೂತವಾಗಿ ಬಂದ ಅಸುರರು, ಹರಿವೈರದಿಂದ ತಮ್ಮ ಕುಕರ್ಮಗಳಿಂದ ಪಾಪದ ಕೊಡವನ್ನು ತುಂಬುವಂತೆ ಮಾಡಿ ತಾವೂ ನಾಶವಾಗಿದ್ದಾರೆ, ಜೊತೆಯಲ್ಲಿ ಅಧರ್ಮದ ನಾಶಕ್ಕೂ ಕಾರಣರಾಗಿದ್ದಾರೆ. ಪರೋಕ್ಷವಾಗಿ ಅವತಾರದ ಉದ್ದೇಶವನ್ನು ಪೂರ್ಣಗೊಳಿಸಿದ್ದಾರೆ.

ಅವರವರ ಕಾರ್ಯಗಳನ್ನು ವಿವರಿಸುವಾಗ ಶ್ರೀಮದಾಚಾರ್ಯರು ದ್ವೈತ ಸಿದ್ಧಾಂತದ ಮುಖ್ಯ ತತ್ವಗಳಾದ ತಾರತಮ್ಯ, ಪಂಚಭೇದ, ಜೀವತ್ರೈವಿಧ್ಯ

ಮತ್ತು ಜೀವದ್ವಯ ಸಿದ್ಧಾಂತ ಇತ್ಯಾದಿಗಳನ್ನು ಸೂಚಿಸಿ, ಓದುಗರ ಮೇಲೆ ಪರಿಣಾಮ ಬೀರಿದ್ದಾರೆ. ಇದು ಆಚಾರ್ಯರ ಬರವಣಿಗೆಯ ವೈಶಿಷ್ಟ್ಯ.

ಕೊನೆಯಲ್ಲಿ "ಪರಮಾತ್ಮನು ತಾನು ಸರ್ವತಂತ್ರಸ್ವತಂತ್ರನಾದರೂ ಭಕ್ತಾಧೀನನು ಎಂಬುದನ್ನು ತಿಳಿಸಲು ಭಕ್ತರು ಹೇಳಿದಲ್ಲಿ, ಹೇಳಿದ ಹಾಗೆ ಅವತರಿಸಲೂ ಸಿದ್ಧನಾಗಿದ್ದಾನೆ" ಎಂಬುದನ್ನು ಆಚಾರ್ಯರು ಈ ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ.

----0----

ಓಂ

## ದೇವಕೀನಂದನಾಯ ನಮಃ

## ಅಧ್ಯಾಯ ಹನ್ನೆರಡು

ಹನ್ನೊಂದನೆಯ ಅಧ್ಯಾಯದ ಕೊನೆಯ ಭಾಗದಲ್ಲಿ ಶ್ರೀಮದಾಚಾರ್ಯರು ಬ್ರಹ್ಮನ ಮುಖದಿಂದ ಶ್ರೀಕೃಷ್ಣನು ಎಲ್ಲಿ ಅವತರಿಸಬೇಕು? ಯಾರಲ್ಲಿ ಅವತರಿಸಬೇಕು? ಮತ್ತು ಏಕೆ? ಎಂಬ ಅನೇಕ ವಿಷಯಗಳನ್ನು ವಿವರಿಸಿದ್ದಾರೆ. ಅದೇ ಸಮಯದಲ್ಲಿ ಆಹುಕನಾರು? ದೇವಕನಾರು? ಉಗ್ರಸೇನನ ಮೂಲ ರೂಪವೇನು? ಇವುಗಳನ್ನು ತೋರಿಸಿದ್ದಾರೆ. ಕೊನೆಯಲ್ಲಿ ವಸುದೇವನ ಮೂಲರೂಪವೇನು? ಭೂಲೋಕಕ್ಕೆ ಬರಲು ಕಾರಣಗಳೇನು? ಎಂಬದನ್ನು ಸ್ಪಷ್ಟೀಕರಿಸಿ ಈ ಅಧ್ಯಾಯದಲ್ಲಿ ಶ್ರೀಕೃಷ್ಣನ ಅವತಾರದ ಪೂರ್ವದಲ್ಲಿಯ ಪರಿಸರವನ್ನು ಪರಿಚಯಿಸುತ್ತಿದ್ದಾರೆ.

ಹರಿಃ ಓಂ।

ಬಭೂವ ಗಂಧರ್ವಮುನಿಸ್ತು ದೇವಕಃ

ಸ ಆಸ ಸೇವಾರ್ಥಮಥಾಹುಕಾದ್ಧರೇಃ।

ಸ ಉಗ್ರಸೇನಾವರಜಸ್ತಥೈವ

ನಾಮಾಸ್ಯ ತಸ್ಮಾದಜನಿಷ್ಟ ದೇವಕೀ ॥೧॥

ಪೂರ್ವದಲ್ಲಿ ಆಹುಕ ಒಬ್ಬ ಗಂಧರ್ವ ಆತನು ಶ್ರೀಹರಿಯ ಸೇವಾರ್ಥವಾಗಿಯೇ ಭೂಲೋಕದಲ್ಲಿ ಹುಟ್ಟಿಬಂದಿದ್ದಾನೆ. ಅವನ ಮಗನೇ ದೇವಕನು ಯಾದವ ಮನೆತನದವನು ಉಗ್ರಸೇನನೂ ಒಬ್ಬ ಗಂಧರ್ವನೆ. ಅವನು ಅದೇ ಹೆಸರಿನಿಂದಲೇ ಭೂಲೋಕದಲ್ಲಿ ಅವತರಿಸಿದ್ದಾನೆ. ದೇವಕನು ಉಗ್ರಸೇನನ ತಮ್ಮನು. ದೇವಕನ ಹೊಟ್ಟೆಯಲ್ಲಿಯೇ ದೇವಕಿ ಜನಿಸಿದಳು.

ಅನ್ಯಾಶ್ಚ ಯಾಃ ಕ(ಕಾ)ಶ್ಯಪ ಸ್ಯೈವ ಭಾರ್ಯಾ

ಜ್ಯೇಷ್ಠಾಂ ತು ತಾಮಾಹುಕ ಆತ್ಮಪುತ್ರೀಮ್।

**ಚಕಾರ ತಸ್ಮಾದ್ಧಿ ಪಿತೃಷ್ವಸಾ ಸಾ**

**ಸ್ವಸಾ ಚ ಕಂಸಸ್ಯ ಬಭೂವ ದೇವಕೀ ॥೨॥**

ದೇವಕಿ ಮೂಲದಲ್ಲಿ ಕಾಶ್ಯಪರ ಹೆಂಡಂದಿರಲ್ಲಿ ಹಿರಿಯಳು. ದೇವಕನ ಮಗಳಾಗಿ ಹುಟ್ಟಿದ್ದಾಳೆ. ಅವಳನ್ನೇ ಆಹುಕನು ತನ್ನ ಮಗಳನ್ನಾಗಿ ಮಾಡಿಕೊಂಡಿದ್ದಾನೆ. ದೇವಕಿಯು, ಕಂಸನಿಗೆ ತಂದೆಯ ಕಡೆಯಿಂದ ನೋಡಿದಾಗ ತಂಗಿಯಾಗಬೇಕು. ತಂದೆಯ ತಂಗಿ ಎನ್ನುವ ದೃಷ್ಟಿಯಿಂದ ಸೋದರತ್ತೆಯೂ ಅಹುದು. (ಈ ರೀತಿ ಎರಡು ಸಂಬಂಧಗಳು)

**ಸೈವಾದಿತಿರ್ವಸುದೇವಸ್ಯ ದತ್ತಾ**

**ತಸ್ಯಾ ರಥಂ ಮಾಂಗಲಂ ಕಂಸ (ಮಾಂಗಲಕಂ ಸ) ಏವ ।**

**ಸಂಯಾಪಯಾಮಾಸ ತದಾ ಹಿ ವಾಯು**

**ರ್ಜಗಾದ ವಾಕ್ಯಂ ಗಗನಸ್ಥಿತೋऽಮುಮ್ ॥೩॥**

ಅದಿತೆಯೇ ಇಂದು ದೇವಕಿ. ಅವಳನ್ನೇ ವಸುದೇವನಿಗೆ ಮದುವೆ ಮಾಡಿಕೊಟ್ಟು ಆಗಿದೆ. ಆ ದಂಪತಿಗಳು ಕುಳಿತಿರುವ ರಥವನ್ನು ಈ ಮಂಗಲ ಪ್ರಸಂಗದಲ್ಲಿ ಕಂಸನೇ ಸಾರಥಿಯಾಗಿ ನಡೆಸುತ್ತಿದ್ದಾನೆ. ಅಂತಹ ಸಮಯದಲ್ಲಿ ಆಕಾಶದಲ್ಲಿದ್ದ ವಾಯು, ಅವನನ್ನು (ಕಂಸನನ್ನು) ಕುರಿತು ಹೀಗೆ ಹೇಳಿದನು.

ವಾಯುವು ಇಲ್ಲಿ ಏಕೆ ಹೀಗೆ ಹೇಳಬೇಕಾಗಿತ್ತು? ಅದಕ್ಕೆ ಕಾರಣ

**ವಿನಾಪರಾಧಾದ್ಧಿ(ನ್ನ) ತತೋ ಗರೀಯಸೋ**

**ನ ಮಾತುಲೋ ವಧ್ಯತಾಮೇತಿ ವಿಷ್ಣೋಃ ।**

**ಲೋಕಸ್ಯ ಧರ್ಮಾನನುವರ್ತತೋऽತಃ**

**ಪಿತ್ರೋರ್ವಿರೋಧಾರ್ಥ ಮುವಾಚ ವಾಯುಃ ॥೪॥**

"ಮಹತ್ತರ ಅಪರಾಧವಿಲ್ಲದೆ ಯಾರನ್ನೂ ಕೊಲ್ಲಬಾರದು" ಇದು ಲೋಕದ ಧರ್ಮ.

"ಸೋದರ ಮಾವನು ವಧೆಗೆ ಅರ್ಹನಲ್ಲ' ಇದೂ ಧರ್ಮವೇ,

'ತಂದೆ ತಾಯಿಗಳಿಗೆ ವೈರಿಯಾದವನನ್ನು ಸದೆ ಬಡಿಯಬೇಕು. ಇದು ಮಗನ ಕರ್ತವ್ಯ.

ಈ ಮೂರು ಮಾತುಗಳನ್ನು ಲಕ್ಷ್ಯದಲ್ಲಿಟ್ಟು, ಲೋಕಧರ್ಮಗಳನ್ನು ತೋರಿಸುವುದಕ್ಕಾಗಿ, ತನ್ನ ತಂದೆತಾಯಿಗಳಾದ ವಸುದೇವ-ದೇವಕಿಯರಲ್ಲಿ, ಕಂಸನಿಗೆ ದ್ವೇಷ ಹುಟ್ಟುವಂತೆ ಮಾಡುವುದಕ್ಕಾಗಿಯೇ ಶ್ರೀಕೃಷ್ಣನು ಆ ರೀತಿಯ ವ್ಯವಸ್ಥೆಯನ್ನು ಮಾಡಿದನು.

ಆಕಾಶ (ಅಶರೀರ) ವಾಣಿ ಏನಾಯಿತು? ಏಕೆ?

ಮೃತ್ಯುಸ್ತವಾಸ್ಯಾ ಭವಿಷ್ಯತಾಷ್ಟಮಃ ಸುತೋ
ಮೂಢೇತಿ ಚೋಕ್ತೋ ಜಗೃಹೇ ಕೃಪಾಣಮ್ ।
ಪುತ್ರಾನ್ ಸಮರ್ಪಾಸ್ಯ ಚ ಶೂರಸೂನುಃ
ವಿಮೋಚ್ಯತಾಂ ತತ್ಸಾಹಿತೋ ಗೃಹಂ ಯಯೌ ॥೫॥

"ಈ ದೇವಕಿಯ ಎಂಟನೇ ಮಗನೇ ನಿನಗೆ ಮೃತ್ಯುವಾಗಿ ಹುಟ್ಟುತ್ತಾನೆ. ಎಲೋ ಮೂಢ, ಎಚ್ಚರದಿಂದಿರು." ಇದನ್ನು ಕೇಳಿದ ಕಂಸನು ಕೂಡಲೇ ತನ್ನಲ್ಲಿದ್ದ ಕೃಪಾಣು (ಕಿರುಗತ್ತಿ) ತೆಗೆದು ಕೊಂಡು ದೇವಕಿಯನ್ನು ಕೊಲ್ಲಲು ಸಿದ್ಧನಾದನು. "ಈಕೆಯ ಮಕ್ಕಳನ್ನು ನಿನಗೆ ಅರ್ಪಿಸುತ್ತೇನೆ" ಎಂದು ಹೇಳಿ, ಆ ಶೂರಸೂನು ಆದ ವಸುದೇವನು ದೇವಕಿಯನ್ನು ಆ ಗಂಡಾಂತರದಿಂದ ಪಾರು ಮಾಡಿ ಆಕೆಯನ್ನು ಕೂಡಿಕೊಂಡು ತನ್ನ ಮನೆಗೆ ಬಂದನು.

ವಿ.ವಿ. (೧) ವಸುದೇವನ ಸಮಯ ಪ್ರಜ್ಞೆ. ಇದು ಮಾನವನಲ್ಲಿ ಇರಬೇಕಾದ ಅತಿ ಆವಶ್ಯಕ ಗುಣ. ಮಾನವನಿಗೆ ಗಂಡಾಂತರದಿಂದ ಪಾರು ಮಾಡಲು ಸಹಾಯಕಾರಿ.

೨. ಮೃತ್ಯುವಿನ ಹೆಸರು ಕೇಳಿದಾಕ್ಷಣವೇ ಎಂಥವನೂ ಭಯಭೀತನಾಗುತ್ತಾನೆ. ಅದನ್ನು ತಪ್ಪಿಸುವುದಕ್ಕಾಗಿ ಏನನ್ನೂ ಮಾಡಲು ಹೇಸುವುದಿಲ್ಲ. ಇದು ವ್ಯಕ್ತಿಯ ಸಹಜ ಗುಣ.

**ಷಟ್ ಕನ್ಯಕಾಶ್ಚಾವರಜಾ ಗೃಹೀತಾ–**
**ಸ್ತೇನೈವ ತಾಭಿಶ್ಚ ಮುಮೋದ ಶೂರಜಃ ।**
**ಬಾಹ್ಲೀಕ ಪುತ್ರೀ ಚ ಪುರಾಗೃಹೀತಾ**
**ಪುರಾಸ್ಯ ಭಾರ್ಯಾ ಸುರಭಿಸ್ತು ರೋಹಿಣೀ ॥೬॥**

ವಸುದೇವನು ದೇವಕಿಯ ಆರುಜನ ತಂಗಿಯರನ್ನೂ ಮದುವೆಯಾಗಿ ಸುಖದಿಂದ ಕಾಲಕಳೆಯುತ್ತಿದ್ದನು. ಅಲ್ಲದೆ ಬಾಹ್ಲೀಕ ರಾಜನ ಪುತ್ರಿ ರೋಹಿಣಿ, ಆವಳೊಂದಿಗೂ ಮದುವೆಯಾಗಿದೆ. ಆ ರೋಹಿಣಿಯೇ ಮೂಲದಲ್ಲಿ ಸುರಭಿ. ವಸುದೇವನ ನಿಯತ ಪತ್ನಿ.

**ಪೌರವೀ ರೋಹಿಣೀ ನಾಮ ಬಾಹ್ಲೀಕಸ್ಯಾತ್ಮಜಾऽಭವತ್।**
**ಜ್ಯೇಷ್ಠಾ ಪತ್ನೀ ಮಹಾರಾಜ ದಯಿತಾನಕ ದುಂದುಭೇಃ ॥**
**(ಹರಿವಂಶ)**

ಈ ಶ್ಲೋಕವು ಕೂಡ ಸುರಭಿಯೇ ರೋಹಿಣಿಯು, ಅವಳೇ ವಸುದೇವನ ಹೆಂಡತಿಯೂ ಅಹುದು. ಬಾಹ್ಲೀಕನ ಪುತ್ರಿಯೂ ಅಹುದು ಎಂಬುದನ್ನು ಪುಷ್ಟೀಕರಿಸುತ್ತದೆ.

**ರಾಜ್ಞಶ್ಚ ಕಾಶೀ ಪ್ರಭವಸ್ಯ ಕನ್ಯಕಾಂ**
**ಸ ಪುತ್ರಿಕಾ ಪುತ್ರಕಧರ್ಮತೋऽದತ್ ।**
**ಕನ್ಯಾಂ ತಥಾ ಕರವೀರೇಶ್ವರಸ್ಯ**
**ತೇ ನೈವ ಧರ್ಮೇಣ ದಿತಿಂ ದನುಂ ಪುರಾ ॥೭॥**

ಕಾಶೀ ರಾಜನ ಮಗಳು ದಿತಿ. 'ಪುತ್ರಿಕಾ ಪುತ್ರಕ' ನ್ಯಾಯದಿಂದ ಅವಳನ್ನು ವಸುದೇವನು ಮದುವೆ ಮಾಡಿಕೊಂಡನು. ಕರವೀರಪುರ (ಕೊಲ್ಹಾಪುರ) ರಾಜನ ಮಗಳು 'ದನು'. ಅವಳನ್ನೂ ವಸುದೇವನು ತನ್ನ ಧರ್ಮಪತ್ನಿಯನ್ನಾಗಿ ಸ್ವೀಕರಿಸಿದ್ದಾನೆ.

ದಿತಿ ಮತ್ತು ದನು ಇವರಿಬ್ಬರೂ ಮೂಲರೂಪದಲ್ಲಿ ವಸುದೇವನ ನಿಯತ ಪತ್ನಿಯರೇ.

'ಪುತ್ರಿಕಾಪುತ್ರಕ ನ್ಯಾಯ' ಇದು ಪರಸ್ಪರ ಒಪ್ಪಿದ ಪದ್ಧತಿ. ಒಬ್ಬ ರಾಜನಿಗೆ ಗಂಡು ಸಂತಾನವಿಲ್ಲದೆ, ಕನ್ಯೆ ಇದ್ದ ಪಕ್ಷದಲ್ಲಿ ಮದುವೆಯ ಕಾಲದಲ್ಲಿ ವರನೊಂದಿಗೆ ಈ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಗು, ನನಗೆ ಮಗನಾಗಬೇಕು ಎಂದು ಒಪ್ಪಂದ. ಇದು ಆಗಿನ ಕಾಲದಲ್ಲಿ ರೂಢಿಯಲ್ಲಿದ್ದ ಪದ್ಧತಿ.

**ಯೋ ಮನ್ಯತೇ ವಿಷ್ಣುರೇವಾಹ ಮಿತ್ಯಸೌ–**
**ಪಾಪೋ ವೇನಃ ಪೌಂಡ್ರಕೋ ವಾಸುದೇವಃ ।**
**ಜಾತಃ ಪುನಃ ಶೂರಜಾತ್ ಕಾಶಿಜಾಯಾಂ**
**ನಾನ್ಯೋ ಮತ್ತೋ ವಿಷ್ಣುರಸ್ತೀತಿ ವಾದೀ ॥೮॥**

ಹಿಂದೆ ಯಾವನು "ವಿಷ್ಣುವು ಇಲ್ಲ. ನಾನೇ ವಿಷ್ಣು" ಎಂದು ಹೇಳಿಕೊಳ್ಳುತ್ತಿದ್ದನೋ, ಅಂಥ ಪಾಪಿಷ್ಠನಾದ ವೇನನೇ ಇಂದು ಇಲ್ಲಿ ಕಾಶಿರಾಜನ ಮಗಳಾದ ದಿತಿಯಲ್ಲಿ ಪೌಂಡ್ರಕ ವಾಸುದೇವನಾಗಿ, ವಸುದೇವನಿಗೆ ಮಗನಾಗಿ ಹುಟ್ಟಿದ್ದಾನೆ. ಇಲ್ಲಿಯೂ ಕೂಡ, 'ವಿಷ್ಣು ಮತ್ತೊಬ್ಬನಲ್ಲ. ನಾನೇ ವಿಷ್ಣು' ಎಂದು ಅವನ ವಾದ.

ವಿ.ವಿ. "ಬೇವಿನ ಬೀಜಕ್ಕೆ ಬೆಲ್ಲದ ಕಟ್ಟೆಯನ್ನು ಕಟ್ಟಿ, ಹಾಲೆರೆದರೆ ಅದು ಸಿಹಿಯಾಗಬಹುದೇ?" ಎಂಬ ಮಾತನ್ನು ನೆನಪಿಗೆ ತರುತ್ತದೆ. ಒಳ್ಳೆಯ ಮನೆತನದಲ್ಲಿ ಹುಟ್ಟಿದರೂ, ಅವನು ಹಿಂದಿನ ಜನ್ಮದ ಗುಣವನ್ನು ಬಿಡಲಿಲ್ಲ. ಇದರಿಂದ ಜೀವನ ಯೋಗ್ಯತೆ ತಿಳಿಯುವುದು. 'ತಾಮಸ' ಜೀವಿಯು ಎಂದಿಗೂ 'ಸಾತ್ವಿಕನಾಗಲು' ಸಾಧ್ಯವಿಲ್ಲ ಎಂಬ ಮಾಧ್ವ ಸಿದ್ಧಾಂತವನ್ನು ಎತ್ತಿ ಹಿಡಿಯುತ್ತದೆ.

**ಧುಂಧುರ್ಹತೋ ಯೋ ಹರಿಣಾಮಧೋಃ ಸುತ**
**ಆಸೀತ್ ಸುತಾಯಾಂ ಕರವೀರೇಶ್ವರಸ್ಯ ।**
**ಸೃಗಾಲನಾಮಾ ವಸುದೇವೋಽಥ ದೇವಕೀ**
**ಮುದೂಹ್ಯ ಶೌರಿರ್ನ ಯಯಾವುಭೇ ತೇ ॥೯॥**

ಮಧು, ಒಬ್ಬ ದೈತ್ಯನು. ಅವನ ಮಗನೇ ಧುಂಧುವು. ಅವನನ್ನು ಶ್ರೀಹರಿಯು ಹಿಂದೆಯೇ ಕೊಂದಿದ್ದಾನೆ. ಕರವೀರೇಶನ ಮಗಳಾದ

ದನುವಿನಲ್ಲಿ ಇಂದು ಅವನೇ ಸೃಗಾಲವಾಸುದೇವನಾಗಿ ವಸುದೇವನ ಉದರದಲ್ಲಿ ಜನಿಸಿದ್ದಾನೆ. ಈ ಇಬ್ಬರ ಮಕ್ಕಳ ನಂತರ ವಸುದೇವನು ದೇವಕಿಯನ್ನು ಮದುವೆಯಾದನು. ಮೊದಲು ಇಬ್ಬರು ಹೆಂಡಂದಿರನ್ನು ಸೇರಲಿಲ್ಲ.

ಮೊದಲೇ ದುಷ್ಟರು. ತಾಯಿಯನ್ನು ಸೇರಲಿಲ್ಲವೆಂಬ ಕೋಪ ಬೇರೆ.

**ತತಸ್ತು ತೌ ವೃಷ್ಟಿ ಶತ್ರೂ ಬಭೂವತು**
**ರ್ಜ್ಯೇಷ್ಠೌ ಸುತಾ ಶೂರ ಸುತಸ್ಯ ನಿತ್ಯಮ್।**
**ಅನ್ಯಾಸು ಚ ಪ್ರಾಪ ಸುತಾನು ದಾರಾನ್**
**ದೇವಾವತಾರಾನ್ ವಸುದೇವೋಽಖಿಲಜ್ಞ: ॥೧೦॥**

ಈ ಕಾರಣದಿಂದ ಆ ವಸುದೇವನ ಇಬ್ಬರು ಜೇಷ್ಠ ಪುತ್ರರು, ಅಂದರೆ ಪೌಂಡ್ರಕ ಮತ್ತು ಸೃಗಾಲವಾಸುದೇವರು ಯಾದವರಿಗೆ ಸದಾ ವೈರಿಗಳಾಗಿಯೇ ಉಳಿದರು. ಎಲ್ಲವನ್ನೂ ಬಲ್ಲ ವಸುದೇವನು ಇತರ ಪತ್ನಿಯರಲ್ಲಿ ದೇವತಾವತಾರಿಗಳಾದ ಒಳ್ಳೆಯ ಮಕ್ಕಳನ್ನೇ ಪಡೆದನು.

**ಯೇಯೇ ಹಿದೇವಾ: ಪೃಥಿವೀಂ ಗತಾಸ್ತೇ**
**ಸರ್ವೇ ಶಿಷ್ಯಾ: ಸತ್ಯವತೀ ಸುತಸ್ಯ ।**
**ವಿಷ್ಣೋರ್ಜ್ಞಾನಂ ಪ್ರಾಪ್ಯ ಸರ್ವೇಣಽಖಿಲಜ್ಞಾ**
**ಸ್ತಸ್ಮಾದ್ಯಥಾ ಯೋಗ್ಯತಯಾ ಬಭೂವು: ॥೧೧॥**

ಯಾವ ಯಾವ ದೇವತೆಗಳು ಪೃಥ್ವಿಯಲ್ಲಿ ಅವತರಿಸಿದರೋ ಅವರೆಲ್ಲರೂ ಸತ್ಯವತಿಯ ಮಗನಾದ ವ್ಯಾಸಾವತಾರಿಯಾದ ಶ್ರೀಹರಿಯ ಶಿಷ್ಯರಾದರು. ಎಲ್ಲರು ತಮ್ಮ ತಮ್ಮ ಯೋಗ್ಯತಾನುಸಾರ ಶ್ರೀಹರಿಯ ಬಗೆಗೆ ಒಳ್ಳೆಯ ಜ್ಞಾನವನ್ನು ಸಂಪಾದಿಸಿದರು.

**ಮರೀಚಿಜಾ: ಷಣ್ಮುನಯೋ ಬಭೂವು**
**ಸ್ತೇ ದೇವಕಂ (ಲಂ) ಪ್ರಾಹಸನ್ ಕಾರ್ಶ್ಯಹೇತೋ: ।**
**ತಚ್ಛಾಪತ: ಕಾಲನೇಮಿಪ್ರಸೂತಾ**
**ಆವಧ್ಯತಾರ್ಥಂ ತಪ ಏವ ಚಕ್ರು: ॥೧೨॥**

ಮರೀಚಿ ಋಷಿಗಳ ಮಕ್ಕಳು ಆರುಜನ ಮುನಿಗಳಾಗಿಯೇ ಹುಟ್ಟಿದರು. (ಅವರಿಗೆ ತಾವು ಸುಂದರರು ಎಂಬ ಗರ್ವವಿತ್ತು) ಕೃಶನಾದ ದೇವಕರನ್ನು ಕಂಡು ಪರಿಹಾಸ್ಯ ಮಾಡಿದರು. ಆಗ ದೇವಕ ಋಷಿ, ನೀವೆಲ್ಲರೂ ದೈತ್ಯರಾಗಿರಿ ಎಂದು ಶಾಪಕೊಟ್ಟರು. ಆ ಶಾಪದ ಪರಿಣಾಮವಾಗಿ ಅವರೆಲ್ಲರೂ ಕಾಲನೇಮಿ ಎಂಬ ಸುರರಲ್ಲಿ ಹುಟ್ಟಿದರು. ಅವರೆಲ್ಲರೂ ಅವಧ್ಯರಾಗಬೇಕೆಂದು ತಪಸ್ಸು ಮಾಡಿದರು.

ದೊಡ್ಡವರಿಗೆ, ಸಜ್ಜನರಿಗೆ ಅಪಹಾಸ್ಯ ಮಾಡಿದರೆ ಎಷ್ಟು ಕೆಟ್ಟ ಪರಿಣಾಮ ಎಂಬುದು ಇದರಿಂದ ಗೊತ್ತಾಗುತ್ತದೆ. ಅಂತೆಯೇ 'ಪರನಿಂದೆ ಮಹಾಪಾಪ' ಎಂಬುದು ನಮ್ಮ ನಂಬಿಕೆ.

**ಧಾತಾ ಪ್ರಾದಾದ್ವರಮೇಷಾಂ ತಥೈವ**
**ಶಶಾಪ ತಾನ್ ಕ್ಷ್ಮಾತ್ರತೇ ಸಂಭವದ್ವಮ್।**
**ತತ್ರ ಸ್ವತಾತೋ ಭವತಾಂ ನಿಹಂತೇ**
**ತ್ಯಾತ್ಮಾನ್ಯತೋ ವರಲಿಪ್ಸೂನ್ ಹಿರಣ್ಯ: ॥೧೩॥**

ಬ್ರಹ್ಮನು ಅವರ ಇಚ್ಛೆಯಂತೆಯೇ ವರವನ್ನು ಕೊಟ್ಟನು. ಇತ್ತ ಹಿರಣ್ಯಕಶಿಪು ಇದನ್ನು ಕೇಳಿ ರೇಗಿ, "ನೀವೆಲ್ಲರು ಭೂಲೋಕದಲ್ಲಿ ಅವತರಿಸಿರಿ. ನಿಮ್ಮೆಲ್ಲರನ್ನು ನಿಮ್ಮ ತಂದೆಯೇ ಕೊಲ್ಲಲಿ" ಎಂದು ಶಾಪವಿತ್ತನು. ಈಗ ಅವರಿಗೆ ವರ ಮತ್ತು ಶಾಪ ಎರಡೂ ಅನುಭವಿಸಬೇಕಾಗಿದೆ.

"ಹಿರಣ್ಯ ಕಶಿಪು ಅವರಿಗೆ ಶಾಪ ಕೊಡಲು ಕಾರಣವೇನು? ಅವರು ಈತನನ್ನು ಕುರಿತು ತಪಸ್ಸೂ ಮಾಡಿರಲಿಲ್ಲ. ನಿಂದೆಯೂ ಮಾಡಿರಲಿಲ್ಲ" ಎಂಬ ಸಂಶಯಗಳಿಗೆ ಸಮಾಧಾನ.

**ಯಸ್ತ್ವಯಾ ಮಂದಭಾಗ್ಯೋ ಕ್ತೋ ಮದನ್ಯೋ ಜಗದೀಶ್ವರ: ।**
**ಕ್ವಾ ಸೌ ಯದಿ ಸ ಸರ್ವತ್ರ ಸ್ತಂಭೇ ಕಸ್ಮಾನ್ನದೃಶ್ಯತೇ ॥**

(ಭಾಗವತ)

ಯಾವನು, ನನ್ನ ಹೊರತು ಇನ್ನೊಬ್ಬ ದೇವರನ್ನು ನಂಬುವನೋ, ಅವನು ಮಂದಭಾಗ್ಯನೇ ಸರಿ. ಇದು ಹಿರಣ್ಯ ಕಶಿಪುವಿನ ನಂಬಿಕೆ. "ದೇವರು

ಸರ್ವತ್ರ ಇದ್ದುದ್ದಾದರೆ ಈ ಕಂಬದಲ್ಲಿ ಏಕೆ ಕಾಣುವುದಿಲ್ಲ'' ಇದು ಅವನ ಪ್ರಶ್ನೆ. ಈ ಮಟ್ಟಕ್ಕೆ ಬಂದ ಹಿರಣ್ಯ ಕಶಿಪು ದೇವರನ್ನೇ ದ್ವೇಷಿಸಿದ ಮೇಲೆ, ಬ್ರಹ್ಮನನ್ನು ಬಿಡುವನೇ?

ಬ್ರಹ್ಮನು 'ಸಾಯಬಾರದು' ಎಂದು ವರಕೊಟ್ಟಿದ್ದ. ಅದಕ್ಕಾಗಿ ಇವನು 'ಸಾಯಲಿ' ಎಂದು ಶಾಪಕೊಟ್ಟ. ಇದು ದೈತ್ಯರ ಸಹಜ ಸ್ವಭಾವ.

**ದುರ್ಗಾ ತದಾ ತಾನ್ ಭಗವತ್ಪ್ರಚೋದಿತಾ**
**ಪ್ರಸ್ವಾಪಯಿತ್ವಾ ಪ್ರಚಕರ್ಷ ಕಾಯಾತ್ ।**
**ಕ್ರಮಾತ್ಸಮಾವೇಶ ಯದಾಶು ದೇವಕೀ-**
**ಗರ್ಭಾಶಯೇ ತಾನ್ಸ್ಯಹನಚ್ಚ ಕಂಸಃ ॥೧೪॥**

ಆಗ ದುರ್ಗಾದೇವಿಯು ಭಗವಂತನಿಂದ ಪ್ರೇರೇಪಿಸಲ್ಪಟ್ಟವಳಾಗಿ ಅಸುರರ ದೇಹದಲ್ಲಿರತಕ್ಕ ಕಾಲನೇಮಿಯ ಪುತ್ರರನ್ನು ಅವರ ದೇಹದಿಂದ ಅಪಕರ್ಷಿಸಿ, ದೇವಕಿ ಗರ್ಭದಲ್ಲಿ ತಂದು ಸ್ಥಾಪಿಸಿದಳು. ಅವುಗಳನ್ನೇ ದೇವಕಿಯ ಮಕ್ಕಳೆಂದು ಭಾವಿಸಿ, ಕಾಲನೇಮಿಯ ಅವತಾರನಾದ ಕಂಸನು ಕೊಂದನು.

ವಿ.ವಿ. ಇಂದಿನ ವಿಜ್ಞಾನಯುಗದಲ್ಲಿ, ಮೇಲಿನ ವಿಷಯದ ಬಗೆಗೆ ಸಂಶಯವಷ್ಟೇ ಅಲ್ಲ, ವಿಶ್ವಾಸವೂ ಹುಟ್ಟಲಿಕ್ಕಿಲ್ಲ. ಅವರಿಗೆ ಈ ರೀತಿ ಸಮಾಧಾನ ಹೇಳಬಹುದು.

ಈ ವಿಜ್ಞಾನಯುಗದಲ್ಲಿ ಎಲ್ಲಿಯೋ ಆಡಿದ ನಾಟಕವನ್ನು ಇಲ್ಲಿ ನೋಡುತ್ತೇವೆ. ದೂರದಲ್ಲಿದ್ದವರ ಗಾನವನ್ನು ಕೇಳುತ್ತೇವೆ. ಅವರನ್ನು ಪ್ರತ್ಯಕ್ಷ ನೋಡುತ್ತೇವೆ. ಬಹುದೂರ ಇರುವವರೊಡನೆ ಮಾತನಾಡುತ್ತೇವೆ. ಇದಲ್ಲದೆ ಮಾನವನ ಶಕ್ತಿಗೆ ಮೀರಿದ ಅನೇಕ ಕಾರ್ಯಗಳನ್ನು ಇಂದು ವಿಜ್ಞಾನದ ಸಹಾಯದಿಂದ ಸಾಧಿಸಲಾಗಿದೆ. ಸಾಮಾನ್ಯ ಮಾನವನ ಬುದ್ಧಿಗೆ ನಿಲುಕದ ಅನೇಕ ಸಾಧನೆಗಳು ಇಂದು ವಿಜ್ಞಾನದ ಸಹಾಯದಿಂದ ಪೂರ್ತಿಗೊಂಡಿವೆ. ಇದು ಎಲ್ಲರ ಅನುಭವ.

ಮೇಲಿನ ಘಟನೆ, ಅಲ್ಪಮತಿಯಾದ ಮಾನವನಿಂದ ಆದುದಲ್ಲ. ಕಾರ್ಯ ಮಾಡಿದವಳು ದುರ್ಗಾದೇವಿ. ಆಕೆಗೆ 'ಮಾಯೆ' ಎಂದು ಕರೆಯುವುದೂ ಉಂಟು. ಮಾಯೆಗೆ ಯಾವ ಕಾರ್ಯ ಅಸಾಧ್ಯ? ದೇವರಲ್ಲಿ 'ಅದ್ಭುತ

ಶಕ್ತಿ' ಇದೆ ಎಂಬುದನ್ನು ನಂಬುವವರು ಭಾರತೀಯರು. ಅಂಥವರು ಆಚಾರ್ಯರು ಬರೆದಿರುವ ಮೇಲಿನ ಘಟನೆಯ ವಿವರಣೆಯ ಬಗೆಗೆ ಅಪನಂಬಿಕೆಗೆ ಕಾರಣವಿಲ್ಲ.

ಪಾಂಡವರ ಚರಿತ್ರೆ.

**ತದಾ ಮುನೀಂದ್ರ ಸಂಯುತಃ ಸದೋ ವಿಧಾತುರುತ್ತಮಮ್ ।**
**ಸ ಪಾಂಡು ರಾಪ್ತು ಮೈಚ್ಛತ ನ್ಯವಾರಯಂಶ್ಚ ತೇ ತದಾ ॥೧೫॥**

ಪಾಂಡುರಾಜನು ನಾರಾಯಣಾಶ್ರಮದಲ್ಲಿರುವಾಗ, ಒಂದು ದಿನ ಮುನೀಂದ್ರರ ಸಹಿತನಾಗಿ ಬ್ರಹ್ಮನನ್ನು ಕಾಣುವುದಕ್ಕಾಗಿ ಬ್ರಹ್ಮನ ಲೋಕಕ್ಕೆ ಹೋಗಲು ಇಚ್ಛಿಸಿದನು. ಆದರೆ ಮುನಿಗಳು ಅತನನ್ನು ತಡೆದರು. ಏಕೆ?

**ಯದರ್ಥಮೇಷ ಜಾಯತೇ ಪುಮಾನ್ ಹಿ ತಸ್ಯಸೋऽಕೃತೇ ।**
**ಶುಭಾಂ ಗತಿಂ ನ ತು ವ್ರಜೇದ್ಧ್ರುವಂ ತತೋऽನ್ಯವಾರಯನ್ ॥೧೬॥**

ಯಾವ ಕಾರ್ಯವನ್ನು ಮಾಡಲು ಮಾನವನನ್ನು ಭಗವಂತನು ಹುಟ್ಟಿಸಿದ್ದಾನೋ, ಅದನ್ನು ಆವನು ಮಾಡದಿದ್ದಲ್ಲಿ ಅವನಿಗೆ ಒಳ್ಳೆಯ ಗತಿ ದೊರೆಯುವುದಿಲ್ಲ. ಇದು ನಿಶ್ಚಯ. ಅಂತೆಯೇ ಅವರು ರಾಜನನ್ನು ತಡೆದರು.

ಪಾಂಡುರಾಜ ಹುಟ್ಟಿದ ಉದ್ದೇಶ.

**ಪ್ರಧಾನದೇವತಾಜನೌ ನಿಯೋಕ್ತು ಮಾತ್ಮನಃ ಪ್ರಿಯಾಮ್ ।**
**ಬಭೂವ ಪಾಂಡುರೇಷ ತದ್ವಿನಾ ನ ತಸ್ಯ ಸದ್ಗತಿಃ ॥೧೭॥**

'ಪ್ರಧಾನ ದೇವತೆಗಳು ಪಾಂಡುರಾಜನ ಮಕ್ಕಳಾಗಿ ಹುಟ್ಟಬೇಕು' ಇದು ಭಗವಂತನ ಸಂಕಲ್ಪ. ಅದರ ವಿನಃ ಆತನಿಗೆ ಸದ್ಗತಿ ಶಕ್ಯವಿಲ್ಲ. (ಅದಕ್ಕಾಗಿ ತಡೆದರು).

'ನಾ ಪುತ್ರಸ್ಯ ಲೋಕೋऽಸ್ತಿ (ಶ್ರುತಿ) ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲ. ಇದು ಶ್ರುತಿಯ ವಾಕ್ಯ ಅದಕ್ಕಾಗಿ ತಡೆದರೇ? ಶಂಕೆ. ಅದಕ್ಕೆ ಸಮಾಧಾನ.

**ಅತೋಽನ್ಯಥಾ ಸುತಾಸ್ಪತೇ ವ್ರಜಂತಿ ಸದ್ಗತಿಂ ನರಾ: ।**
**ಯಥೈವ ಧರ್ಮಭೂಷಣೋ ಜಗಾಮ ಸಂಧ್ಯಕಾಸುತ: ॥೧೮॥**

ಮಕ್ಕಳಿಲ್ಲದಿದ್ದರೂ ಮಾನವನು, ಬೇರೆ ಮಾರ್ಗಗಳಿಂದ ಸದ್ಗತಿಯನ್ನು ಪಡೆಯಬಹುದು. ಉದಾಹರಣೆಗೆ- ಸಂಧ್ಯಾವಳಿಯ ಮಗನಾದ ಧರ್ಮಭೂಷಣನು ಸದ್ಗತಿ ಪಡೆದಂತೆ.

ಧರ್ಮಭೂಷಣನ ಕಥೆ ಹೀಗಿದೆ. ಸಂಧ್ಯಾವಳಿಯ ರಾಜನು ರುಕ್ಮಾಂಗದನು. ಅವನು ಮಹಾಧರ್ಮಿಷ್ಠನು. ಏಕಾದಶಿ ವ್ರತದಲ್ಲಿ ಬಹಳ ನಿಷ್ಠೆಯುಳ್ಳವನು. ಅವನಂತೆ ಅವನ ಪತ್ನಿ ಮತ್ತು ಪುತ್ರನೂ ಕೂಡ. ಆತನ ಪರೀಕ್ಷೆಗಾಗಿಯೇ ಪರಮಾತ್ಮನು ರೂಪ ಮರೆಸಿ (ಬೇರೊಂದು ರೂಪದಲ್ಲಿ) ಬಂದು, "ಎಲೈ ರಾಜನೇ ನೀನು ಏಕಾದಶಿ ವ್ರತವನ್ನು ಬಿಡಬೇಕು. ಇಲ್ಲವೆ ನಿನ್ನ ಮಗ ಧರ್ಮಾಂಗದ ತಲೆಯನ್ನು ಕತ್ತರಿಸಿ ಕೊಡಬೇಕು." ಎಂದು ಕೇಳಿದಾಗ ರುಕ್ಮಾಂಗದನು ಏನೂ ತೋಚದೆ ಸುಮ್ಮನಿದ್ದನು. ಅದನ್ನು ಕಂಡು ಧರ್ಮಾಂಗದನು, ತಾನಾಗಿಯೇ ಮುಂದೆ ಬಂದು, "ವ್ರತವನ್ನು ಬಿಡಬೇಡಿ. ಧರ್ಮಪಾಲನೆಗೆ ನಾನು ನನ್ನ ಶಿರವನ್ನು ಕೊಡಲು ಸಿದ್ಧನಿದ್ದೇನೆ", ಎಂದು ಹೇಳಿದನು. ಅವರ ಭಕ್ತಿ-ಶ್ರದ್ಧೆಗಳನ್ನು ಅರಿತ ಪರಮಾತ್ಮನು, ತಂದೆ-ತಾಯಿ, ಮಗ ಮೂವರಿಗೂ ಸದ್ಗತಿಯನ್ನು ನೀಡಿದನು. ಇಂಥಾದ್ದು ಅತಿ ವಿರಳ. ಆದರೂ ಈ ಕಲಿಯುಗದಲ್ಲಿ ಮಕ್ಕಳಿಲ್ಲದಿದ್ದರೂ ಧರ್ಮದ ಕಾರ್ಯಗಳನ್ನು ವ್ರತ ನಿಯಮಗಳನ್ನು ಭಕ್ತಿಯಿಂದ ಮಾಡಿದರೆ ಭಗವಂತನ ಅನುಗ್ರಹದಿಂದ ಸದ್ಗತಿ ಸಾಧ್ಯವಿದೆ.

'ಅನ್ಯಥಾ' ಎಂದಲ್ಲಿ ಆಗಿನ ಕಾಲಕ್ಕೆ ತಕ್ಕಂತೆ ನಿಯೋಗ ಪದ್ಧತಿ. ಈಗಿನ ಕಾಲಕ್ಕೆ 'ದತ್ತಕ-ಪದ್ಧತಿ' ಎಂದು ಹೇಳಬಹುದು.

ವಿ.ವಿ. ಭಾಗವತದಲ್ಲಿ ವಿವರಿಸಿದಂತೆ ನವವಿಧ ಭಕ್ತಿಗಳಲ್ಲಿ 'ಆತ್ಮಾರ್ಪಣೆ' ಶ್ರೇಷ್ಠವಾದ ಭಕ್ತಿ. ಅದು ಪರಮಾತ್ಮನಿಗೆ ಬಹು ಪ್ರಿಯ. ಇಲ್ಲಿ ಧರ್ಮಾಂಗದನು ಆ ಶ್ರದ್ಧೆಯಿಂದ ತನ್ನ ದೇಹದ ಮೋಹವನ್ನು ಬಿಟ್ಟು ತನ್ನ ದೇಹವನ್ನು ಭಕ್ತಿಪೂರ್ವಕ ಭಗವಂತನಿಗೆ ಅರ್ಪಿಸಲು ಸಿದ್ಧನಾಗಿದ್ದಾನೆ.

**ತದಾ ಕಲಿಶ್ಚ ರಾಕ್ಷಸಾ ಬಭೂವುರಿಂದ್ರಜಿನ್ಮುಖಾ: ।**
**ವಿಚಿತ್ರ ವೀರ್ಯನಂದನ ಪ್ರಯೋದರೇ ಹಿ ಗರ್ಭಗಾ: ॥೧೯॥**

ಅದೇ ಕಾಲದಲ್ಲಿ ಕಲಿ, ಇಂದ್ರಜಿತು ಮೊದಲಾದ ರಾಕ್ಷಸರು, ವಿಚಿತ್ರವೀರ್ಯನ ಮಗನಾದ ಧೃತರಾಷ್ಟ್ರನ ಪತ್ನಿಯ ಗರ್ಭದಲ್ಲಿ ಪ್ರವೇಶಿಸಿದರು.

**ತದಾಸ್ಯ ಸೋಽನುಜೋಽಶೃಣೋನ್ಮುನೀಂದ್ರಭಾಷಿತಂ ಚತತೇ ।**
**ವಿಚಾರ್ಯ ಚ ಪ್ರಿಯಾಮಿದಂ ಜಗಾದ ವಾಸುದೇವಧೀಃ ॥೨೦॥**

ಆಗ ಆ ಪಾಂಡುರಾಜನು, ತನ್ನ ಸಹೋದರನ ಹೆಂಡತಿಯಾದ ಗಾಂಧಾರಿ ಗರ್ಭಿಣಿ ಎಂದು ಮುನಿಗಳ ಬಾಯಿಯಿಂದ ಕೇಳಿದನು. ಶ್ರೀಹರಿಯಲ್ಲಿ ಭಕ್ತಿಯುಳ್ಳ ಪಾಂಡುರಾಜ ಆಲೋಚಿಸಿ ತನ್ನ ಪ್ರಿಯಳಾದ ಕುಂತಿದೇವಿಯನ್ನು ಕರೆದನು.

**ಯ ಏವ ಮದ್ಗುಣಾಧಿಕಸ್ತತಃ ಸಮಾಪ್ನು ಹಿ ।**
**ಸುತಂ ವಿನಾ ನ ನೋಽಗತಿಂ ಶುಭಾಂ ವದಂತಿ ಸಾಧವಃ ॥೨೧॥**

ಯಾರು ನನಗಿಂತ ಗುಣಗಳಲ್ಲಿ ಅಧಿಕರಾಗಿರುವರೋ, ಆತನಿಂದ ನೀನು ಮಗನನ್ನು ಪಡೆ. ಏಕೆಂದರೆ ಮಕ್ಕಳಿಲ್ಲದವರಿಗೆ ಒಳ್ಳೆಯ ಗತಿಯಿಲ್ಲವೆಂದು ಜ್ಞಾನಿಗಳು ಹೇಳುತ್ತಾರೆ.

ವಿ.ವಿ. ಇಲ್ಲಿ ಪಾಂಡುರಾಜನ ಗುಣಗಳಲ್ಲಿ ನನಗಿಂತ ಅಧಿಕನಾದ ಎಂದು ಹೇಳುತ್ತಾನೆ. ಇದು ತಾರತಮ್ಯದ ಪ್ರಕಾರ ದೇವತೆಗಳಿಗೆ ಮಾತ್ರ ಸಾಧ್ಯ, ಎಂಬುದನ್ನು ಓದುಗರು ಗಮನಿಸಬೇಕು.

**ತದಸ್ಯ ಕೃಚ್ಛ್ರತೋ ವಚಃ ಪೃಥಾಗ್ರಹೀಜ್ಜಗಾದ ಚ ।**
**ಮಮಾಸ್ತಿ ದೇವವಶ್ಯದೋ ಮನೂತ್ತಮಾ ಸುತಾಪ್ತಿದಃ ॥೨೨॥**

ಪಾಂಡುರಾಜನ ಮಾತನ್ನು ಕುಂತಿಯು ಬಹು ಕಷ್ಟದಿಂದ (ದುಃಖ) ಕೇಳಿದಳು. "ನನ್ನ ಹತ್ತಿರ ದೇವತೆಯನ್ನು ವಶೀಕರಿಸಿ ಒಳ್ಳೆಯ ಉತ್ತಮ ಮಗನನ್ನು ಪಡೆಯುವ ಮಂತ್ರವಿದೆ" ಎಂದು ಹೇಳಿದಳು.

ವಿ.ವಿ. ಇಲ್ಲಿ ಕೃಚ್ಛ್ರಯಾ' ಎಂಬ ಪದವಿದೆ– 'ಕಷ್ಟದಿಂದ' ಎಂದರೆ ಪತಿಗೆ ಬಂದ ಶಾಪದ ನೆನಪು. ಪತಿಯಲ್ಲಿರುವ ಶ್ರದ್ಧೆ ಮತ್ತು ಪ್ರೀತಿ ಇವುಗಳಿಂದ ಕುಂತಿ ಧರ್ಮ ಸಂಕಟಕ್ಕೊಳಗಾಗಿದ್ದಳು. ಮುಂದೆನೋಡಿ.

**ನ ತೇ ಸುರಾನೃತೇ ಸಮಃ ಸುರೇಷುಕೇಚಿ ದೇವ ಚ ।**
**ಅತಸ್ತವಾಧಿಕಂ ಸುರಂ ಕಮಾಹ್ವಯೇ ತ್ವದಾಜ್ಞಯಾ ॥೨೩॥**

"ತಮಗಿಂತ ಹೆಚ್ಚಾದ ದೇವತೆ" ನನಗೆ ಮತ್ತೊಬ್ಬರಿಲ್ಲ. ಈಗ ತಮಗಿಂತ ಅಧಿಕನಾದ ದೇವ ಯಾರು ಎಂಬುದನ್ನು ಹೇಳಿ. ತಮ್ಮ ಆಜ್ಞೆಯಂತೆ ಆಹ್ವಾನಿಸುತ್ತೇನೆ ಎಂದು ಕುಂತಿ ನುಡಿದಳು.

ವಿ.ವಿ. 'ಪತಿಯೇ ಪರದೈವತ' ಎಂಬ ಮಾತು ಕುಂತಿಯಿಂದ ಸ್ಪಷ್ಟವಾಗುತ್ತದೆ. 'ಪತಿಯ ಆಜ್ಞೆಯಂತೆ ನಡೆಯುವುದು ನಾರಿಯ ಕರ್ತವ್ಯ' ಎಂಬ ವಿಚಾರವೂ ವ್ಯಕ್ತವಾಗುತ್ತದೆ.

**ವರಂ ಸಮಾಶ್ರಿತಾ ಪತಿಂ ವ್ರಜೇತ್ ಯಾ ತತೋಽಧಮಮ್ ।**
**ನ ಕಾಚಿದಸ್ತಿ ನಿಷ್ಕೃತಿರ್ನ ಭರ್ತೃಲೋಕಮಚ್ಛತಿ ॥೨೪॥**

ಉತ್ತಮ ಪತಿಯ ಆಶ್ರಯವಿದ್ದೂ, ಅಧಮನನ್ನು ಆಶ್ರಯಿಸಿದರೆ, "ಆ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ". ಆಕೆಯು ಪತಿಯೊಡನೆ ಎಂದೂ ಒಳ್ಳೆಯ ಗತಿಯನ್ನು ಪಡೆಯಲಾರಳು.

'ಆ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲ' ಎಂಬ ಮಾತಿನಲ್ಲಿ ಕುಂತಿಯು ಎಂತಹ ಪಾಪ ಭೀರು ಆಗಿದ್ದಳು ಎಂಬುದೂ ಸ್ಪಷ್ಟವಾಗುತ್ತದೆ.

**ಕೃತೇ ಪುರಾ ಸುರಾಸ್ತಥಾ ಸುರಾಂಗನಾಶ್ಚ ಕೇವಲಮ್ ।**
**ನಿಮಿತ್ತತೋಽಪಿ ತಾಃ ಕ್ವಚಿನ್ನ ತಾನ್ವಿಹಾಯ ರೇಮಿರೇ ॥೨೫॥**

ಹಿಂದೆ ಕೃತಯುಗದಲ್ಲಿ ದೇವತೆಗಳು ಕೆಲವೊಂದು ಕಾರಣಗಳಿಂದ ತಮಗಿಂತಲೂ ಅಧಮ ಸ್ತ್ರೀಯರನ್ನು ಕೂಡಿದ್ದುಂಟು. ಆದರೆ ದೇವತಾ ಸ್ತ್ರೀಯರು ಮಾತ್ರ ಯಾವ ಕಾರಣದಿಂದಲೂ ಅಂತಹ ಕಾರ್ಯ ಮಾಡಿಲ್ಲ.

ವಿ.ವಿ. 'ಅಧಮ ಸ್ತ್ರೀಯರು' ಎಂದಾಗ ನಿಯತ ಪತಿ ಪತ್ನಿತ್ವ ಇದೆ ಎಂಬುದನ್ನು ಮರೆಯಬಾರದು, ಆದರೂ ಕೆಲವು ದೇವತೆಗಳು ಆ ರೀತಿ ವರ್ತಿಸಿದ್ದಾರೆ. ಅದು ಅಪವಾದವೆಂದೇ ಹೇಳಬಹುದು. ಉಃ- ಇಂದ್ರ, ಚಂದ್ರ ಇತ್ಯಾದಿ. ಆದರೆ ಸ್ತ್ರೀಯರು ಮಾತ್ರ ಕಾಣುವುದಿಲ್ಲ.

ಅಂದಿನ ಸ್ತ್ರೀಯರ ಸ್ವಭಾವ.

**ಮನೋವಚಶ್ಶರೀರತೋ ಯತೋ ಹಿ ತಾ: ಪತಿವ್ರತಾ: ।**
**ಅನಾದಿ ಕಾಲತೋಽಭವಂಸ್ತತ: ಸಭರ್ತೃಕಾ: ಸದಾ ॥೨೬॥**

ಅನಾದಿ ಕಾಲದಿಂದಲೂ ಸ್ತ್ರೀಯರು ಕಾಯಾ, ವಾಚಾ, ಮನಸಾ ತ್ರಿಕರಣ ಪೂರ್ವಕವಾಗಿ ಪತಿಗಳ ಸೇವೆಯಲ್ಲಿ ತತ್ಪರರಾಗಿರುತ್ತಿದ್ದರು. ಸದಾ ಅವರ ಪತಿಗಳ ಜೊತೆಯಲ್ಲಿಯೇ ಇರುತ್ತಿದ್ದರು. ಅವರೇ 'ಪತಿವ್ರತೆಯರು'.

ಇದು ಶ್ರುತ್ಯಾದಿಗಳಿಂದಲೂ ವ್ಯಕ್ತವಾಗುತ್ತದೆ.

**ಸ್ವ ಭರ್ತೃಭಿರ್ವಿಮುಕ್ತಿಗಾ: ಸಹೈವ ತಾ ಭವಂತಿ ಹಿ ।**
**ಕೃತಾಂತಮಾಪ್ಯ ಚಾಪ್ಸರ: ಸ್ತ್ರೀಯೋ ಬಭೂವುರೂರ್ಜಿತಾ:॥೨೭॥**

ತಮ್ಮ ಪತಿಗಳ ಜೊತೆಯಲ್ಲಿಯೇ ಅಂದಿನ ಸ್ತ್ರೀಯರು ಮುಕ್ತಿಯನ್ನು ಪಡೆಯುತ್ತಿದ್ದರು.

ಪುರಾಣಗಳಲ್ಲಿ ರಂಭೆ, ಊರ್ವಶಿ ಮುಂತಾದ ಅಪ್ಸರೆ (ಸ್ತ್ರೀ)ಯರ ವಿಷಯಗಳು ಬರುತ್ತವಲ್ಲ ಎಂದು ಶಂಕಿಸಿದರೆ, ಅದಕ್ಕೆ ಆಚಾರ್ಯರು ಅದೇ ಶ್ಲೋಕದ ಎರಡನೇ ಸಾಲಿನಲ್ಲಿಯೆ 'ಕೃತಾಂತಂ' ಎಂದು ಉತ್ತರ ಇತ್ತಿದ್ದಾರೆ. ಅಂದರೆ ಕೃತಯುಗದ ನಂತರ ಅಪ್ಸರ ಸ್ತ್ರೀಯರು ಊರ್ಜಿತರಾದರು. ಇದರಿಂದ ಯುಗಧರ್ಮ ಬದಲಾಯಿತು ಎಂದು ವ್ಯಕ್ತವಾಗುತ್ತದೆ.

**ಅನಾವೃತಾಶ್ಚ ತಾಸ್ತಥಾ ಯಥೇಷ್ಟಭರ್ತೃಕಾ: ಸದಾ ।**
**ಅತಸ್ತು ತಾ ನ ಭರ್ತೃಭಿರ್ವಿಮುಕ್ತಿ ಮಾಪುರುತ್ತಮಾಮ್ ॥೨೮॥**

ಎಂದಿನಿಂದ ಅವರು ತಮ್ಮ ಪತಿವ್ರತಾ ಧರ್ಮವನ್ನು ಬಿಟ್ಟು ಇತರರಲ್ಲಿ ಯಥೇಷ್ಟವಾಗಿ ರಮಿಸಹತ್ತಿದರೋ, ಆಗ ಅವರು ತಮ್ಮ ಪತಿಗಳೊಂದಿಗೆ ಮುಕ್ತಿಗೆ ಹೋಗುವ ಮಾರ್ಗದಿಂದ ದೂರಾದರು.

**ಸುರಸ್ತ್ರೀಯೋಽತಿ ಕಾರಣೈರ್ಯದಾನ್ಯಥಾ ಸ್ಥಿತಾ: ಸದಾ ।**
**ದುರನ್ವಯಾ ಸುದುಸ್ಸಹಾ ವಿಪತ್ತತೋ ಭವಿಷ್ಯತಿ ॥೨೯॥**

ಸುರಸ್ತ್ರೀಯರಿಗೂ ಯಾವುದಾದರೂ ಮಹತ್ತರವಾದ ಕಾರಣವಿದ್ದರೆ ಆ ಮಾತು ಬೇರೆ. ದುರ್ನಡತೆ ಮತ್ತು ದುಸ್ಸಹ ಇವುಗಳಿಗೆ ಬಲಿಬಿದ್ದು ಮಾಡಿದರೆ ವಿಪತ್ತು ತಪ್ಪಿದ್ದಲ್ಲ.

**ಅಯುಕ್ತ ಮುಕ್ತವಾಂಸ್ತತೋ ಭವಾಂಸ್ತಥಾಪಿ ತೇ ವಚಃ**
**ಅಲಂಘ್ಯ ಮೇವ ಮೇ ತತೋ ವದಸ್ವ ಪುತ್ರದಂ ಸುರಮ್**
**॥೨೦॥**

"ತಾವು ಅಯುಕ್ತವಾದುದನ್ನೇ ಹೇಳುತ್ತಿರುವಿರಿ. ಆದರೂ ನಾನು ತಮ್ಮ ವಚನವನ್ನು ಮೀರುವಂತಿಲ್ಲ. ಕಾರಣ ತಾವು ಮಗನನ್ನು ಕೊಡತಕ್ಕ ದೇವತೆಯ ಹೆಸರನ್ನು ಹೇಳಿರಿ" ಎಂದು ಕುಂತಿ ಪ್ರಾರ್ಥಿಸಿದಳು.

ವಿ.ವಿ. ಶ್ರೀಮದಾಚಾರ್ಯರ ಈ ಗ್ರಂಥದಲ್ಲಿಯ ೨೧ ರಿಂದ 30 ಶ್ಲೋಕಗಳನ್ನು ನೋಡಿದಾಗ ಎಲ್ಲಿಯೂ 'ನಿಯೋಗ' ಎಂಬ ಶಬ್ದವೇ ಬಂದಿಲ್ಲ. ಪಾಂಡುರಾಜನು ಮುನಿಯ ಶಾಪದಿಂದ ಹೆದರಿ, ಮಕ್ಕಳ ಆಶೆಯಿಂದ ಕುಂತಿಯನ್ನು ಕರೆದು 'ನನಗಿಂತ ಅಧಿಕನಾದ ದೇವತೆಯನ್ನು ಕರೆ ಮಗುವನ್ನು ಪಡೆ' ಎಂದಿದ್ದಾನೆ. ಅಂದ ಮಾತ್ರಕ್ಕೆ 'ನಿಯೋಗ' ಎಂದೇ ಏಕೆ ವಿಚಾರಿಸಬೇಕು.

ದೇವತೆಗಳಿಂದ ಮಕ್ಕಳನ್ನು ಪಡೆಯಲು ಅನೇಕ ವಿಧಾನಗಳಿವೆ.

೧. ದೇವತೆಗಳು ಕೇವಲ ಸ್ಪರ್ಶದಿಂದ ಮಕ್ಕಳನ್ನು ಅನುಗ್ರಹಿಸಬಹುದು.

೨. ದೃಷ್ಟಿಯಿಂದ ಆಶೀರ್ವಾದದಿಂದ, ಯಜ್ಞದಲ್ಲಿ ಪ್ರತ್ಯಕ್ಷರಾಗಿ ಪ್ರಸಾದವನ್ನಿತ್ತು ಹೀಗೆ ಹಲವು ವಿಧಾನಗಳಿವೆ. ಅವುಗಳನ್ನು ಆಳವಾಗಿ ವಿಚಾರಿಸದೆ ಕೇವಲ ಯಾವುದೋ ಒಂದು ಪೂರ್ವಗ್ರಹ ಪೀಡಿತರಾಗಿ ಕುಂತಿಯಂತಹ ಮಹಾತಾಯಿಯನ್ನು ಟೀಕಿಸುವುದೆಂದರೆ ತಮ್ಮ ತಾಯಿಯನ್ನು ಟೀಕಿಸಿದಂತೆಯೇ ಸೈ. ಮೇಲಾಗಿ ಮೇಲಿನ ಶ್ಲೋಕಗಳಲ್ಲಿ ಕುಂತಿಯ ಪಾತಿವ್ರತ್ಯದ ವಿಚಾರ, ಆಕೆಯ ಮನದ ಆಳವಾದ ನೋವನ್ನು ಕಾಣುತ್ತೇವೆ. 'ನಿಯೋಗ' ಪದ್ಧತಿ ಆ ಕಾಲದಲ್ಲಿ ಇರಬಹುದು. ಆದರೆ ಈ ಸಂದರ್ಭದಲ್ಲಿ ಅದರ ಗಂಧವೂ ಕೂಡ ಸೂಸಲಾರದು.

ಲೇಖಕನದು ಒಂದು ವಿನಂತಿ. ಇಂದಿನ ಈ ಕಾಲದಲ್ಲಿ ಮಕ್ಕಳಿಲ್ಲದ ಅನೇಕ ಜನರು, ತಮ್ಮ ತಮ್ಮ ಧರ್ಮಗಳಿಗನುಗುಣವಾಗಿ, ತಮ್ಮ ತಮ್ಮ

ನಂಬಿಕೆಗಳಂತೆ ಅನೇಕ ಕ್ಷೇತ್ರಗಳಿಗೆ ಹೋಗುವುದುಂಟು. ಮಹಾಪುರುಷರ ಸೇವೆ ಮಾಡುವುದುಂಟು. ಭಕ್ತಿಯಿಂದ ಹರಕೆಗಳನ್ನು ಕೈಗೊಳ್ಳುವುದೂ ಉಂಟು. ಅವರ ಭಕ್ತಿ ಮತ್ತು ಕರ್ಮಪಕ್ವ ಇವುಗಳ ಫಲವಾಗಿ ಮಕ್ಕಳಾಗುವುದರಿಂದ ಅಷ್ಟೇ ಅಲ್ಲ ಆಯಾ ಕ್ಷೇತ್ರದೇವತೆಗಳ, ಆಯಾ ಮಹಾತ್ಮರ ಹೆಸರುಗಳನ್ನು ಮಕ್ಕಳಿಗೆ ಇಡುವುದೂ ಉಂಟು. ಇದಕ್ಕೆ ಟೀಕಾಕಾರರ ಉತ್ತರವೇನು?

ಯುಗಧರ್ಮ ಪರಿವರ್ತನೆಯ ವಿಚಾರ ಮೇಲೆಯೇ ಬಂದಿದೆ. ಕಲಿಯುಗದವರಾದ ನಾವು ದ್ವಾಪರ ಮತ್ತು ಕೃತಯುಗಗಳ ಧರ್ಮಗಳನ್ನು ಅರಿಯಬಲ್ಲೆವೇ? ಅವುಗಳನ್ನು ಕುರಿತು ವಿಮರ್ಶಿಸುವ ಅಥವಾ ಟೀಕಿಸುವ ಅಧಿಕಾರವಾದರೂ ನಮಗೆ ಇದೆಯೇ?

ಪ್ರಸ್ತುತ ಭಾರತದ ಸ್ಥಿತಿಗತಿಗಳನ್ನೇ ವಿಚಾರಿಸೋಣ. 1947ರ ಪೂರ್ವದ ಸಮಾಜವಾಗಲಿ, ಧರ್ಮವಾಗಲಿ, ಕಾನೂನಾಗಲಿ ಇಂದು ಭಾರತದಲ್ಲಿ ಉಳಿದಿಲ್ಲ. ಅಷ್ಟೇ ಏಕೆ. ರಾಜಕೀಯ ದೃಷ್ಟಿಯಿಂದ ಭಾರತದ ಸ್ವರೂಪವೇ ಬದಲಾಗಿದೆ. ಕಾಂಗ್ರೆಸ್ ಆಡಳಿತ ನಿಯಮಗಳು ಜನತಾ ಕಾಲಕ್ಕೆ ಇರಲಿಲ್ಲ. ರಾಷ್ಟ್ರೀಯ ರಂಗದ ಕಾಲದಲ್ಲಿ ಬಹಳಷ್ಟು ಮಾರ್ಪಾಟಾಯಿತು. ಮುಂದೇನಾಗುವುದೋ ತಿಳಿಯದು

ಕೇವಲ ನೂರು ವರ್ಷಗಳಲ್ಲಿ ಇಷ್ಟು ಬದಲಾವಣೆಗಳು ಆಗಿವೆ. ಅಂದ ಮೇಲೆ ಯುಗಯುಗಗಳ ಅಂತರದ ಪದ್ಧತಿಗಳನ್ನು ಟೀಕಿಸಿದರೆ ಹಾಸ್ಯಾಸ್ಪದವಾದೀತು. ಕಾರಣ ವಿಮರ್ಶಕರಾಗಲಿ, ಟೀಕಾಕಾರರಾಗಲಿ, ಅಂದಿನ ಪರಿಸರ, ಪರಿಸ್ಥಿತಿ, ಸಮಾಜ ಅದರ ರೀತಿ ರಿವಾಜುಗಳ ಬಗೆಗೆ ಆಳವಾಗಿ ಅಭ್ಯಸಿಸಲಿ. ತಮ್ಮ ಟೀಕೆಗೆ ಒಳಗಾಗುವ ವ್ಯಕ್ತಿಗಳ ಹೃದಯದಲ್ಲಿ ತಮ್ಮ ಹೃದಯವನ್ನು ಕೂಡಿಸಲಿ. ಅವರ ಕಣ್ಣಲ್ಲಿ ತಮ್ಮ ಕಣ್ಣನ್ನು ಸೇರಿಸಿ ನೋಡಲಿ. ನಂತರ ಟೀಕೆ ಅಥವಾ ವಿಮರ್ಶೆಗೆ ತೊಡಗಲಿ. ಅದು ವಸ್ತುನಿಷ್ಠವಾದೀತು. ಸರಿಯಾದ ಚಿತ್ರ ಕಣ್ಣಿಗೆ ಕಂಡೀತು.

**ಇತೀರಿತೋಽಬ್ರವೀನ್ನೃಪೋ ನಧರ್ಮತೋ ವಿನಾ ಭುವ: ।**
**ನೃಪೋಽಭಿರಕ್ಷಿತಾ ಭವೇತ್ತದಾಪ್ಸ್ವಯಾಶು ತಂವಿಭುಮ್ ॥೩೧॥**

ಕುಂತಿಯು ಈ ರೀತಿ ಹೇಳಿದ ಮೇಲೆ, ಧರ್ಮವನ್ನು ಚೆನ್ನಾಗಿ ತಿಳಿಯದಿದ್ದರೆ, ರಾಜನಾದವನು ಭೂಮಿಯನ್ನು ರಕ್ಷಿಸಲಾರನು. ಅದಕ್ಕಾಗಿ

"ಧರ್ಮಪರಾಯಣನಾದ ವಿಭುವನ್ನು ನೀನು ಕರೆ" ಎಂದು ಪಾಂಡುರಾಜನು ನುಡಿದನು.

**ಸ ಧರ್ಮಜಃ ಸುಧಾರ್ಮಿಕೋ ಭವೇದ್ಧಿ ಸೂನುರುತ್ತಮಃ ।**
**ಇತೀರಿತೇ ತಯಾ ಯಮಃ ಸಮಾಯತೋಽಗಮದ್ದ್ರುತಮ್ ॥೩೨॥**

ಧರ್ಮರಾಜನಾದರೆ, ಅವನು ಧಾರ್ಮಿಕನಾಗುತ್ತಾನೆ. ಅವನೇ ಉತ್ತಮ ಮಗನೂ ಆಹುದು. ಈ ರೀತಿಯ ಮಾತನ್ನು ಕೇಳಿದ ಕುಂತಿಯು ಯಮಧರ್ಮನನ್ನು ಭಕ್ತಿಯಿಂದ ಪ್ರಾರ್ಥಿಸಿದಳು. ಕೂಡಲೇ ಯಮನು ಪ್ರತ್ಯಕ್ಷನಾದನು.

**ಸಂವತ್ಸರೇ ಧೃತೇ ಗರ್ಭೇ ಗಾಂಧಾರ್ಯಾಜನಮೇಜಯ ।**
**ಅಹ್ವಯಾಮಾಸ ವೈಕುಂತೀ ಗರ್ಭಾರ್ಥೇ ಧರ್ಮಮಚ್ಯುತಮ್॥**

(ಆದಿಪರ್ವ)

ಈ ಶ್ಲೋಕದ ಮೇಲಿಂದ ಗಾಂಧಾರಿಯು ಗರ್ಭಧರಿಸಿದ ಒಂದು ಸಂವತ್ಸರದ ನಂತರ ಕುಂತಿಯು ತನ್ನ ಗರ್ಭಧಾರಣೆಗಾಗಿ ಯಮಧರ್ಮನನ್ನು ಪ್ರಾರ್ಥಿಸಿದಳು ಎಂದು ತಿಳಿಯುತ್ತದೆ.

**ತತಶ್ಚ(ಸ್ತು) ಸದ್ಯ ಏವ ಸಾ ಸಷಾವ ಪುತ್ರಮುತ್ತ ಮಮ್ ।**
**ಯುಧಿಷ್ಠಿರಂ ಯಮೋ ಹಿ ಸ ಪ್ರವೇಶ ಆತ್ಮ ಪುತ್ರತಾಮ್ ॥೩೩॥**

ಆ ಕ್ಷಣದಲ್ಲಿ ಕುಂತಿಗೆ ಯಮನೇ ಉತ್ತಮ ಮಗನಾಗಿ ಹುಟ್ಟಿದ್ದಾನೆ. ಅವನೇ ಯುಧಿಷ್ಟರನು. ಆ ಯಮನು ತಾನೇ ಮಗನಾಗಿ ಪ್ರವೇಶ ಮಾಡಿದ್ದಾನೆ.

**ಯಮೋ ಸುತೇತು ಕುಂತಿತಃ ಪ್ರಜಾತ ಏವ ಸೌಬಲೇ ।**
**ಅದಹ್ಯತೇರ್ಷ್ಯಯಾ ಚಿರಂ ಬಭಂಜ ಗರ್ಭಮೇವ ಚ ॥೩೪॥**

ಯಮನೇ ಮಗನಾಗಿ ಕುಂತಿಗೆ ಹುಟ್ಟಿದ್ದಾನೆ. ಅವನು ಬಲಶಾಲಿಯೂ ಅಹುದು. ಈ ಮಾತನ್ನು ಕೇಳಿದ ಗಾಂಧಾರಿಯು, ಹೊಟ್ಟೆಯ ಕಿಚ್ಚೆಂಬ ಬೆಂಕಿಯಿಂದ ಬೆಂದವಳಾಗಿ ತನ್ನ ಗರ್ಭವನ್ನು ತಾನೇ ಚಚ್ಚಿಕೊಂಡಳು.

ಏಕೆ ಈ ಹೊಟ್ಟೆ ಕಿಚ್ಚು? ತಾನು ಮೊದಲು ಗರ್ಭಿಣಿಯಾದರೂ ತನಗೆ ಮಕ್ಕಳಾಗಲಿಲ್ಲ. ಕುಂತಿಗೆ ನನಗಿಂತಲೂ ಮೊದಲೇ ಮಕ್ಕಳು ಆದವಲ್ಲ! ಇಂತಹ ಸ್ವಭಾವ ಕೆಲವು ದುಷ್ಟ ಸ್ತ್ರೀಯರಲ್ಲಿರುವುದು ಸ್ವಾಭಾವಿಕ. ಆದರೆ ಗಾಂಧಾರಿ ದುಷ್ಟ ಸ್ತ್ರೀಯಲ್ಲ. ಮಹಾಸಾಧ್ವಿ, ಪತಿವ್ರತಾಶಿರೋಮಣಿ. ಅಂದಮೇಲೆ ಅವಳಿಗೆ ಈ ಕೆಟ್ಟಬುದ್ಧಿ ಎಲ್ಲಿಂದ ಬಂದಿತು? ಅದಕ್ಕೆ ಉತ್ತರವಾಗಿಯೇ ಆಚಾರ್ಯರು 'ಕಲಿ' ಎಂಬ ಪದವನ್ನು ಬಳಸಿದ್ದಾರೆ. ಕಲಿಯು ಇನ್ನು ಹುಟ್ಟೇಯಿಲ್ಲ. ಕೇವಲ ಅಂಕುರದಲ್ಲಿಯೇ ತನ್ನ ಪ್ರಭಾವ 'ಹೊಟ್ಟೇ ಕಿಚ್ಚೆಂಬ ದುರ್ಗುಣವನ್ನು' ಬೀರಿದ್ದಾನೆ ಎಂಬುದನ್ನು ವಾಚಕರು ಗಮನಿಸಬಹುದು.

**ಸ್ವಗರ್ಭಪಾತನೇ ಕೃತೇ ತಯಾ ಜಗಾಮ ಕೇಶವ: ।**
**ಪರಾಶರಾತ್ಮಜೋ ನ್ಯಧಾದ್ಘಟೇಷು ತಾನ್ವಿಭಾಗಶ: ॥೩೫॥**

ಗಾಂಧಾರಿಯು, ತನ್ನ ಗರ್ಭಪಾತವನ್ನು ತಾನೇ ಮಾಡಿಕೊಂಡಿದ್ದಾಳೆ ಎಂದು ಕೇಶವನಿಗೆ ತಿಳಿಯಿತು. ಕೇಶವನ ಅವತಾರರಾದ ಪರಾಶರಾತ್ಮಜ ವ್ಯಾಸರು ಅಲ್ಲಿಗೆ ಬಂದರು. ಅನೇಕ ಚೂರುಗಳನ್ನು ಮಾಡಿ ಅದನ್ನು ಗಡಿಗೆ (ಘಟ)ದಲ್ಲಿ ತುಂಬಿದರು.

**ಅಂಗುಷ್ಟ ಪರ್ವಮಾತ್ರಾಣಾಂ ಭಾಗಾನಾಂ ಪೃಥಗೇವ ತು ।**
**ಏಕಾಧಿಕಂ ಶತಂ ಚೂರ್ಣಂ ಯಥಾಯೋಗ ವಿಶೇಷತ: ॥**

(ಆದಿಪರ್ವ)

ಮೇಲಿನ ಶ್ಲೋಕದಿಂದ ವ್ಯಾಸರು, ಆ ಗರ್ಭವನ್ನು ೧೦೧ ಚೂರುಗಳನ್ನಾಗಿ ಮಾಡಿದರು ಎಂದು ವ್ಯಕ್ತವಾಗುತ್ತದೆ.

**ಶತಾತ್ಮನಾ ವಿಭೇದಿತಾ: ಶತಂ ಸುಯೋಧನಾದಯ: ।**
**ಬಭೂವುರನ್ವಹಂ ತತ: ಶತೋತ್ತರಾ ಚ ದುಶ್ಶಲಾ ॥೩೬॥**

ಆ ನೂರು ಭಾಗಗಳಿಂದ ಸುಯೋಧನ (ದುರ್ಯೋಧನ)ನೇ ಮೊದಲಾದ ನೂರು ಜನ ಅಣ್ಣ ತಮ್ಮಂದಿರು ಹುಟ್ಟಿಕೊಂಡರು. ನಂತರ ನೂರಾ ಒಂದನೆಯ ಭಾಗದಿಂದ 'ದುಶ್ಶಲೆ' ಎಂಬ ಕನ್ಯೆಯು ಹುಟ್ಟಿದಳು.

ವಿ.ವಿ. ಧೃತರಾಷ್ಟ್ರನ ಹಿರಿಯ ಮಗನನ್ನು ಎಲ್ಲರು 'ದುರ್ಯೋಧನ' ಎಂದು ಕರೆದರೂ ಧರ್ಮರಾಜನು ಮಾತ್ರ 'ಸುಯೋಧನ' ಎಂದೇ ಕರೆಯುತ್ತಿದ್ದನು. ಇದರಿಂದ ಧರ್ಮನ ಸಂಸ್ಕೃತಿ ವ್ಯಕ್ತವಾಗುತ್ತದೆ. ಅದೇ ಪದವನ್ನೇ ಆಚಾರ್ಯ ಮಧ್ವರು ಇಲ್ಲಿ ಬಳಸಿದ್ದಾರೆ.

**ಸ ದೇವಕಾರ್ಯ ಸಿದ್ಧಯೇ ರರಕ್ಷ ಗರ್ಭಮೀಶ್ವರಃ ।**
**ಪರಾಶರಾತ್ಮಜೋ ವಿಭು ರ್ವಿಚಿತ್ರವೀರ್ಯಜೋದ್ಭವಮ್ ॥೩೭॥**

ಪರಮಾತ್ಮನ ಕಾರ್ಯವನ್ನು ಸಿದ್ಧಿಸುವುದಕ್ಕಾಗಿ, ಪ್ರಭುವಾದ ಪರಾಶರಾತ್ಮಜರು ವಿಚಿತ್ರವೀರ್ಯ ವಂಶದ ಆ ಗರ್ಭವನ್ನು ರಕ್ಷಿಸಿದರು. (ಇಲ್ಲದಿದ್ದಲ್ಲಿ ಧರ್ಮ ಸಂಸ್ಥಾಪನೆಯ ಶ್ರೀಕೃಷ್ಣನ ಅವತಾರದ ಕಾರ್ಯ ಸಿದ್ಧಿಸುತ್ತಿರಲಿಲ್ಲ).

**ಕಲಿಃ ಸುಯೋಧನೋಽಜನಿ ಪ್ರಭೂತ ಬಾಹುವೀರ್ಯಯುಕ್ ।**
**ಪ್ರಧಾನ ವಾಯುಸನ್ನಿಧೇರ್ಬಲಾಧಿಕತ್ವಮಸ್ಯ ತತ್ ॥೩೮॥**

ಕಲಿಯೇ ಸುಯೋಧನನಾಗಿ ಜನಿಸಿದ್ದಾನೆ. ಅವನು ಮಹಾ ಪರಾಕ್ರಮಿಯೂ ಅಹುದು. ಅಲ್ಲದೆ ಆತನಲ್ಲಿ ಪ್ರಧಾನವಾಯುವಿನ ಸನ್ನಿಧಾನವಿರುವುದರಿಂದ ಅಧಿಕ ಬಲಶಾಲಿಯೂ ಆಗಿದ್ದಾನೆ.

ಈ ಬಲಕ್ಕೆ ಮತ್ತೊಂದು ಕಾರಣವೂ ಉಂಟು.

**ಪುರಾ ಹಿ ಮೇರುಮೂರ್ಧನಿ ತ್ರಿವಿಷ್ಟ ಪೌಕಸಾಂ ವಚಃ ।**
**ವಸುಂಧರಾತಲೋದ್ಭವೋನ್ಮುಖಂ ಶ್ರುತಃ ದಿತೇಃ ಸುತೈಃ ॥೩೯॥**

"ಭೂಲೋಕದಲ್ಲಿ ಹುಟ್ಟಬೇಕಾದರೆ, ಮೇರುಪರ್ವತದ ಮೇಲ್ಭಾಗದಲ್ಲಿ ಹುಟ್ಟಬೇಕು". ಈ ಮಾತನ್ನು ಸ್ವರ್ಗದಲ್ಲಿರುವ ದೇವತೆಗಳಿಂದ ದೈತ್ಯರು ಮೊದಲೇ ಕೇಳಿದವರಾಗಿದ್ದರು.

**ತತಸ್ತು ತೇ ತ್ರಿಲೋಚನಂ ತಪೋ ಬಲಾದ ತೋಷಯನ್ ।**
**ವೃತಶ್ಚ ದೇವಕಂಟಕೋ ಹ್ಯವಧ್ಯ ಏವ ಸರ್ವತಃ ॥೪೦॥**

ಅಲ್ಲಿ ಆ ದೈತ್ಯರು ಬಂದು ಮುಕ್ಕಣ್ಣನಾದ ರುದ್ರದೇವರನ್ನು ಕುರಿತು ತಪಸ್ಸು ಮಾಡಿ ಸಂತೋಷಪಡಿಸಲು ವ್ರತ ಕೈಗೊಂಡರು. 'ಕಲಿಯು ಯಾರಿಂದಲೂ ಸಾಯದಿರಲಿ' ಎಂದು ವರವನ್ನು ಪಡೆದರು.

ವಿ.ವಿ. ಮೇರು ಪರ್ವತದ ಮೇಲ್ಭಾಗವು ಇಂದಿಗೂ ದೇವತೆಗಳ ಬೀಡು ಎನಿಸಿಕೊಳ್ಳುತ್ತದೆ. ಕಲಿಯು ದೈತ್ಯರ ಮುಂದಾಳು. ಕಾರಣ ಎಲ್ಲರೂ ತಮ್ಮ ಮುಂದಾಳಿನ ಯಶಸ್ಸಿಗಾಗಿ ಪ್ರಾರ್ಥಿಸಿಕೊಂಡರು.

**ವರಾದುಮಾಪತೇಸ್ತತಃ ಕಲಿಃ ಸ ದೇವಕಂಟಕಃ ।**
**ಬಭೂವ ವಜ್ರಕಾಯಯುಕ್ಸುಯೋಧನೋ ಮಹಾಬಲಃ ॥೪೧॥**

ದೇವಕಂಟಕನಾದ ಆ ಕಲಿಯು, ಉಮಾಪತಿಯ ವರದ ಪ್ರಯುಕ್ತ ಮಹಾಬಲಶಾಲಿಯಾಗಿ ವಜ್ರಕಾಯಕ್ಕೆ ಸಮನಾದ ಗಟ್ಟಿದೇಹವನ್ನು ಪಡೆದನು.

**ಅವಧ್ಯ ಏವಸರ್ವತಃ ಸುಯೋಧನೇ ಸಮುತ್ಥಿತೇ ।**
**ಘೃತಾಭಿಪೂರ್ಣಕುಂಭತಃ ಸ ಇಂದ್ರಜಿತ್ ಸಮುತ್ಥಿತಃ ॥೪೨॥**

ಎಲ್ಲರಿಂದಲೂ ಅವಧ್ಯನಾದ ಆ ಸುಯೋಧನನು ಘೃತಘಟದಿಂದ ಹೊರಬಂದ ನಂತರ, ಮತ್ತೊಂದು ತುಪ್ಪದ ಕೊಡದಿಂದ ಅಂದಿನ ಇಂದ್ರಜಿತುವೇ ಇಂದು ಮತ್ತೆ ಹೊರಬಂದನು.

**ಸ ದುಃಖಶಾಸನೋಽಭವತ್ತತೋಽತಿಕಾಯ ಸಂಭವಃ ।**
**ಸ ವೈ ವಿಕರ್ಣ ಉಚ್ಯತೇ ತತಃ ಖರೋಽಭವದ್ಬಲೀ ॥೪೩॥**

ಆ ಇಂದ್ರಜಿತುವೇ ದುಃಖದ ಶಾಸನಕ್ಕೆ ಕಾರಣನಾದವನು. (ಅವನನ್ನೇ ಜನರು ದುಶ್ಶಾಸನ ಎಂದು ಕರೆದರು). ಆಮೇಲೆ ಅತಿಕಾಯನು ಹುಟ್ಟಿದನು. ಅವನೇ ವಿಕರ್ಣನು. ಆನಂತರ ಖರಾಸುರನ ಜನ್ಮವಾಯಿತು. ಅವನು ಮಹಾಬಲಶಾಲಿ.

**ಸ ಚಿತ್ರಸೇನನಾಮಕಸ್ತಥಾಪರೇ ಚ ರಾಕ್ಷಸಾಃ ।**
**ಬಭೂವುರುಗ್ರ ಪೌರುಷಾ ವಿಚಿತ್ರವೀರ್ಯಜಾತ್ಮಜಾಃ ॥೪೪॥**

ಆ ಖರಾಸುರನೇ ಚಿತ್ರಸೇನನು. ನಂತರ ಅನೇಕ ರಾಕ್ಷಸರು ಮಹಾಪರಾಕ್ರಮಿಗಳಾಗಿ ಧೃತರಾಷ್ಟ್ರನಲ್ಲಿ ಮಕ್ಕಳಾಗಿ ಜನ್ಮತಾಳಿದರು.

**ಸಮಸ್ತ ದೋಷರೂಪಿಣಃ ಶರೀರಿಣೋ ಹಿ ತೇऽಭವತ್ ।**
**ಮೃಷೇತಿ ನಾಮಕೋ ಹಿ ಯಾ ಭಭೂವ ದುಶ್ಶಲಾಸುರೀ ॥೪೫॥**
**ಕುಹು ಪ್ರವೇಶ ಸಂಯುತಾ ಯ ಯಾರ್ಜುನೇರ್ವಧಾಯ ಹಿ ।**
**ತಪಃ ಕೃತಂ ತ್ರಿಶೂಲಿನೇ ತತೋ ಹಿ ಸಾತ್ರ ಜಜ್ಞುಷೀ ॥೪೬॥**

ಸಕಲ ದೋಷಗಳೇ ಶರೀರಗಳನ್ನು ಧರಿಸಿ ಆ ಮಕ್ಕಳ ರೂಪದಲ್ಲಿ ಹುಟ್ಟಿದ್ದವು. ಸುಳ್ಳಿನ ಹೆಸರೇ ಆ ದುಶ್ಶಲೆಯಾಗಿದ್ದಳು. ಕಳಾಹೀನ ಚಂದ್ರನಂತೆ ಕಾಣುತ್ತಿದ್ದಳು. ಅರ್ಜುನನ ಮಗನನ್ನು ಕೊಲ್ಲುವುದಕ್ಕಾಗಿ ಅವಳು ತ್ರಿಶೂಲಿಯನ್ನು ಕುರಿತು ತಪಸ್ಸು ಮಾಡುತ್ತಿದ್ದಳು. ಅವಳೇ ಇಲ್ಲಿ ಹುಟ್ಟಿಬಂದಿದ್ದಾಳೆ.

ಅರ್ಜುನನ ಮಗನನ್ನು ಕೊಂದವನು ಸೈಂಧವನಲ್ಲವೇ? ಅದಕ್ಕೂ ದುಶ್ಶಲೆಗೂ ಏನು ಸಂಬಂಧ? ಎಂಬ ಪ್ರಶ್ನೆಗೆ ಉತ್ತರ–

**ತಯೋದಿತೋ ಹಿ ಸೈಂಧವೋ ಬಭೂವ ಕಾರಣಂ ವಧೇ ।**
**ಸ ಕಾಲಕೇಯದಾನವಸ್ತದರ್ಥಮಾಸ ಭೂತಲೇ ॥೪೭॥**

ಇವಳ ಪ್ರಚೋದನೆಯಿಂದಲೇ ಸೈಂಧವನು, ಅಭಿಮನ್ಯುವಿನ ವಧಕ್ಕೆ ಕಾರಣನಾದನು. ಅವನು ಕಾಲಕೇಯ ಎಂಬ ದಾನವನು. ಅವನು ಅಭಿಮನ್ಯುವನ್ನು ವಧಿಸಲೆಂದೇ ಭೂಮಿಯಲ್ಲಿ ಹುಟ್ಟಿದ್ದನು.

**ತಥಾ ಸ ನಿರ್ಯತಾಭಿಧೋऽನುಜಃ ಸ ಮಿರ್ಯತೇರಭೂತ್ ।**
**ಸ ನಾಸಿಕಾ ಮರುದ್ಯುತೋ ಯುಯುತ್ಸುನಾಮಕಃ ಕೃತೀ ॥೪೮॥**

ನೈಋತ್ಯ ದಿಗಾಭಿಮಾನಿಯ ತಮ್ಮನೇ ನಿಋತ. ಅವನು ನಾಸಿಕಾಭಿಮಾನಿಯಾದ ಮರುತನಿಂದ ಕೂಡಿದ್ದಾನೆ. ಅವನೇ ಯುಯುತ್ಸು. ಅವನು ಸತ್ಕರ್ಮಗಳಲ್ಲಿ ತೊಡಗಿದವನು.

ಆ ಯುಯುತ್ಸು ಯಾರು?

**ಸ ಚಾಂಬಿಕೇಯ ವೀರ್ಯಜ: ಸುಯೋಧನಾದನಂತರ: ।**
**ಬಭೂವ ವೈಶ್ಯ ಕನ್ಯಕೋದರೋದ್ಭವೋ ಹರಿಪ್ರಿಯ: ॥೪೯॥**

ಆ ಯುಯುತ್ಸು, ಅಂಬಿಕೆಯ ಪತಿಯ ವೀರ್ಯದಿಂದಲೇ ಸುಯೋಧನನ ನಂತರ ವೈಶ್ಯ ಕನ್ಯೆ ಉದರದಲ್ಲಿ ಹುಟ್ಟಿದವನು. ಅವನು ಶ್ರೀಹರಿಗೆ ಪ್ರಿಯನಾಗಿದ್ದನು.

ವಾಯುವಿನ ಅವತಾರದ ಪೀಠಿಕೆ..

**ಯುಧಿಷ್ಠಿರೇ ಜಾತ ಉವಾಚ ಪಾಂಡು**
**ರ್ಬಾಹ್ವೋರ್ಬಲಾಜ್ಞಾನಬಲಾಚ್ಚ ಧರ್ಮ: ।**
**ರಕ್ಷ್ಯೋSನ್ಯಥಾ ನಾಶಮುಪೈತಿ ತಸ್ಮಾತ್**
**ಬಲದ್ವಯಾಢ್ಯಂ ಜನಯಾಶು ಪುತ್ರಮ್ ॥೫೦॥**

ಧರ್ಮರಾಜನು ಹುಟ್ಟಿದ ನಂತರ, ಪಾಂಡುವು ಕುಂತಿಯನ್ನು ಕುರಿತು, "ಬಾಹುಬಲ ಮತ್ತು ಜ್ಞಾನಬಲ ಇವುಗಳಿಂದ ಧರ್ಮದ ರಕ್ಷಣೆ ಆಗುತ್ತದೆ. ಇವಿಲ್ಲದಾಗ ಧರ್ಮದ ನಾಶವು ಖಂಡಿತ. ಕಾರಣ ನೀನು ಧರ್ಮಬಲ ಮತ್ತು ಜ್ಞಾನಬಲ ಎರಡರಿಂದ ಕೂಡಿದ ಉತ್ತಮನಾದ ಮಗನನ್ನು ಪಡೆ" ಎಂದು ಹೇಳಿದಳು.

**ಯಜ್ಞಾಧಿಕೋ ಹ್ಯಶ್ವಮೇಧೋ ಮನಷ್ಯ**
**ದೃಶ್ಯೇಷು ತೇಜಸ್ವಧಿಕೋ ಹಿ ಭಾಸ್ಕರ: ।**
**ವರ್ಣೇಷು ವಿಪ್ರ: ಸಕಲೈರ್ಗುಣೈರ್ವರೋ**
**ದೇವೇಷು ವಾಯು: ಪುರುಷೋತ್ತಮಾದೃತೇ ॥೫೧॥**

ಮಾನವರಿಗೆ ತಿಳಿದಂತೆ ಯಜ್ಞಗಳಲ್ಲಿ ಅಶ್ವಮೇಧ, ತೇಜಸ್ಸಿನಲ್ಲಿ ಸೂರ್ಯ, ವರ್ಣಗಳಲ್ಲಿ ವಿಪ್ರ, ಇವು ಶ್ರೇಷ್ಠ. ಅದರಂತೆ ಪರಮಾತ್ಮನ ನಂತರ ವಾಯುವು ಸಕಲ ದೇವತೆಗಳಲ್ಲಿ, ಸಕಲ ಗುಣಗಳಿಂದ ಶ್ರೇಷ್ಠನಾಗಿದ್ದಾನೆ.

ಇಲ್ಲಿ ಪರಮಾತ್ಮನೇ ಏಕೆ ಬೇಡ? ಎಂಬುದಕ್ಕೆ ಉತ್ತರ-

**ವಿಶೇಷತೋಽಸ್ಯೇಷ ಪಿತೈವ ಮೇಽಪ್ರಭು**
**ರ್ವ್ಯಾಸಾತ್ಮನಾ ವಿಷ್ಣುರನಂತ ಪೌರುಷಃ ।**
**ಅತಶ್ಚ ತೇ ಶ್ವಶುರೋ ನೈವ ಯೋಗ್ಯೋ**
**ದಾತುಂ ಪುತ್ರಂ ವಾಯುವುಪ್ಯೈಹಿ ತಂ ಪ್ರಭುಮ್ ॥೫೨॥**

"ಆ ಪ್ರಭುವಾದ ಪರಮಾತ್ಮನು ನನಗೆ ವಿಶೇಷವಾದ ತಂದೆಯ ಸ್ಥಾನದಲ್ಲಿದ್ದಾನೆ. ಆತನೇ ಅನಂತ ಪೌರುಷದಿಂದ ಕೂಡಿದ ವಿಷ್ಣುವು. ಇಂದು ವ್ಯಾಸಾವತಾರದಲ್ಲಿದ್ದಾನೆ. ಆತನು ನಿನಗೆ ಮಾವನಾಗಬೇಕು. ಆತನು ಮಕ್ಕಳನ್ನು ಕೊಡಲು ಯೋಗ್ಯನಾಗಲಾರ. ಕಾರಣ ನೀನು ಸರ್ವೋತ್ತಮನಾದ ವಾಯುದೇವರನ್ನೇ ಪ್ರಾರ್ಥಿಸು" ಎಂದು ಹೇಳಿದನು.

**ಇತೀರಿತೇ ಪೃಥಯಾಹೂತ ವಾಯು-**
**ಸಂಸ್ಪರ್ಶ ಮಾತ್ರಾದಭವದ್ಬಲದ್ವಯೀ ।**
**ಸಮೋ ಜಗತ್ಯಸ್ತಿ ನ ಯಶ್ಚ ಕಶ್ಚಿತ್**
**ಭಕ್ತ್ಯಾಚ ವಿಷ್ಣೋರ್ಭಗವದ್ವಶಃ ಸುತಃ ॥೫೩॥**

ಈ ರೀತಿ ಕೇಳಿದ ಕುಂತಿಯು ಕೂಡಲೇ ವಾಯುದೇವರನ್ನು ಪ್ರಾರ್ಥಿಸಿದಳು. ವಾಯುವಿನ ಸಂಸ್ಪರ್ಶ ಮಾತ್ರದಿಂದ, ಜ್ಞಾನಬಲ ಮತ್ತು ಬಾಹುಬಲ ಎರಡರಲ್ಲೂ ಜಗತ್ತಿನಲ್ಲಿ ವಿರಳನಾದ ಮಗನು ಹುಟ್ಟಿದನು. ವಿಷ್ಣು ಭಕ್ತಿಯಲ್ಲೂ ಆತನಿಗೆ ಸಮನಾದವರು ಯಾರೂ ಇರಲಿಲ್ಲ. ತನ್ನ ಭಕ್ತಿಯಿಂದ ಆತನು ಪರಮಾತ್ಮನನ್ನೇ ವಶೀಕರಿಸಿಕೊಂಡಿದ್ದಾನೆ.

**ಸಂತಿ ದೇವನಿಕಾಯಾಶ್ಚ ಸಂಸ್ಪರ್ಶಾಜ್ಜನಯಂತೆ ಯೇ ।**
**ವಾಚಾ ದೃಷ್ಟ್ಯಾ ತಥಾ ಸ್ಪರ್ಶಾತ್ ಸಂಘರ್ಷೇಣೇತಿಪಂಚಧಾ ॥**

ದೇವತೆಗಳಲ್ಲಿ ಕೆಲವರಿಗೆ ಕೇವಲ ಸ್ಪರ್ಶ, ವಾಚಾ, ದೃಷ್ಟ್ಯಾ, ಸಂಸ್ಪರ್ಶ ಮಾತ್ರದಿಂದ ಮಕ್ಕಳನ್ನು ಕೊಡುವ ಶಕ್ತಿಯುಂಟು. ಸಂಘರ್ಷ–ಸಾಧಾರಣ ಇದು ಎಲ್ಲರಿಗೂ ಅನ್ವಯಿಸುವುದು. (ಮಕ್ಕಳ ಉತ್ಪತ್ತಿಗೆ ಕಾರಣಗಳು ಐದು)

**ಸ ವಾಯುರೇವಾಭವದತ್ರ ಭೀಮ**
**ನಾಮಾ ಭೃತಾಮಾಃ ಸಕಲಾ ಹಿ ಯಸ್ಮಿನ್ ।**
**ಸ ವಿಷ್ಣುನೆ ಶೇನಯುತಃ ಸದೈವ**
**ನಾಮ್ನಾ ಸೇನೋ ಭೀಮಸೇನಸ್ತದೋऽಸೌ ॥೫೪॥**

ಭೀಮ– ಸಕಲ ವೇದ ವೇದಾಂತಗಳನ್ನು ಅರಿತವ.

ಇಲ್ಲಿ ವಾಯುವೇ ಭೀಮಸೇನನಾಗಿ ಹುಟ್ಟಿದ್ದಾನೆ. ಭೀಮ ಎಂದರೆ ಸಕಲ ವೇದವೇದಾಂತಗಳನ್ನು ಅರಿತವನೆಂತಲೂ, ಸೇನ ಎಂದರೆ ಯಾವಾಗಲೂ ಹರಿಯೊಂದಿಗೆ ಕೂಡಿರುವವ ಅಥವಾ ಸದಾ ಶ್ರೀಹರಿಯನ್ನು ತನ್ನ ಹೃದಯದಲ್ಲಿ ನಿಲ್ಲಿಸಿದವ. ಈ ಎರಡೂ ಗುಣಗಳು ಆ ಮಗುವಿಗೆ ಇದ್ದ ಕಾರಣ ಅವನಿಗೆ 'ಭೀಮಸೇನ' ಎಂದೇ ಕರೆದರು.

ಮಗುವು ಹುಟ್ಟಿದಾಗ ಅಲ್ಲಿಯ ಸನ್ನಿವೇಶ.

**ತಜ್ಜನ್ಮ ಮಾತ್ರೇಣ ಧರಾ ವಿದಾರಿತಾ**
**ಶಾರ್ದೂಲಭೀತಾಜ್ಜನನೀಕರಾದ್ಯದಾ ।**
**ಪಪಾತ ಸಂಚೂರ್ಣಿತ ಏವ ಪರ್ವತ–**
**ಸ್ತೇನಾಖಿಲೋऽಸೌ ಶತಶೃಂಗನಾಮಾ ॥೫೫॥**

ಆ ಮಗುವು ಹುಟ್ಟಿದ ಮಾತ್ರದಿಂದ ಭೂಮಿಯ ಭೀಕರ ಧ್ವನಿಯಿಂದ ಸೀಳಿತು. ಹುಲಿಗಳು ಭಯಗೊಂಡು ಗುಡುಗುಡಿಸುತ್ತ ಓಡಾಡಹತ್ತಿದವು. ಆ ಸಮಯದಲ್ಲಿ ತಾಯಿಯ ಕರದಲ್ಲಿದ್ದ ಕೂಸು ಕೆಳಗೆ ಬಿದ್ದಿತು. ಬಿದ್ದಾಗ ಭೀಮನ ಭಾರದಿಂದ ಆ ಪರ್ವತವು ಚೂರುಚೂರಾಯಿತು. ಅದಕ್ಕೆ ಈಗ ನಿಜವಾಗಿಯೂ 'ಶತಶೃಂಗ' ಎಂಬ ಹೆಸರು ಸಾರ್ಥಕವಾಯಿತು.

ಇದಕ್ಕೂ ಮೊದಲು ಆ ಪರ್ವತವನ್ನು ಏನೆಂದು ಕರೆಯುತ್ತಿದ್ದರು?

ಇದಕ್ಕೂ ಮೊದಲು ಆ ಪರ್ವತವನ್ನು ಶತಶೃಂಗ ಎಂದೇ ಕರೆಯುತ್ತಿದ್ದರು. ಅದು ಕೇವಲ ವಿಶೇಷಣ ಆಗಿತ್ತು. ಆ ಹೆಸರು ಇಂದು ಅದಕ್ಕೆ ಅನ್ವರ್ಥಕವಾಗಿದೆ.

**ತಸ್ಮಿನ್ ಪ್ರಜಾತೇ ರುಧಿರಂ ಪ್ರಸಸ್ರುವು–**
**ರ್ಮಹಾಸುರಾ ವಾಹನ ಸೈನ್ಯಸಂಯುತಾಃ ।**
**ನೃಪಾಶ್ಚ ತತ್ಪಕ್ಷಭವಾಃ ಸಮಸ್ತಾ–**
**ಸ್ತದಾ ಭೀತಾ ಅಸುರಾ ರಾಕ್ಷಸಾಶ್ಚ ॥೫೭॥**

ಆ ಮಗುವು ಹುಟ್ಟಿದ ಕಾಲದಲ್ಲಿ, ಮಹಾ ಅಸುರರ ಸೈನ್ಯದಲ್ಲಿದ್ದ ಕುದುರೆಗಳು ರಕ್ತವನ್ನು ಕಾರಹತ್ತಿದವು. ಇದನ್ನು ಕಂಡು ರಾಕ್ಷಸರ ಪಕ್ಷದಲ್ಲಿದ್ದ ರಾಜರು ಮತ್ತು ರಾಕ್ಷಸರು ಎಲ್ಲರೂ ಭಯಗೊಂಡರು.

**ಅವರ್ಧತಾತ್ರೈವ ವೃಕೋದರೋ ವನೇ ।**
**ಮುದಂ ಸುರಾಣಾ ಮಧಿಕಂ ಪ್ರವರ್ಧಯನ್ ॥೫೭॥**

ಆ ವೃಕೋದರನು (ಭೀಮಸೇನನು) ಆ ವನದಲ್ಲಿಯೇ ಚೆನ್ನಾಗಿ ಬೆಳೆಯಹತ್ತಿದನು. ಇದರಿಂದ ದೇವತೆಗಳ ಆನಂದವೂ ವೃದ್ಧಿಯಾಗಹತ್ತಿತು.

ಭೀಮಸೇನನೇ ವೃಕೋದರನೆ. ಏಕೆ?

'ವೃಕೋನಾಮ ಮಹಾವಹ್ನಿಃ' 'ವೃಕ' ಎಂಬುದು ಒಂದು ವಿಶಿಷ್ಟವಾದ ಅಗ್ನಿ. ಅನಂತಹ ಅಗ್ನಿ ಭೀಮನ ಉದರದಲ್ಲಿದ್ದಿತು. ಕಾರಣ ಅವನನ್ನು ಪುರಾಣಗಳಲ್ಲಿ ವೃಕೋದರ ಎಂದೇ ಕರೆದರು.

ಶೇಷಾವತಾರದ ವಿಚಾರ.

**ತದ್ವೈವ ಶೇಷೋ ಹರಿಣೋದಿತೋಽವಿಶತ್**
**ಗರ್ಭಂ ಸುತಾಯಾ ಅಪಿ ದೇವಕಸ್ಯ ।**
**ಸ ತತ್ರ ಮಾಸತ್ರಯ ಮುಷ್ಯ ದುರ್ಗಯಾ**
**ಪ್ರವಾಹಿತೋ ರೋಹಿಣೇ ಗರ್ಭ ಮಾಶು ।**

**ನಿಯುಕ್ತಯಾ ಕೇಶವವಿನಾಥ ತತ್ರ**

**ಸ್ಥಿತ್ವಾ ಮಾಸಾನ್ ಸಪ್ತಜಾತ: ಪೃಥಿವ್ಯಾಮ್ ॥೫೮॥**

ಶೇಷನು, ಶ್ರೀಹರಿಯ ಆಜ್ಞೆಯ ಮೇರೆಗೆ, ದೇವಕಿಯ ಮಗನಾಗಲು ಆಕೆಯ ಗರ್ಭವನ್ನು ಪ್ರವೇಶಿಸಿದನು. ಅಲ್ಲಿ ಮೂರು ತಿಂಗಳು ಇದ್ದನು. ನಂತರ ದುರ್ಗಾದೇವಿಯು, ಕೇಶವನ ಅಪ್ಪಣೆಯಂತೆ ಆ ಗರ್ಭವನ್ನು ತಂದು ರೋಹಿಣಿಯ ಗರ್ಭದಲ್ಲಿ ಸ್ಥಾಪಿಸಿದಳು. ಶೇಷನು ಅಲ್ಲಿ ಏಳು ತಿಂಗಳು ಬೆಳೆದು ಭೂಮಿಯಲ್ಲಿ ಅವತರಿಸಿದನು.

**ಸ ನಾಮತೋ ಬಲದೇವೋ ಬಲಾಢ್ಯೋ**

**ಬಭೂವ ತಸ್ಯಾನು ಜನಾರ್ದನ: ಪ್ರಭು: ।**

**ಆವಿರ್ಬಭೂವಾಖಿಲ ಸದ್ಗುಣೈಕ–**

**ಪೂರ್ಣಸುತಾಯಾಮಪಿ ದೇವಕಸ್ಯ ॥೫೯॥**

ರೋಹಿಣಿಯ ಗರ್ಭದಿಂದ ಜನಿಸಿದ ಮಗುವು ಬಲಯುಕ್ತನಾದುದರಿಂದ, ಅದನ್ನು 'ಬಲದೇವ' ಎಂದೇ ಕರೆದರು. ನಂತರ ಸಕಲ ಸದ್ಗುಣಗಳ ಸಾಗರನಾದ, ಜಗತ್ತಿಗೆ ಪ್ರಭುವಾದ ಜನಾರ್ದನನು ದೇವಕಿಯ ಮಗನಾಗಿ ಪೂರ್ಣ ರೂಪದಿಂದ ಪ್ರಕಟನಾದನು.

'ಪೂರ್ಣರೂಪ' ಎಂದರೆ ಶಂಖ, ಚಕ್ರ, ಗದಾ, ಪದ್ಮ ಮತ್ತು ಇತರ ಆಭರಣಗಳೊಂದಿಗೆ ಕೂಡಿದವ.

**ಯ:ಸತ್ಸುಖಜ್ಞಾನ ಬಲೈಕದೇಹ:**

**ಸಮಸ್ತ ದೋಷಸ್ಪಶೋರ್ಜಿಜ್ಝಿತ: ಸದಾ ।**

**ಅವ್ಯಕ್ತ ತತ್ಕಾರ್ಯಮಯೋ ನ ಯಸ್ಯ**

**ದೇಹ ಕುತಶ್ಚಿತ್ ಕ್ವ ಚ ಸ ಹ್ಯಜೋ ಹರಿ: ॥೬೦॥**

ಯಾವನಿಗೆ, ಜ್ಞಾನ, ಬಲ, ಆನಂದಗಳೇ ದೇಹವಾಗಿವೆಯೋ, ಯಾವನ ಸ್ಪರ್ಶ ಮಾತ್ರದಿಂದ ಸಕಲ ದೋಷಗಳು ನಾಶಹೊಂದುವವೋ, ಯಾವನು ಅವ್ಯಕ್ತನಾಗಿದ್ದು, ಪಂಚಭೂತಗಳ (ಪಂಚತತ್ವಗಳ ತತ್ ಸಂಪರ್ಕ ಇಲ್ಲದೆ ಇರುವನೋ, ಅಂಥ ಶ್ರೀಹರಿಗೆ ಪ್ರಾಕೃತದೇಹವೆಲ್ಲಿ?) ಅವನು ಇತರರಂತೆ ಹೇಗೆ ಜನಿಸಬಲ್ಲನು?

**ನ ಶುಕ್ಲ ರಕ್ತಪ್ರಭವೋऽಸ್ಯ ಕಾಯ**
**ಸ್ತಥಾಪಿ ತತ್ಪುತ್ರತಯೋಚ್ಯತೇ ಮೃಷಾ ।**
**ಜನಸ್ಯ ಮೋಹಾಯ ಶರೀರತೋऽಸ್ಯಾ**
**ಯದಾವಿರಾಸೀದಮಲ ಸ್ವರೂಪಃ ॥೬೧॥**

ಯಾವನ ದೇಹಕ್ಕೆ ಶುಕ್ಲ ಶೋಣಿತಗಳ ಸಂಬಂಧವಿಲ್ಲವೋ, ಅಂಥವನನ್ನು ಕೂಡ ಅಜ್ಞಾನದಿಂದ, ಅನ್ಯಥಾ ಜ್ಞಾನದಿಂದ ತನ್ನ ಮಗನೆಂದು ಭ್ರಮಿಸುತ್ತಾರೆ. ದುರ್ಜನರಿಗೆ ಮೋಹ ಹುಟ್ಟಿಸುವುದಕ್ಕಾಗಿ ಶ್ರೀಹರಿ ಶರೀರವುಳ್ಳವನಂತೆಯೂ, ಇತರರಲ್ಲಿ ಜನಿಸಿದಂತೆ ಕಾಣಿಸಿಕೊಳ್ಳುತ್ತಾನೆ. ನಿಜವಾಗಿಯೂ ಅವನು ಶುದ್ಧ ಮತ್ತು ನಿಜರೂಪದಿಂದಲೇ ಪ್ರಕಟಗೊಂಡಿದ್ದಾನೆ.

**ಆವಿಶ್ಯಪೂರ್ವಂ ವಸುದೇವ ಮೇವ**
**ವಿವೇಶ ಸತ್ಯಾಮೃತುಕಾಲ ಏವ ।**
**ದೇವೀ ಮುವಾಸೌತ್ರ ಚ ಸಪ್ತ ಮಾಸಾನ್**
**ಸಾರ್ಧಾಂ ಸ್ತತಶ್ಚಾ ವಿರಭೂದ ಜೋऽಪಿ ॥೬೨॥**

ಮೊದಲು ಶ್ರೀಹರಿ, ವಸುದೇವನ ಉದರದಲ್ಲಿ ಆವಿಶ್ಯನಾದನು. ನಂತರ ಋತುಕಾಲದಲ್ಲಿ ದೇವಕಿಯಲ್ಲಿ ಅಲ್ಲಿ ಏಳು ತಿಂಗಳು ವಾಸಿಸಿ ನಂತರ ಆವಿರ್ಭವಿಸಿದನು.

'ಆವಿಶ್ಯ' ಎಂಬ ಪದದಿಂದ ವಸುದೇವನ ಶುಕ್ಲರೇತಸ್ಸಿನ ಪ್ರಭಾವವಾಗಲಿ, ದೇವಕಿಯ ರಕ್ತ ಮತ್ತು ಗರ್ಭದ ಪರಿಣಾಮವಾಗಲಿ ಶ್ರೀಹರಿಯ ಮೇಲೆ ಯಾವ ಕಾಲಕ್ಕೂ ಆಗಿಲ್ಲ ಎಂಬುದು ಸ್ಪಷ್ಟವಾಗುತ್ತದೆ.

ಶ್ರೀಹರಿಯು ಹೇಗೆ ಪ್ರಕಟನಾದನು ಎಂಬುದಕ್ಕೆ ದೃಷ್ಟಾಂತ.

**ಯಥಾ ಪುರಾ ಸ್ತಂಭತ ಆವೀರಾಸೀ-**
**ದಶುಕ್ಲರಕ್ತೋऽಪಿ ನೃಸಿಂಹರೂಪಃ ।**
**ತಥೈವ ಕೃಷ್ಣೋऽಪಿ ತಥಾಪಿಮಾತಾ-**
**ಪಿತೃಕ್ರಮಾದೇವ ವಿಮೋಹಯತ್ಯಜಾ ॥೬೩॥**

ಹಿಂದೆ ಶ್ರೀಹರಿಯು ಶುಕ್ಲಶೋಣಿತಗಳ ಸಂಬಂಧವಿಲ್ಲದಯೇ ನೃಸಿಂಹ ರೂಪದಿಂದ ಕಂಬದಲ್ಲಿ ಹೇಗೆ ಪ್ರಕಟನಾದನೋ, ಅದೇ ರೀತಿ– ಇಂದು ಶ್ರೀಕೃಷ್ಣನು ಮಾತಾಪಿತೃಗಳನ್ನು ನಿಮಿತ್ತ ಮಾಡಿಕೊಂಡು ಅವಿರ್ಭವಿಸಿದ್ದಾನೆ. ಜನನರಹಿತನಾಗಿ ಜನಿಸಿದಂತೆ ಇತರರಿಗೆ ಮೋಹಗೊಳಿಸಿದ್ದಾನೆ.

**ಪಿತೃಕ್ರಮಂ ಮೋಹನಾರ್ಥಂ ಸಮೇತಿ**
**ನ ತಾವತಾ ಶುಕ್ಲತೋ ತಕ್ತ ತಚ್ಚ ।**
**ಜಾತೋಽಸ್ಯ ದೇಹಸ್ತ್ವಿತಿ ದರ್ಶನಾಯ**
**ಸಶಂಖಚಕ್ರಾಬ್ಜಗದಃ ಸದೃಷ್ಟಃ ॥೬೪॥**

ಶುಕ್ಲ–ಶ್ಲೋಣಿತಗಳ ಸಂಬಂಧವಿಲ್ಲದಿದ್ದರೂ, ಪಿತೃಕ್ರಮ ಅನುಸರಿಸಿರುವುದರಿಂದ, ವಸುದೇವ–ದೇವಕಿಯರು ಶ್ರೀಹರಿಯನ್ನು ತಮ್ಮ ಮಗನೆಂದೇ ಭ್ರಮೆಗೊಂಡರು. ಅದನ್ನು ಕಳೆದು ಅವರಿಗೆ ನಿಜಸಂಗತಿಯನ್ನು ತೋರುವುದಕ್ಕಾಗಿ ಶ್ರೀಹರಿಯು ಶಂಖ, ಚಕ್ರ, ಗದಾಪದ್ಮಗಳಿಂದ ಕೂಡಿದವನಾಗಿ ಕಾಣಿಸಿಕೊಂಡಿದ್ದಾನೆ. ಅದರಿಂದ ಅವರಿಗೆ ಈತನು ನಮ್ಮ ಮಗನಲ್ಲ ಎಂಬುದರ ಅರಿವಾಯಿತು.

ಅಷ್ಟೇ ಅಲ್ಲ.

**ಅನೇಕ ಸೂರ್ಯಾಭ ಕಿರೀಟಯುಕ್ತೋ**
**ವಿದ್ಯುತ್ಪ್ರಭೇ ಕುಂಡಲೇಧಾರಯಂಶ್ಚ ।**
**ಪೀತಾಂಬರೋ ವನಮಾಲೀ ಸ್ವನಂತ**
**ಸೂರ್ರೋರು ದೀಪ್ತಿ ರ್ದದೃಶೇ ಗುಣಾರ್ಣವಃ ॥೬೫॥**

ಅನೇಕ ದಿವಾಕರರ ಪ್ರಭೆಯಿಂದ ಯುಕ್ತವಾದ ಕಿರೀಟ ಮಿಂಚಿನಿಂತೆ ಹೊಳೆಯುವ ಕುಂಡಲಗಳನ್ನು ಧರಿಸಿದ, ಪೀತಾಂಬರ ವನಮಾಲಿಗಳನ್ನು ಧರಿಸಿದವನಾಗಿ, ಸಕಲಗುಣಗಳಿಗೆ ಆಗರನಾದ ಶ್ರೀಹರಿ ಅನೇಕ ಸೂರ್ಯಕಾಂತಿಗಿಂತಲೂ ಮಿಗಿಲಾಗಿ ಕಂಗೊಳಿಸಿದನು.

ಮತ್ತು

ಸ ಕಂಜಯೋನಿ ಪ್ರಮುಖೈಃ ಸುರೈಃ ಸ್ತುತಃ
ಪಿತ್ರಾ ಚ ಮಾತ್ರಾ ಚ ಜಗಾದ ಶೂರಜಮ್ ।
ನಯಸ್ವ ಮಾಂ ನಂದಗೃಹಾನಿತಿ ಸ್ಮ
ತತೋ ಬಭೂವ ದ್ವಿಭುಜೋ ಜನಾರ್ದನಃ ॥೬೬॥

ಕಮಲಸಂಭವಬ್ರಹ್ಮನೇ ಮೊದಲಾದ ಅನೇಕ ದೇವತೆಗಳು ಶ್ರೀಹರಿಯನ್ನು ಸ್ತುತಿಸುತ್ತಿದ್ದರು. ತಂದೆ, ತಾಯಿ ಆದಿಯಾಗಿ ಶೂರಜರು ಸ್ತೋತ್ರಮಾಡಿದರು. ಆಗ ಶ್ರೀಹರಿ "ನನ್ನನ್ನು ನೀನು ನಂದನ ಮನೆಗೆ ತೆಗೆದುಕೊಂಡು ಹೋಗು" ಎಂದು ವಸುದೇವನಿಗೆ ಹೇಳಿ, ಎರಡು ಬಾಹುಗಳುಳ್ಳ ಬಾಲಕನಾಗಿ ಆ ಜನಾರ್ದನನು ಮಲಗಿದನು.

ತದೈವ ಜಾತಾ ಚ ಹರೇರನುಜ್ಞಯಾ
ದುಗಾಭಿಧಾ ಶ್ರೀರನುನಂದ ಪತ್ನ್ಯಾಮ್ ।
ತತಸ್ತ ಮಾದಾಯ ಹರಿಂ ಯಯೌಸ
ಶೂರಾತ್ಮಜೋ ನಂದಗೃಹಾನ್ನಿಶೀಥೇ ॥೬೭॥

ಅದೇ ಕಾಲದಲ್ಲಿ ಶ್ರೀಹರಿಯ ಆಜ್ಞೆಯಂತೆ ಲಕ್ಷ್ಮಿದೇವಿಯರು, ದುರ್ಗಾರೂಪದಿಂದ ನಂದನ ಪತ್ನಿಯಲ್ಲಿ ಅವತರಿಸಿದ್ದರು. ವಸುದೇವನು ಶ್ರೀಹರಿಯನ್ನು ಆ ರಾತ್ರಿಯಲ್ಲಿ ನಂದನ ಮನೆಗೆ ಕರೆದು ತಂದನು.

ಸಂಸ್ಥಾಪ್ಯ ತಂ ತತ್ರ ತಧೈವ ಕನ್ಯಕಾ-
ಮಾದಾಯ ತಸ್ಮಾತ್ ಸ್ವಗೃಹಂ ಪುನರ್ಯಯೌ ।
ಹತ್ವಾ ಸ್ವ ಸುಗರ್ಭಷಟ್ಕಂ ಕ್ರಮೇಣ
ಮತ್ವಾಷ್ಟಮಂ ತತ್ರ ಜಗಾಮ ಕಂಸಃ ॥೬೮॥

ವಸುದೇವನು ಆ ಮಗುವನ್ನು ಅಲ್ಲಿಟ್ಟು ಅಲ್ಲಿದ್ದ ಕನ್ಯೆಯನ್ನು ತೆಗೆದುಕೊಂಡು ತನ್ನ ಮನೆಗೆ ಹಿಂದಿರುಗಿ ಬಂದನು. ಕಂಸನು ಇದುವರೆಗೆ

ಆರು ಗರ್ಭಗಳ ಶಿಶುಗಳನ್ನು ಕ್ರಮೇಣ ಕೊಂದಿದ್ದನು. ಈಗ ಹುಟ್ಟಿದ್ದು ಎಂಟನೆಯದೆಂದು ತಿಳಿದು ಅದನ್ನು ಕೊಲ್ಲಲು ಕಂಸನು ಅಲ್ಲಿಗೆ ಬಂದನು.

ಕಂಸನು ಮೊದಲು ಕೊಂದಿದ್ದು ಆರು. ಈಗ ಇದು ಏಳಾಗಬೇಕು. ಅವನು 'ಎಂಟು' ಎಂದು ಏಕೆ ತಿಳಿದನು? ಅದಕ್ಕೆ ಸ್ಪಷ್ಟೀಕರಣ

ಗರ್ಭಂ ದೇವಕ್ಯಾಃ ಸಪ್ತಮಂ ಮೇನಿರೇ ಹಿ
ಲೋಕಾಃ ಸ್ರುತಂ ತ್ವಷ್ಟಮಂ ತಾಂ ತತಃ ಸಃ ।
ಮತ್ವಾ ಹಂತಂ ಪಾದಯೋಃ ಸಂಪ್ರಗೃಹ್ಯ
ಸಂಪೋಥಯಾಮಾಸ ಶಿಲಾತಲೇ ಚ ॥೬೯॥

ದೇವಕಿಯ ಏಳನೆಯ ಗರ್ಭವನ್ನು ದುರ್ಗಾದೇವಿಯರು ತಂದು ರೋಹಿಣಿಯ ಗರ್ಭದಲ್ಲಿಟ್ಟಾಗ ಜನರು ಗರ್ಭಸ್ರಾವ ಆಯಿತೆಂದು ಅಂದರು. ಅದನ್ನು ಕೇಳಿದ ಕಂಸನು, ಇದೇ ಎಂಟನೆಯ ಗರ್ಭ ಎಂದು ಬಗೆದನು. ಕೊಲ್ಲಲೆಂದು ಆ ಶಿಶುವಿನ ಕಾಲುಗಳನ್ನು ಹಿಡಿದು ಎತ್ತಿ ಕಲ್ಲಿನ ಮೇಲೆ ಬಡಿಯಲು ಪ್ರಯತ್ನಿಸಿದನು.

ಸಾ ತದ್ಧಸ್ತಾತ್ ಕ್ಷಿಪ್ರಮುತ್ಪತ್ಯ ದೇವೀ
ಖೇಽದಟಶ್ಯತ್ತೈವಾಷ್ಟಭುಜಾ ಸಮುಗ್ರಾ ।
ಬ್ರಹ್ಮಾದಿಭಿಃ ಪೂಜ್ಯಮಾನಾ ಸಮಗ್ರೈ
ರತ್ಯದ್ಭುತಾಕಾರವತೀ ಹರಿಪ್ರಿಯಾ ॥೭೦॥

ಆ ಕನ್ಯೆ ಅವನ ಕೈಯಿಂದ ಕೂಡಲೇ ತಪ್ಪಿಸಿಕೊಂಡು, ಆಕಾಶದಲ್ಲಿ ಪ್ರಬುದ್ಧ ರೂಪಳಾಗಿ ಕಾಣಿಕೊಂಡಳು. ಅಷ್ಟಭುಜಗಳು, ಉಗ್ರರೂಪವನ್ನು ತಾಳಿದ್ದಳು. ಬ್ರಹ್ಮಾದಿದೇವತೆಗಳು ಪೂಜಿಸಿದರು. ಆಕೆಯು ಶ್ರೀಹರಿಗೆ ಬಹಳ ಪ್ರಿಯಳೂ ಆಗಿದ್ದಳು.

ಉವಾಚ ಚಾರ್ಯ ತವ ಮೃತ್ಯುರತ್ರ
ಕ್ವಚಿತ್ ಪ್ರಜಾತೋ ಹಿ ವೃಥೈವ ಪಾಪ ।
ಅನಾಗ ಸೀಂ ಮಾಂ ವಿನಿಹಂತು ಮಿಚ್ಛ–
ಸ್ಯಶಕ್ಯ ಕಾರ್ಯೇ ತವ ಚೋದ್ಯಮೋಽಯಮ್ ॥೭೧॥

ಆಗ ದುರ್ಗಾದೇವಿಯು, "ಎಲೈ ಪಾಪಾತ್ಮನೇ ನಿನ್ನ ಮೃತ್ಯುವು ಈಗಾಗಲೇ ಎಲ್ಲಿಯೋ ಹುಟ್ಟಿ ಬಿಟ್ಟಿದೆ. ನಿರಪರಾಧಿಯಾಗಿರುವ ನನ್ನನ್ನು ಕೊಲ್ಲುವ ನಿನ್ನ ಈ ಪ್ರಯತ್ನ ಅಶಕ್ಯ ಮತ್ತು ವ್ಯರ್ಥವೂ ಕೂಡ" ಎಂದು ಹೇಳಿದಳು.

**ಉಕ್ತ್ವೇತಿ ಕಂಸಂ ಪುನರೇವ ದೇವಕೀ-**
**ತಲ್ಪೇऽಶಯಾದ್ಬಾಲರೂಪೈವ ದುರ್ಗಾ ।**
**ನಾಜ್ಞಾಸಿಷುಸ್ತಾಮಥ ಕೇಚನಾತ್ರ ಋತೇ ಹಿ**
**ಮಾತಾಪಿತಾರೌ ಗುಣಾಢ್ಯಾಮ್ ॥೭೨॥**

ಕಂಸನಿಗೆ ಈ ರೀತಿಯಾಗಿ ಹೇಳಿ, ದುರ್ಗಾದೇವಿಯು ಪುನಃ ಬಾಲರೂಪದಿಂದ ದೇವಕಿಯ ಹಾಸಿಗೆಯಲ್ಲಿ ಮಲಗಿದಳು. ಸುಪ್ತಾವಸ್ಥೆಯಲ್ಲಿ ಮಲಗಿದ, ಗುಣಾಢ್ಯಳಾದ ಆ ದುರ್ಗೆಯು ತಂದೆ ತಾಯಿಗಳ ಹೊರತು ಮತ್ತಾರಿಗೂ ಕಾಣುತ್ತಿರಲಿಲ್ಲ.

**ಶ್ರುತ್ವಾ ತಯೋಕ್ತಂ ತು ತದೈವ ಕಂಸಃ**
**ಪಶ್ಚಾತ್ತಾಪಾದ್ವಸುದೇವಂ ಸಭಾರ್ಯಮ್ ।**
**ಪ್ರಸಾದಯಾಮಾಸ ಪುನಃ ಪುನಶ್ಚ**
**ವಿಹಾಯ ಕೋಪಂ ಚ ತಮೂಚತುಸ್ತೌ ।**
**ಸುಖಸ್ಯ ದುಃಖಸ್ಯ ಚ ರಾಜಸಿಂಹ**
**ನಾನ್ಯ ಕರ್ತಾ ವಾಸುದೇವಾದಿತಿ ಸ್ಮ ॥೭೩॥**

ದುರ್ಗಾದೇವಿಯ ಮಾತುಗಳನ್ನು ಕೇಳಿದ ಕಂಸನು, ಕೂಡಲೇ ಪಶ್ಚಾತ್ತಾಪ ವ್ಯಕ್ತ ಪಡಿಸುತ್ತ ವಸುದೇವ ದೇವಕಿಯ ಹತ್ತಿರ ಬಂದು ಅವರ ಕೋಪವನ್ನು ಶಮನಮಾಡಿ, ಸಂತೈಸಿ ಸಂತೋಷಪಡಿಸಲು ಪ್ರಯತ್ನಿಸಿದನು. ಆಗ ವಸುದೇವನು, "ಎಲೈ ರಾಜಸಿಂಹನೇ! ಸುಖ ದುಃಖಗಳನ್ನು ಕೊಡತಕ್ಕವನು ಆ ವಾಸುದೇವನು, ಅನ್ಯನಲ್ಲ" ಹೀಗೆಂದು ಹೇಳಿ ಸಮಾಧಾನ ಪಡಿಸಿದನು.

ವಿ.ವಿ. 'ಕಂಸನ' ಪಶ್ಚಾತ್ತಾಪ "ಜೀವದ್ವಯ ಸಿದ್ಧಾಂತವನ್ನು" ಎತ್ತಿ ತೋರುತ್ತಿದೆ. ಆದರೂ ಕಷ್ಟ ಚೇತನ ಪ್ರಬಲವಾದುದು.

**ಅನೀಯ ಕಂಸೋऽಥ ಗೃಹೇ ಸ್ವಮಂತ್ರಿಣಃ**
**ಪ್ರೋವಾಚ ಕನ್ಯಾವಚನಂ ಸಮಸ್ತಮ್ ।**
**ಶ್ರುತ್ವಾ ಚ ತೇ ಪ್ರೋಚುರತ್ಯಂತಪಾಪಾಃ**
**ಕಾರ್ಯಂ ಬಾಲಾನಾಂ ನಿಧನಂ ಸರ್ವಶೋऽಪಿ ॥೭೪॥**

ನಂತರ ಕಂಸನು, ಎಲ್ಲ ಮಂತ್ರಿಗಳನ್ನು ತನ್ನ ಮನೆಗೆ ಕರೆಸಿದನು. ಕನ್ಯೆಯು ಹೇಳಿದ ಎಲ್ಲ ಮಾತುಗಳನ್ನು ಅವರ ಮುಂದೆ ಹೇಳಿದನು. ಅದನ್ನು ಕೇಳಿದ ಮಂತ್ರಿಗಳ 'ಸಮಸ್ತ ಬಾಲಕರನ್ನು ವಧಿಸುವ' ಮಹತ್ತರವಾದ ಪಾಪದ ಕೆಲಸಕ್ಕಾಗಿ ಕಂಸನಿಗೆ ಪ್ರಚೋದಿಸಿದರು.

**ತಥೇತಿ ತಾಂಸ್ತತ್ರ ನಿಯುಜ್ಯ ಕಂಸೋ**
**ಗೃಹಂ ಸ್ವಕೀಯಂ ಪ್ರವಿವೇಶ ಪಾಪಃ ।**
**ಚೇರುಶ್ಚ ತೇ ಬಾಲವಧೇ ಸದೋದ್ಯತಾ**
**ಹಿಂಸಾವಿಹಾರಾಃ ಸತತಂ ಸ್ವಭಾವತಃ ॥೭೫॥**

ಹಾಗೆಯೇ ಆಗಲಿ, ಎಂದು ಹೇಳಿ ಆ ಪಾಪಿಷ್ಠನಾದ ಕಂಸನು ತನ್ನ ಮಂತ್ರಿಗಳನ್ನು ನಿಯೋಜಿಸಿ ಸ್ವಗೃಹವನ್ನು ಪ್ರವೇಶಿಸಿದನು. ಸ್ವಭಾವದಿಂದ ದುಷ್ಟರಾದ ಆ ಮಂತ್ರಿಗಳು ಹಿಂಸಾಕೃತ್ಯವನ್ನೇ ತಮ್ಮ ಮನರಂಜನೆಯ ಆಟವನ್ನು ಮಾಡಿಕೊಂಡು ಮಕ್ಕಳನ್ನು ಕೊಲ್ಲುವ ಕಾರ್ಯದಲ್ಲಿ ಪ್ರವೃತ್ತರಾದರು.

ಅಂತೆಯೇ 'ದುಷ್ಟರಸಂಗ ಮಹಾ ಪಾಪಕರ' ಎಂದು ಬಲ್ಲವರ ಮಾತು. ಇತ್ತ ಗೋಕುಲದಲ್ಲಿ

**ಅಥ ಪ್ರಭಾತೇ ಶಯನೇ ಶಯಾನ–**
**ಮಪಶ್ಯತಾಮಬ್ಜದಲಾಯ ತಾಕ್ಷಮ್ ।**
**ಕೃಷ್ಣಂ ಯಶೋದಾ ಚ ತಥೈವ ನಂದ**
**ಆನಂದಸಾಂದ್ರಾಕೃತಿ ಮಪ್ರಮೇಯಮ್ ॥೭೬॥**

ಪ್ರಭಾತ ಸಮಯದಲ್ಲಿ. ಕಮಲಗಳಂತೆ ಕಣ್ಣುಳ್ಳವನು, ತಿಳಿದುಕೊಳ್ಳಲು ಅಶಕ್ಯನಾದ ಆನಂದಮೂರ್ತಿ ಶ್ರೀಕೃಷ್ಣನು ತಮ್ಮ ಹಾಸಿಗೆಯ ಮೇಲೆ ಮಲಗಿರುವುದನ್ನು ಯಶೋದೆ ಮತ್ತು ನಂದಗೋಪರು ಕಂಡರು.

**ಮೇನಾತ ಏತೌ ನಿಜಪುತ್ರಮೇನಂ**
**ಸ್ರಷ್ಟಾರಮಬ್ಜ ಪ್ರಭವಸ್ಯ ಚೇಶಮ್ ।**
**ಮಹೋತ್ಸವಾತ್ ಪೂರ್ಣಮನಾಶ್ಚ ನಂದೋ**
**ವಿಪ್ರೇಭ್ಯೋಽದಾಲ್ಲಕ್ಷಮಿತಾಸ್ತದಾ ಗಾಃ ॥೭೭॥**

ಬ್ರಹ್ಮನನ್ನು ಮೊದಲ್ಗೊಂಡು ಸಕಲ ಚೇತನಾಚೇತನ ಸೃಷ್ಟಿಯನ್ನು ಸೃಷ್ಟಿಸತಕ್ಕ ಆ ಪರಮಾತ್ಮನನ್ನು ಯಶೋದಾನಂದರು ತನ್ನ ಪುತ್ರನೆಂದೇ ಭಾವಿಸಿದರು. ತಮ್ಮ ಮನೋಭಿಷ್ಟಪೂರ್ತಿ ಉತ್ಸವದ ನಿಮಿತ್ತ ನಂದನು ಅನೇಕ ಸಲಕ್ಷಣ ಗೋವುಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟನು.

**ಸುವರ್ಣರತ್ನಾಂಬರ ಭೂಷಣಾನಿ (ನಾಂ)**
**ಬಹೂನಿ ಗೋಜೀವಿಗಣಾಧಿನಾಥಃ**
**ಪ್ರಾದಾದತೋಪಾಯನಷಾಣಯಸ್ತಂ**
**ಗೋಪಾ ಯಶೋದಾಂಚ ಮುದಾಸ್ತ್ರೀಯೋಽಗಮನ್ ॥೭೮॥**

ಸುವರ್ಣರತ್ನಾಭರಣ ಪೀತಾಂಬರಗಳಿಂದ ಅಲಂಕೃತವಾದ ಗೋವುಗಳನ್ನು ನಂದನು ದಾನವಾಗಿ ಕೊಟ್ಟರೆ, ನಂದ ದಂಪತಿಗಳಿಗೆ ಪ್ರೀತಿಯಿಂದ ಉಡುಗೊರೆಯಾಗಿ ಕೊಡಲು ಗೋಪಾಲಕ ಮತ್ತು ಗೋಪಾಸ್ತ್ರೀಯರು ಅನೇಕ ಉತ್ತಮ ಪದಾರ್ಥಗಳನ್ನು ತಂದು ಸಿದ್ಧರಾದರು.

**ಗತೇಷು ತತ್ರೈವ ದಿನೇಷು ಕೇಚಿತ್**
**ಜಗಾಮ ಕಂಸಸ್ಯ ಗೃಹಂ ಸ ನಂದಃ ।**
**ಪೂರ್ವಂ ಹಿ ನಂದಃ ಸಕರಃ ಹಿ ದಾತುಂ**
**ಬೃಹದ್ವನಾನ್ನಿಃ ಸೃತಃ ಪ್ರಾಪ ಕೃಷ್ಣಮ್ ॥೭೯॥**

ಅಲ್ಲಿ ಈ ರೀತಿಯಾಗಿ ಕೆಲವು ದಿನಗಳನ್ನು ಕಳೆದನಂತರ, ನಂದನು ಕಂಸನು ಮನೆಯ ಕಡೆಗೆ ನಡೆದನು.

ಏಕೆ? ಮೊದಲಿನಿಂದಲೂ ನಂದನು ಕಂಸನಿಗೆ ಕರವನ್ನು ತಂದು ಒಪ್ಪಿಸುತ್ತಿದ್ದನು. ಆ ನಿಮಿತ್ತವಾಗಿ ಅವನು ಯಮುನೆಯ ದಂಡೆಯಲ್ಲಿ ಬೃಹದ್ವನದಲ್ಲಿ ಬಂದು ತಂಗಿದ್ದನು.

ಯಮುನಾ ನದಿಯ ತೀರಕ್ಕೆ ಏಕೆ ಬಂದಿದ್ದನು?

**ಸಹಾಗತಾ ತೇನ ತದಾಯಶೋದಾ**
**ಸುಷಾವ ದುರ್ಗಾಮಥ ತತ್ರ ಶೌರಿಃ ।**
**ನಿಧಾಯ ಕೃಷ್ಣಂ ಪ್ರತಿಗೃಹ್ಯ ಕನ್ಯಕಾಂ**
**ಗೃಹಂ ಯಯೌ ನಂದ ಉವಾಸ ತತ್ರ ॥೮೦॥**

ಆಗ ಯಶೋದಾದೇವಿಯು ಅವನ ಜೊತೆಯಲ್ಲಿಯೇ ಬಂದಿದ್ದಳು. ಅವಳು ದುರ್ಗಾದೇವಿಯನ್ನು ಇಲ್ಲಿಯೇ ಹಡೆದಳು. ವಸುದೇವನು ಶ್ರೀಕೃಷ್ಣನನ್ನು ತಂದು ಇಲ್ಲಿಯೇ ಒಪ್ಪಿಸಿ, ಇಲ್ಲಿದ್ದ ಕನ್ನಿಕೆಯನ್ನು ತೆಗೆದುಕೊಂಡು ತನ್ನ ಮನೆಗೆ ಹೋದನು. ನಂದನು ಅಲ್ಲಿಯೇ ಉಳಿದನು.

**ನಿರುಷ್ಯ ತಸ್ಮಿನ್ ಯಮುನಾ ತಟೇ ಸ**
**ಮಾಸಂ ಯಯೌ ದ್ರಷ್ಟುಕಾಮೋನರೇಂದ್ರಮ್ ।**
**ರಾಜ್ಞೋಽಥ ತಂ ದತ್ತಕರಂ ದದರ್ಶ**
**ಶೂರಾತ್ಮಜೋ ವಾಕ್ಯಮುವಾಚ ಚೈನಮ್ ॥೮೧॥**

ಹೆಂಡತಿಯು ಹಡೆದ ಪ್ರಯುಕ್ತ ನಂದನು ಒಂದು ತಿಂಗಳು ಅಲ್ಲಿಯೇ ವಾಸಮಾಡಿನು. ನರೇಂದ್ರನಾದ ಕಂಸನನ್ನು ಕಾಣುವುದಕ್ಕಾಗಿ ಅಲ್ಲಿಂದ ಹೊರಟನು. ರಾಜನಿಗೆ ಕಪ್ಪವನ್ನು ಕೊಡಲು ಬಂದ • ನಂದನನ್ನು ವಸುದೇವನು ನೋಡಿದನು. ನಂದನಿಗೆ ಹೀಗೆ ಹೀಗೆ ಹೇಳಿದನು.

**ಯಾಹ್ಯುತ್ಪಾತಾಃ ಸಂತಿ ತತ್ರೇತ್ಯುದೀರಿತೇ**
**ಜಗಾಮ ಶೀಘ್ರಂ ಯಮುನಾಂ ಸ ನಂದಃ ।**
**ರಾತ್ರಾವೇವಾಗಚ್ಛಮಾನೇ ತು ನಂದೇ**
**ಕಂಸಸ್ಯ ಧಾತ್ರೀ ತು ಜಗಾಮ ಗೋಷ್ಠಮ್ ॥೮೨॥**

ಅನೇಕ ಉತ್ಪಾತಗಳು, ಯಶೋದಾ ಇರುವ ಸ್ಥಳದಲ್ಲಿ ಆಗುತ್ತಿವೆ, ಎಂದು ವಸುದೇವನಿಂದ ಕೇಳಿದ ನಂದನು, ಅದೇ ರಾತ್ರಿ ಶೀಘ್ರದಿಂದ ಯಮುನಾತಟಕ್ಕೆ ಬಂದನು. ಅಷ್ಟರಲ್ಲಿ ಧಾತ್ರಿಯು (ಕಂಸನಿಗೆ ಹಾಲುಣಿಸುವುದಕ್ಕೆ ಅಲ್ಲಿಗೆ ಬಂದೇ ಬಿಟ್ಟಿದ್ದಳು.

ಸಾ ಪೂತಾನಾನಾಮ ನಿಜಸ್ವರೂಪ–
ಮಾಚ್ಛಾದ್ಯ ರಾತ್ರೌ ಶುಭ ರೂಪವಚ್ಚ ।
ವಿವೇಶ ನಂದಸ್ಯ ಗೃಹಂ ಬೃಹದ್ವನ–
ಪ್ರಾಂತೇ ಹಿ ಮಾರ್ಗೇ ರಚಿತಂ ಪ್ರಯಾಣೇ ॥೮೩॥

ಅವಳೇ ಪೂತನಾ ಹೆಸರಿನ ರಾಕ್ಷಸಿ.ಅವಳು ತನ್ನ ನಿಜರೂಪವನ್ನು ಮರೆಸಿ, ಸುಂದರ ರೂಪವನ್ನು ಧರಿಸಿ ರಾತ್ರಿಯಲ್ಲಿ ಬೃಹದ್ವನದ ಕಡೆಗೆ ನಡೆದಳು. ಮಾರ್ಗದಲ್ಲಿಯೇ ರಚಿಸಲ್ಪಟ್ಟ ನಂದನ ಮನೆಯನ್ನು ಪ್ರವೇಶಿಸಿದಳು. ಪೂತ +ನಾ , ಪೂತ = ಪವಿತ್ರವಾದ, ನಾ = ಪವಿತ್ರಳಲ್ಲದವಳು ಅಂದರೆ ಕೆಟ್ಟವಳು, ಪಾಪಿಷ್ಠಳು.

ತೀರೇ ಭಗಿನ್ಯಾಸ್ತು ಯಮಸ್ಯ ವಸ್ತ್ರಗೃಹೇ–
ಶಯಾನಂ ಪುರುಷೋತ್ತಮಮ್ ತಮ್ ।
ಜಗ್ರಾಹ ಮತ್ರಾ ತು ಯಶೋದಾ ತಯೊ
ನಿದ್ರಾಯುಜಾ ಪ್ರೇಕ್ಷ್ಯಮಾಣಾ ಶುಭೇನ ॥೮೪॥

ಯಮನ ತಂಗಿ ಯಮುನೆ, ಆ ಯಮುನಾನದಿಯ ತೀರದಲ್ಲಿರುವ ವಸ್ತ್ರಗೃಹ (ಡೇರೆ)ದಲ್ಲಿ ಪುರುಷೋತ್ತಮನಾದ ಶ್ರೀಕೃಷ್ಣನು ಮಲಗಿರುವುದನ್ನು ಜೊತೆಯಲ್ಲಿ ಗಾಢನಿದ್ರೆಯಲ್ಲಿರುವ ತಾಯಿಯಾದ ಯಶೋದೆಯನ್ನೂ ಕಂಡಳು. ಕೂಸನ್ನು ಎತ್ತಿಕೊಂಡಳು.

ತನ್ಮಾಯಯಾ ಧರ್ಷಿತಾ ನಿದ್ರಯಾ ಚ
ದ್ಯವಾರಯನ್ನೈವ ಹಿ ನಂದಜಾಯಾ ।
ತಯಾ ಪ್ರದತ್ತಂ ಸ್ತನಮಿಾಶಿತಾಸುಭಿಃ
ಪಪೌ ಸಹೈವಾಶು ಜನಾರ್ದನಃ ಪ್ರಭುಃ ॥೮೫॥

ಪೂತನಿಯ ಮಾಯೆ, ನಿದ್ರೆಯ ಪ್ರಭಾವ, ಈ ಎರಡರಿಂದ, ಯಶೋದಯು ಪೂತನಿಯನ್ನು ತಡೆಯಲಿಲ್ಲ. ಆಗ ಪ್ರಭುವಾದ ಜನಾರ್ದನನು ಅವಳಿತ್ತ ಸ್ತನಪಾನವನ್ನು ಮಾಡಿದನು. ಜೊತೆಯಲ್ಲಿ ಅವಳ ಪ್ರಾಣವನ್ನೂ ಹೀರಿದನು.

**ಮೃತಾ ಸ್ವರೂಪೇಣ ಸುಭೀಷಣೇನ**
**ಪಪಾತ ಸಾ ವ್ಯಾಪ್ಯ ವನಂ ಸಮಸ್ತಮ್ ।**
**ತದಾಗಮನ್ನಂದಗೋಪೋऽಪಿತತ್ರ**
**ದೃಷ್ಟ್ವಾ ಚ ಸರ್ವೇऽಪ್ಯಭವನ್‌ಸುವಿಸ್ಮಿತಾಃ ॥೮೬॥**

ಅತಿ ಭಯಂಕರವಾದ ಸ್ವರೂಪದಿಂದ ಆ ಪೂತನಿಯು ಅಲ್ಲಿ ಸತ್ತು ಬಿದ್ದಿದ್ದಳು. ಅವಳ ದೇಹವು ಬೃಹದ್ವನವೆಲ್ಲ ವ್ಯಾಪಿಸಿತ್ತು. ಅದೇ ಕಾಲಕ್ಕೆ ನಂದಗೋಪನೂ ಅಲ್ಲಿಗೆ ಬಂದನು. ನಂದನು ಮತ್ತು ಇತರ ಪುರಜನರು ಆ ಮೃತದೇಹವನ್ನು ಆಶ್ಚರ್ಯದಿಂದ ನೋಡಿದರು.

ಪೂತನಿಯ ಪೂರ್ವಜನ್ಮ

**ಸಾ ತಾಟಕಾ ಚೋರ್ವಶೀಸಂಪ್ರವಿಷ್ಟಾ**
**ಕೃಷ್ಣಾವಧ್ಯಾನಾನ್ನಿರಯಂ ಸಂಜಗಾಮ ।**
**ಸಾ ತೂರ್ವಶೀ ಕೃಷ್ಣಭುಕ್ತ ಸ್ತನೇನ**
**ಪೂತಾ ಸ್ವರ್ಗಂ ಪ್ರಯಯೌ ತತ್‌ಕ್ಷಣೇನ ॥೮೭॥**

ಇವಳೇ ಅಂದಿನ ತಾಟಕಾ. ಇಂದು ಪೂತನಿ. ಈ ದೇಹದಲ್ಲಿ ಊರ್ವಶಿಯ ಪ್ರವೇಶವೂ ಆಗಿದೆ. ಶ್ರೀಕೃಷ್ಣನನ್ನು ಕೊಲ್ಲುವ ಉದ್ದೇಶದಿಂದ ಹಾಲುಣಿಸಿದ ಕಾರಣ ಪವಿತ್ರಳಾಗಿ ತತ್‌ಕ್ಷಣದಲ್ಲಿ ಸ್ವರ್ಗಕ್ಕೆ ಹೋದಳು.

ವಿ.ವಿ. ಶ್ರೀಮದಾಚಾರ್ಯರ 'ಜೀವದ್ವಯ' ಸಿದ್ಧಾಂತವು ಇಲ್ಲಿ ಸ್ಪಷ್ಟವಾಗಿದೆ.

ಊರ್ವಶಿಯು ಪೂತನಿಯ ಶರೀರದಲ್ಲಿ ಏಕೆ ಬಂದಳು?

**ಸಾ ತುಂಬುರೋಃ ಸಂಗತ ಆವಿವೇಶ**

**ರಕ್ಷಸ್ತನುಂ ಶಾಪತೋ ವಿತ್ತ ಪಶ್ಯ ।**

**ಕೃಷ್ಣಸ್ಪರ್ಶಾಚ್ಛುದ್ಧಭಾವಾ ಪುನರ್ದಿವಂ**

**ಯಯೌ ತುಷ್ಟೇ ಕಿಮಲಭ್ಯಂ ರಮೇಶ ॥೮೮॥**

ಊರ್ವಶಿ ಕುಬೇರನ ಜೊತೆಯಲ್ಲಿರತಕ್ಕವಳು. ಒಂದು ದಿನ ಅವಳು ತುಂಬುರನ ಜೊತೆಗೆ ರಮಿಸಿದಳು. ಇದನ್ನು ತಿಳಿದ ಕುಬೇರನು "ನೀನು ರಾಕ್ಷಸಿಯಾಗು" ಎಂದು ಶಾಪವಿತ್ತನು. ಕೃಷ್ಣನ ಸ್ಪರ್ಶಮಾತ್ರದಿಂದ ಶುದ್ಧಳಾಗುವಿ ಎಂದು ಹೇಳಿದ್ದನು.

ಕೇವಲ ಶ್ರೀಕೃಷ್ಣನ ಸ್ಪರ್ಶಕ್ಕಾಗಿ ಆ ಊರ್ವಶಿ ಪೂತನಿಯಲ್ಲಿ ಪ್ರವೇಶಿಸಿದ್ದಳು. ಇಂದು ಕೃಷ್ಣನ ಸ್ಪರ್ಶದಿಂದ ಶುದ್ಧಳಾಗಿ ಸ್ವರ್ಗವನ್ನು ಸೇರಿದಳು.

ಲಕ್ಷ್ಮೀಪತಿಯ ಅನುಗ್ರಹಕ್ಕೆ ಯಾವುದು ಅಸಾಧ್ಯ?

**ಯದಾಪ ದೇವಶ್ಚತುರೋಽಥ ಮಾಸಾನ್**

**ತದೋಪ ನಿಷ್ಕ್ರಾಮಣಮಸ್ಯ ಚಾಸೀತ್ ।**

**ಜನ್ಮರ್ಕ್ಷ ಮಸ್ಮಿನ್‌ದಿನ ಏವಚಾಸೀತ್**

**ಪ್ರಾತಃ ಕಿಂಚಿತ್ತತ್ರ ಮಹೋತ್ಸವೋಽಭೂತ್ ॥೮೯॥**

ಮಗು ಶ್ರೀಕೃಷ್ಣನಿಗೆ ನಾಲ್ಕು ತಿಂಗಳು ತುಂಬಿದವು. ನಿಷ್ಕ್ರಮಣ ಸಂಸ್ಕಾರ, ಅಂದರೆ (ಬಾಣಂತಿ - ಮೊದಲ ಸಲ ಮನೆ ಬಿಟ್ಟು ಹೊರಗೆ ಹೋಗುವುದು ಇಂದು ಆಚರಿಸುವ "ಗುಡಿಗೆ ಹೋಗುವ" ಸಂಪ್ರದಾಯವಿರಬಹುದೇ?) ಮುಗಿಯಿತು. ಅಂದಿನ ಪ್ರಾತಃಕಾಲ ರೋಹಿಣಿ ನಕ್ಷತ್ರ (ಜನ್ಮನಕ್ಷತ್ರ) ಸ್ವಲ್ಪೇ ಸಮಯವಿದ್ದ ಪ್ರಯುಕ್ತ ಆಗಲೇ ಮಹೋತ್ಸವನ್ನು ಏರ್ಪಡಿಸಿದರು.

**ತದಾ ಶಯಾನಃ ಶಕಟಸ್ಯ ಸೋಽಥಃ**

**ಪದಾಕ್ಷಿಪತ್ತಂ ದಿತಜಂ ನಿಹಂತುಮ್ ।**

**ಆನಃ ಸಮಾವಿಶ್ಯ ದಿತೇಃ ಸುತೋಽಸೌ**

**ಸ್ಥಿತಃ ಪ್ರತೀ ಪಾಯ ಹರೇಃ ಸುಪಾಪಃ ॥೯೦॥**

ಆ ಮಹೋತ್ಸವಕಾಲದಲ್ಲಿ ಶ್ರೀಕೃಷ್ಣನು ಬಂಡಿಯ ಕೆಳಗೆ ಮಲಗಿದ್ದನು. ಆ ಸಮಯದಲ್ಲಿ ಒಬ್ಬ ರಾಕ್ಷಸನು ಕೊಲ್ಲುದಕ್ಕಾಗಿಯೇ ಬಂದು ಆ ಬಂಡಿಯ ಅಕ್ಷದಲ್ಲಿ ಪ್ರವೇಶಮಾಡಿದನು. ಅವನು ಶ್ರೀಕೃಷ್ಣನ ದ್ವೇಷಿಯೂ ಆಗಿದ್ದನು. ಆ ಅಸುರನ್ನು ಸಂಹರಿಸಲೆಂದೇ ಶ್ರೀಕೃಷ್ಣನು ತನ್ನ ಪಾದದಿಂದ ಅದಕ್ಕೆ ಒದ್ದನು.

**'ಸ ತೆತ್ರೈಕೇನ ಪಾದೇನ ಶಕಟಂ ಪರ್ಯವರ್ತಯತ್'**

**(ಹರಿವಂಶ)**

ಈ ವಾಕ್ಯವು ಕೂಡ ಮೇಲಿನ ಭಾವನೆಯನ್ನು ಪುಷ್ಟೀಕರಿಸುತ್ತದೆ.

**ಕ್ಷಿಪ್ತೋಽನಸಿಸ್ಥಃ ಶಕಟಾಕ್ಷನಾಮಾ**
**ಸ ವಿಷ್ಣು ನೇತ್ರಾ ಸಹಿತಃ ಪಪಾತ ।**
**ಮಮಾರಚಾಶು ಪ್ರತಿಭಗ್ನ ಗಾತ್ರೋ**
**ವ್ಯತ್ಯಸ್ತ ಚಕ್ರಾಮಭೂದನಶ್ಚ ॥೯೧॥**

ಆ ಬಂಡಿಯಲ್ಲಿ ಅಡಗಿದ್ದವನು ಅವನೇ ಶಕಟಾಕ್ಷನೆಂಬ ದೈತ್ಯನು. ಅವನು ಶ್ರೀಕೃಷ್ಣನ ಪಾದಸ್ಪರ್ಶವಾದ ಕೂಡಲೆ ಕೆಳಗೆ ಬಿದ್ದನು. ಅವನ ಅಂಗಾಂಗಗಳು ಭಗ್ನವಾದವು. ಬಂಡಿಯೂ ಚೂರು ಚೂರಾಯಿತು. ಅದರ ಚಕ್ರ, ಅಕ್ಷ ಇನ್ನಿತರ ಭಾಗಗಳು ಅಸ್ತವ್ಯಸ್ತವಾದವು.

**ಸಾ ಸಂಭ್ರಮಾತ್ತಂ ಪ್ರತಿಗೃಹ್ಯಶಂಕಯಾ**
**ಕೃಷ್ಣಂ ಯಶೋದಾ ದ್ವಿಜವರ್ಯಸೂಕ್ತಿಭಿಃ ।**
**ಸಂಸ್ನಾಪಯಾಮಾಸ ನದೀತಟಾಸ್ತದಾ**
**ಸಮಾಗತಾನಂದ ವಚೋಭಿ ತರ್ಜಿತಾ ॥೯೨॥**

ನಂದನು ಬಂದು ಸಿಟ್ಟಿನಿಂದ ಆಡಿದ ಮಾತುಗಳನ್ನು ಕೇಳಿದ ಯಶೋದೆಯು, ಆ ಸಂಭ್ರಮದ ಕಾರ್ಯ ಸ್ವಲ್ಪ ನಿಲ್ಲಿಸಿ, ಕೃಷ್ಣನಿಗೆ ಏನಾಯಿತೋ ಎಂಬ ಶಂಕೆಯಿಂದ ಓಡಿಬಂದು ಆ ಕೂಸನ್ನು ಎತ್ತಿಕೊಂಡಳು. ಬ್ರಾಹ್ಮಣರ ಹತ್ತಿರ ಬಂದು ಭಯಪರಿಹಾರಕ ಮಂತ್ರಗಳನ್ನು ಹೇಳಿಸಿ ನದಿಯಲ್ಲಿ ಸ್ನಾನ ಮಾಡಿಸಿದಳು.

**ಹತ್ವಾ ತು ತಂ ಕಂಸಭೃತ್ಯಂ ಸ ಕೃಷ್ಣಃ**
**ಶಿಶ್ಯೇ ಪುನಃ ಶಿಶುವತ್ಸರ್ವಶಾಸ್ತಾ ।**
**ಏವಂ ಗೋಪಾನ್ ಪ್ರೀಣಯನ್ ಬಾಲಕೇಲೀ**
**ವಿನೋದತೋ ನ್ಯವಸತ್ತತ್ರ ದೇವಃ ॥೯೩॥**

ಆ ಶ್ರೀಕೃಷ್ಣನು ಕಂಸನಭೃತ್ಯವನ್ನು ಕೊಂದನು. ಸರ್ವರನ್ನೂ ನಿಯಮಿಸುವ ಶಕ್ತಿಯುಳ್ಳವನಾದರೂ ಪುನಃ ಶಿಶುರೂಪದಿಂದ ಆಡಹತ್ತಿದನು. ಈ ರೀತಿಯಾಗಿ ಗೋಪಾಲಕರ ಸಂತೋಷಕ್ಕಾಗಿ ತನ್ನ ಬಾಲಲೀಲೆಗಳನ್ನು ತೋರುತ್ತ ಪರಮಾತ್ಮನು ಅಲ್ಲಿ ಇರಹತ್ತಿದನು.

ಪಾಂಡವರ ವೃತ್ತಾಂತ

**ವಿವರ್ಧಮಾನೇ ಲೋಕೈರ್ದೃಷ್ಟ್ಯೈವ ಕೃಷ್ಣೇ**
**ಪಾಂಡುಃ ಪುನಃ ಪ್ರಾಹ ಪೃಥಾಮಿದಂ ವಚಃ ।**
**ಧರ್ಮಿಷ್ಠೋ ನೌ ಸೂನುರಗ್ರೇ ಬಭೂವ**
**ಬಲದ್ವಯ ಜ್ಯೇಷ್ಠ ಉತಾಪರಶ್ಚ ॥೯೪॥**

ಶ್ರೀಕೃಷ್ಣನು ಲೋಕದ ದೃಷ್ಟಿಯಲ್ಲಿ (ಅಜ್ಞರ ದೃಷ್ಟಿಯಲ್ಲಿ) ಬೆಳೆಯ ಹತ್ತಿದನು.

ಮತ್ತೆ ಪಾಂಡುರಾಜನು ಕುಂತಿಯನ್ನು ಕರೆದು ಹೀಗೆ ಹೇಳಿದನು. "ನಮಗೆ ಹಿರಿಯ ಮಗನು ಧರ್ಮಿಷ್ಠನೇ ಹುಟ್ಟಿದ್ದಾನೆ. ಎರಡನೆಯ ಮಗನು ಜ್ಞಾನ ಮತ್ತು ಬಾಹುಬಲ ಎರಡರಲ್ಲೂ ಶ್ರೇಷ್ಠನಾಗಿದ್ದಾನೆ".

ಇಲ್ಲಿ ಶ್ರೀಮದಾಚಾರ್ಯರು ಶ್ರೀಕೃಷ್ಣನ ಬೆಳೆವಣಿಗೆಯನ್ನು ಕುರಿತು, 'ವಿವರ್ಧಮಾನೇ ಲೋಕದೃಷ್ಟ್ಯೈವ' ಎಂಬ ಪದ ಬಳಸಿದ್ದಾರೆ. ಅಂದರೆ ಶ್ರೀಸಾಮಾನ್ಯರಿಗೆ ಬೆಳೆದಂತೆ ಕಾಣುತ್ತಿದ್ದನು ಎಂದು. ನಿಜವಾಗಿ ಶ್ರೀಕೃಷ್ಣನಿಗೆ ಬೆಳವಣಿಗೆ ಎಲ್ಲಿಂದ ಬಂತು? ಏಕೆಂದರೆ ಪರಮಾತ್ಮನಿಗೆ "ವೃದ್ಧಿ-ಹ್ರಾಸಗಳಲ್ಲಿ' ಜನನ–ಮರಣಗಳಿಲ್ಲ ಎಂಬುದು ಸರ್ವವಿದಿತ.

ರಾಮಾಯಣ ಪ್ರಕರಣದಲ್ಲೂ ಕೂಡ ಶ್ರೀರಾಮನ ಬೆಳವಣಿಗೆಯನ್ನು ಕುರಿತು ಬರೆಯುವಾಗ ಇದೇ ಭಾವನೆಯ ಪದಗಳನ್ನೇ ಆಚಾರ್ಯರು ಬಳಸಿದ್ದಾರೆಂಬುದನ್ನು ವಾಚಕರು ಗಮನಿಸಬೇಕು.

**ಯದ್ಯೇಕ ಏವಾತಿ ಬಲೋಪಪನ್ನೋ**
**ಭವೇತ್ತದಾತೇನ ಪರಾವಮರ್ದೇ ।**
**ಪ್ರವರ್ತಮಾನೇ ಸ್ವಪುರಂ ಹರೇಯು–**
**ಶ್ಚಾರ್ಯಾತ್ಪರೇ ತದ್ದ್ವಯ ಮತ್ರಯೋಗ್ಯಮ್ ॥೯೫॥**

ಯಾವ ರಾಜನು ಬಲಶಾಲಿಯಾಗಿರುವನೋ ಆಗ ಅವನು ಅನಿವಾರ್ಯವಾಗಿ ಶತ್ರುಗಳೊಡನೆ ಹೋರಾಡಬೇಕಾಗುತ್ತದೆ. ಆಗ ಅವನ ರಾಜ್ಯದ ರಕ್ಷಣೆಗೆ ಯಾರೂ ಇರುವುದಿಲ್ಲ. ಅದರಿಂದ ಶತ್ರುಗಳು ರಾಜ್ಯವನ್ನು ಅಪಹರಿಸಬಹುದು. ಅದಕ್ಕಾಗಿ ಇನ್ನೊಬ್ಬ ಮಗನು (ಜ್ಞಾನ–ಶಕ್ತಿ) ಬಲದ್ವಯಗಳಿಂದ ಕೂಡಿದವನು ಯೋಗ್ಯನಾಗಬೇಕು. ಈಗ,

**ಶಸ್ತ್ರಾಸ್ತ್ರ ವಿದ್ವೀರ್ಯವಾನ್ ಸುತೋಽನ್ಯೋ**
**ಭವೇದ್ದೇವಂ ತಾದೃಶಮಾಹ್ವಯಾತಃ ।**
**ಶೇಷಸ್ತವಭ್ರಾತೃ ಸುತೋಽಭಿಜಾತ–**
**ಸ್ತಸ್ಮಾನ್ನಾ ಸೌ ಸುತದಾನಾಯ ಯೋಗ್ಯಃ ॥೯೬॥**

ನಮಗೆ ಅಸ್ತ್ರ ಮತ್ತು ಶಸ್ತ್ರ ವಿದ್ಯೆಗಳಲ್ಲಿ ವೀರ್ಯವತ್ತಾದ ಮಗನು ಬೇಕಾಗಿದೆ. ಕಾರಣ ಅಂತಹ ಮಗನನ್ನು ಕೊಡಲು ಯೋಗ್ಯನಾದ ದೇವನನ್ನು ಕರೆ. ಶೇಷನು ನಿನ್ನ ಸಹೋದರನಿಗೆ ಮಗನಾಗಿ ಹುಟ್ಟಿದ್ದಾನೆ. ಕಾರಣ ಅವನು ನಿನಗೆ ಮಗನ್ನು ಕೊಡಲು ಯೋಗ್ಯನಲ್ಲ.

ಇನ್ನು

**ನ ವೈ ಸುಪರ್ಣಃ ಸುತದೋ ನರೇಷು**
**ಪ್ರಜಾಯತೇ ಚಾಸ್ಯ ಯತಸ್ತಥಾಜ್ಞಾ ।**
**ಕೃತಾ ಪುರಾ ಹರಿಣಾ ಶಖರಸ್ತು**
**ಕ್ರೋಧಾತ್ಮಕಃ ಪಾಲನೇ ನೈವ ಯೋಗ್ಯಃ ॥೯೭॥**

ಗರುಡನು ನರರಿಗೆ ಮಗನಾಗಲು ಯೋಗ್ಯನಲ್ಲ. ಅಲ್ಲದೆ ನೀನು ಭೂಮಿಯಲ್ಲಿ ಅವತರಿಸಬೇಡ ಎಂದು ಶ್ರೀಹರಿಯ ಆಜ್ಞೆಯಾಗಿದೆ.

ಇನ್ನು ಶಂಕರನೋ! ಅವನು ಮಹಾ ಕೋಪಿಷ್ಟನು. ಅಂಥವನು ಪ್ರಜೆಗಳನ್ನು ಪಾಲಿಸಲು ಅಯೋಗ್ಯನು.

ಕಾರಣ,

**ಅತೋ ಮಹೇಂದ್ರೋ ಬಲವಾನನಂತರ-**
**ಸ್ತೇಷಾಂ ಸಮಾಹ್ವಾನಮಿಹಾರ್ಹತಿ ಸ್ವರಾಟ್ ।**
**ಇತೀರಿತಾ ಸಾಹ್ವಾಯದಾಶು ವಾಸವಂ**
**ತತಃ ಪ್ರಜಜ್ಞೇ ಸ್ವಯಮೇವ ಶಕ್ರಃ ॥೯೮॥**

ಈಗ ಶೇಷ, ಗರುಡ, ರುದ್ರ ಇವರನಂತರ ಬಲದಲ್ಲಿ, ಜ್ಞಾನದಲ್ಲಿ ದೇವೇಂದ್ರನೇ ಆಹ್ವಾನಿಸಲು ಯೋಗ್ಯನು ಎಂದು ಪಾಂಡುರಾಜನು ಹೇಳಿದ್ದನ್ನು ಕೇಳಿ ಕುಂತಿಯು ದೇವೇಂದ್ರನನ್ನು ಕರೆದಳು. ತತ್‌ಕ್ಷಣದಲ್ಲಿ (ಶಕ್ರ) ದೇವೇಂದ್ರನು ಪ್ರತ್ಯಕ್ಷನಾಗಿ ತಾನೇ ಮಗನಾಗಿ ಹುಟ್ಟಿದನು.

ವಿ.ವಿ. ಮೇಲಿನ ಶ್ಲೋಕಗಳನ್ನು ಲಕ್ಷ್ಯವಿಟ್ಟು ಓದಿದಾಗ, ಶ್ರೀಮದಾಚಾರ್ಯರು ಪಾಂಡುರಾಜನಿಂದ ದೇವತೆಗಳ ತಾರತಮ್ಯ ಸ್ಪಷ್ಟವಾಗಿ ಹೇಳಿದ್ದಾರೆ ಎಂದು ವ್ಯಕ್ತವಾಗುತ್ತದೆ.

ಇದೇ ಸಮಯದಲ್ಲಿ ಶ್ರೀಶ್ರೀ ವಾದಿರಾಜರ ಕೃತಿ 'ರುಕ್ಮಿಣೀಶ ವಿಜಯದಲ್ಲಿ' ಲಕ್ಷ್ಮೀದೇವಿಯರು ಶ್ರೀಹರಿಯನ್ನೇ ವರಿಸಲು ನಿಶ್ಚಯಿಸಿ ಇತರ ದೇವತೆಗಳಲ್ಲಿ ಒಂದಲ್ಲ ಒಂದು ದೋಷವಿದ್ದ, ಕಾರಣ ಶ್ರೀಹರಿಯೇ ನಿರ್ದೋಷಿ, ಆತನನ್ನೇ ವರಿಸುತ್ತೇನೆ" ಎಂದು ಬಣ್ಣಿಸಿದ ಶ್ಲೋಕಗಳು ಓದುಗರ ನೆನಪಿಗೆ ಬಾರದೆ ಇರದು.

**ಸ ಚಾರ್ಜುನೋ ನಾಮ ನರಾಂಶಯುಕ್ತೋ**
**ವಿಷ್ಣ್ವಾವೇಶೀ ಬಲವಾನಸ್ತ್ರವೇತ್ತಾ ।**
**ರೂಪನ್ಯಃ ಸ್ಯಾ ತ್ತ್ವಸುರಿತ್ಯಚ್ಯಮಾನಾ**
**ಭರ್ತಾ ಕುಂತೀ ನೇತಿ ತಂ ಪ್ರಾಹ ಧಾರ್ಮಾತ್ ॥೯೯॥**

ಆ ಮಗನೇ ಅರ್ಜುನನು. ಅವನಲ್ಲಿ 'ನರಾಂಶ'ವಿದೆ. ಜೊತೆಯಲ್ಲಿ 'ವಿಷ್ಣುವಿನ ಆವೇಶವೂ' ಉಂಟು. ಕಾರಣ ಆತನು ಅಸ್ತ್ರ ಶಸ್ತ್ರ

ವಿದ್ಯೆಗಳಲ್ಲೂ ಬಲದಲ್ಲೂ ಪ್ರಖ್ಯಾತನು. ಒಳ್ಳೆಯ ನಿಪುಣನು. ಸುಂದರ ರೂಪವೂ ಇದೆ. ಆದರೂ ಪಾಂಡುರಾಜನು ಇನ್ನೊಬ್ಬ ಮಗನಿಗಾಗಿ ಅಪೇಕ್ಷಿಸಿದಾಗ ಕುಂತಿಯು, "ನೀವು ಹೇಳುವುದು ಧರ್ಮವಾಗುವುದಿಲ್ಲ" ಸ್ಪಷ್ಟವಾಗಿ ಉತ್ತರಿಸಿದ್ದಾಳೆ.

ಏಕೆಂದರೆ, ಕೇವಲ ವಿಷಯದ ಆಶೆಗಾಗಿ ಪರಪುರುಷನನ್ನು ಸ್ಪರ್ಶಿಸಿದರೂ ಅದು ವ್ಯಭಿಚಾರ. "ಮಹತ್ವದ ಕಾರಣವಿಲ್ಲದೆ ನಿಯೋಗ ಪದ್ಧತಿಗೆ ಅನುಮತಿಯಿಲ್ಲ" ಇದು ಧರ್ಮಶಾಸ್ತ್ರ.

ಬೃಹಸ್ಪತ್ಯಾಚಾರ್ಯರ ವೃತ್ತಾಂತ.

**ಬೃಹಸ್ಪತಿಃ ಪೂರ್ವಮಭೂದ್ಧರೇಃ ಪದಂ**
**ಸಂಸೇವಿತುಂ ಪವನಾವೇಶ ಯುಕ್ತಃ ।**
**ಸ ಉದ್ಧವೋ ನಾಮ ಯದು ಪ್ರವೀರಾತ್**
**ಜಾತೋ ವಿದ್ವಾನುಪಗವನಾಮ ಧೇಯಾತ್ ॥೧೦೦॥**

ಪೂರ್ವದಲ್ಲಿಯೇ ಬೃಹಸ್ಪತ್ಯಾಚಾರ್ಯರು ಶ್ರೀಹರಿಯ ಸೇವೆಗಾಗಿಯೇ ಅವತರಿಸಿದ್ದಾರೆ. ಈಗ ಪುನಃ ಯದುಪ್ರವೀರರಲ್ಲಿ ಶ್ರೇಷ್ಠರು, ವಿದ್ವಾಂಸರು ಆದ ಉಪಗವರಲ್ಲಿ 'ಉದ್ಧವ'ರಾಗಿ ಅವತರಿಸಿದ್ದಾರೆ. ಅವರಲ್ಲಿ ಪವನನ ಆವೇಶವುಂಟು.

ಬೃಹಸ್ಪತ್ಯಾಚಾರ್ಯರು ಒಮ್ಮೆ ದ್ರೋಣರಾಗಿ ಅವತರಿಸಿದ ಮೇಲೆ ಪುನಃ ಉದ್ಧವರಾಗಿ ಏಕೆ ಹುಟ್ಟಿದರು? ಅದಕ್ಕೆ ಕಾರಣ.

**ದ್ರೋಣಾತ್ಮಕಂ ನಾತಿತರಾಂ ಸ್ವಸೇವಕಂ**
**ಕುರ್ಯಾದ್ಧರಿರ್ಮಾಮಿತಿ ಭೂಯ ಏವ ।**
**ಸ ಉದ್ಧವಾತ್ಮಾವತಾರ ಯಾದವೇಷ್ವಾ**
**ಸೇವನಾರ್ಥಂ ಪುರುಷೋತ್ತಮಸ್ಯ ॥೧೦೧॥**

ದ್ರೋಣನಾಗಿ ನಾನು ಶ್ರೀಹರಿಯ ಪಾದಸೇವೆ ಮತ್ತು ಅಂತರಂಗದ ಸೇವೆಯನ್ನು ಮಾಡಲಾರೆ. ದ್ರೋಣನಾದುದರಿಂದ ಶ್ರೀಹರಿಯ ಭೂ

ಭಾರ ಇಳುಹುವ ಕಾರ್ಯ ಆಗಬಹುದು. ಕೇವಲ ಪುರುಷೋತ್ತಮನ ಸೇವೆಗಾಗಿಯೇ ಇಂದು ಉದ್ಧವರಾಗಿದ್ದಾರೆ.

ಅನೇಕ ದೇವತೆಗಳು ತಮ್ಮ ಸಾಧನೆ ಮತ್ತು ಲೋಕೋದ್ಧಾರಕ್ಕಾಗಿ ಒಂದೇ ಅಥವಾ ಬೇರೆ ಕಾಲಕ್ಕೆ ಅಂಶರೂಪದಿಂದ ಬೇರೆ ಬೇರೆ ಸ್ಥಳಗಳಲ್ಲಿ ಹುಟ್ಟಿ ಕಾರ್ಯ ಸಾಧಿಸಿದ್ದುಂಟು.

ಉದಾ:- ಇಂದ್ರ, ಅರ್ಜುನ ಮತ್ತು ಟೀಕಾಚಾರ್ಯರು

ರುದ್ರ, ಅಶ್ವತ್ಥಾಮರು, ದುರ್ವಾಸರು, ಶುಕರು, ಉದ್ಧವ.

**ಬೃಹಸ್ಪತೇರೇವ ಸ ಸರ್ವವಿದ್ಯಾ**
**ಅವಾಪ ಮಂತ್ರೀ ನಿಪುಣಃ ಸರ್ವವೇತ್ತಾ ।**
**ವರ್ಷತ್ರಯೇ ತತ್ಪರತಃ ಸ ಸಾತ್ಯಕೀ**
**ರ್ಜಜ್ಞೇ ದಿನೇ ಚೇಕೀ ತಾನಶ್ಚ ತಸ್ಮಿನ್ ॥೧೦೨॥**

ಬೃಹಸ್ಪತ್ಯಾಚಾರ್ಯರೇ ಉದ್ಧವನಾದ ಪ್ರಯುಕ್ತ, ಸಕಲ ವಿದ್ಯೆಗಳಲ್ಲಿ ಪರಿಣಿತನಾದನು. ಮಂತ್ರಿಕಾರ್ಯ, ಸಂಧಿ ವಿಗ್ರಹಗಳಲ್ಲಿ ಬಹು ಚತುರನು ಉದ್ಧವನ ಜನನದ ಮೂರು ವರ್ಷಗಳ ನಂತರ ಸಾತ್ಯಕೀ ಮತ್ತು ಅದೇ ದಿನ ಚೇಕಿತಾನರೂ ಜನ್ಮ ತಾಳಿದರು.

**ಮರುತ್ಸು ನಾಮ ಪ್ರವಹೋ ಯದುಷ್ವಭೂತ್**
**ಸ ಚೇಕೀತಾನೋ ಹರಿಸೇವಾನಾರ್ಥಮ್ ।**
**ತದೈವ ಜಾತೋ ಹೃದಿಕಾತ್ಮ ಜೋऽಪಿ**
**ವರ್ಷತ್ರಯೇ ತತ್ಪರತೋ ಯುಧಿಷ್ಠಿರಃ ॥೧೦೩॥**

'ಪ್ರವಹ'ನೆಂಬ ವಾಯು, ಶ್ರೀಹರಿಯ ಸೇವೆಗಾಗಿಯೇ ಚೇಕಿತಾನನಾಗಿ ಹುಟ್ಟಿದ್ದಾನೆ. ಅದೇ ದಿನದಂದು ಹೃದಿತನ ಮಗ ಕೃತವರ್ಮನೂ ಹುಟ್ಟಿದ್ದಾನೆ. ಮೂರು ವರ್ಷಗಳು ಕಳೆದ ಮೇಲೆ ಯುಧಿಷ್ಠಿರನ ಜನ್ಮವಾಗಿದೆ.

**ತತೋऽಬ್ದತೋ ಭೂಭರಸಂಹೃತೌ**
**ಹರೇರಂಗತ್ವಮಾಪ್ತುಂ ಗಿರಿಶೋऽಜನಿಷ್ಟ ।**

**ಅಶ್ವತ್ಥಾಮಾ ನಾಮತೋ ಅಶ್ವಾದ್ವನಿಂ ಸ**
**ಯಸ್ಮಾಚ್ಚಕ್ರೇ ಜಾಯಮಾನೋ ಮಹಾತ್ಮಾ ॥೧೦೪॥**

ಯುಧಿಷ್ಠಿರನು ಹುಟ್ಟಿದ ವರ್ಷದ ನಂತರ, ಭೂಭಾರ ಇಳುಹುವ ಶ್ರೀಹರಿಯ ಕಾರ್ಯದಲ್ಲಿ ಅಂಗಭೂತರಾಗಿ ಸೇವೆಸಲ್ಲಿಸಿ ಕೃತಾರ್ಥರಾಗಲು ರುದ್ರ ದೇವರೇ ಜನ್ಮ ತಾಳಿದರು. ಅವರೇ 'ಅಶ್ವತ್ಥಾಮರು'

ಅವರು ಹುಟ್ಟುತ್ತಲೇ ಅಶ್ವದಂತೆ ಧ್ವನಿಗೈದ ಕಾರಣ ಜನರು ಆ ಮಗುವನ್ನು ಅಶ್ವತ್ಥಾಮನೆಂದೇ ಕರೆದರು.

**ಸ ಸರ್ವ ವಿದ್ಯಲವಾನಸ್ತ್ರ ವೇತ್ತಾ**
**ಕೃಪಸ್ವಸಾ ಯಾಂ ದ್ರೋಣವೀಯೋದ್ಭವೋऽಭೂತ್ ।**
**ಸುಯೋಧನಸ್ತಚ್ಚತುರ್ಥೇऽಹ್ನಿ ಜಾತ**
**ಸ್ತಸ್ಯಾಪರೇದ್ಯುರ್ಭೀಮಸೇನ ಸುಧೀರಃ ॥೧೦೫॥**

ಅಶ್ವತ್ಥಾಮನು ಸಕಲವಿದ್ಯೆಗಳಲ್ಲಿ ಮತ್ತು ಅಸ್ತ್ರವಿದ್ಯೆಯಲ್ಲೂ ನಿಪುಣನಾದನು. ಕೃಪಾಚಾರ್ಯರ ತಂಗಿಯಾದ ಕೃಪೆಯಲ್ಲಿ ದ್ರೋಣಾಚಾರ್ಯರ ವೀರ್ಯದಿಂದ ಹುಟ್ಟಿದನು. ನಾಲ್ಕು ದಿನಗಳನಂತರ ಸುಯೋಧನನು ಹುಟ್ಟಿದನು. ಒಂದು ವರ್ಷದ ನಂತರ ಸುಧೀರನಾದ ಭೀಮನು ಹುಟ್ಟಿದ್ದಾನೆ.

**ಯದಾ ಸ ಮಾಸದ್ವಿತಯೀ ಬಭೂವ**
**ತದಾ ರೋಹಿಣ್ಯಾಂ ಬಲದೇವೋऽಭಿಜಾತಃ ।**
**ಬಲೀ ಗುಣಾಢ್ಯಃ ಸರ್ವವೇದೀಯ ಏವ**
**ಸೇವಾಖಿನ್ನೋ ಲಕ್ಷ್ಮಣೋऽಗ್ರಜೇ ಹರೇರ್ಭೂತ್ ॥೧೦೬॥**

ಭೀಮನು ಹುಟ್ಟಿ ಎರಡು ತಿಂಗಳು ಕಳೆದ ಮೇಲೆ ರೋಹಿಣಿ ದೇವಿಯರಲ್ಲಿ ಬಲದೇವನ ಜನ್ಮವಾಗಿದೆ. ಅತನು ಬಲಶಾಲಿ, ಗುಣಾಢ್ಯ ಮತ್ತು ಸರ್ವವನ್ನು ಬಲ್ಲವನೂ ಆಗಿದ್ದನು. ಹಿಂದೆ ರಾಮಾವತಾರದಲ್ಲಿ ಲಕ್ಷ್ಮಣನಾಗಿ ಸೇವೆ ಮಾಡಿ ಖಿನ್ನನಾದವನೇ ಇಂದು ಪರಮಾತ್ಮನಿಗೆ ಅಣ್ಣನಾಗಿ ಹುಟ್ಟಿದ್ದಾನೆ.

ಈಗಲೂ ತಮ್ಮನಾದರೆ, ಪುನಃ ಅದೇ ಪ್ರಸಂಗ ಬರಬಹುದು ಎಂದು ಬಗೆದು, ಅಣ್ಣನಾಗುವುದೇ ಒಳಿತೆಂದು ಮೊದಲು ಹುಟ್ಟಿರಬಹುದು.

ಲಕ್ಷ್ಮಣನು ಹೀಗೆ ಏಕೆ ತಿಳಿದನು? ಸಮಾಧಾನ.

ಒಬ್ಬ ವ್ಯಕ್ತಿಗೆ ಆತನ ಜೀವನ ಯೋಗ್ಯತೆಗಿಂತಲೂ ಪುಣ್ಯ ಅಧಿಕ ಸಂಗ್ರಹವಾದರೆ, ಭಗವಂತನಿಗೆ ಅದು ಇಷ್ಟವಿಲ್ಲ. ಆ ಪುಣ್ಯವನ್ನು ಯಾವ ರೀತಿಯಿಂದಲಾದರೂ ಹ್ರಾಸಮಾಡಿಸುತ್ತಾನೆ. ಇಂಥ ಘಟನೆಗಳು ಪುರಾಣಗಳಲ್ಲಿ ಅನೇಕವುಂಟು. ಈ ನಿಯಮಕ್ಕೆ ಲಕ್ಷ್ಮಣನೂ ಹೊರತಲ್ಲ. ಶ್ರೀಹರಿಯೇ ಲಕ್ಷ್ಮಣನಿಗೆ ಆ ರೀತಿಯ ವಿಚಾರಗಳನ್ನಿತ್ತಿದ್ದಾನೆ.

**ಯದಾ ಹಿ ಪುತ್ರಾನ್ ವಿನಿಹಂತು ಮೇ ತೌ**
**ಸಹೈವ ಬದ್ಧೌ ಗತಿ ಶೃಂಖಲಾಯಾಮ್ ।**
**ಕಂಸೇನಾಪಾಪೌ ದೇವಕೀ ಶೂರಪುತ್ರೌ**
**ವಿನಿಯೋಜಿತಾ: ಶೌರಿಭಾರ್ಯಾ: ಪುರಾಕ್ಷ ॥೧೦೭॥**

ಇತ್ತ ಕಂಸನು ದೇವಕಿಯ ಪುತ್ರರನ್ನೇ ಕೊಲ್ಲಬೇಕೆಂದು ನಿಶ್ಚಯಿಸಿದ್ದನು. ಆದಕ್ಕಾಗಿಯೇ ಅವನು ವಸುದೇವ-ದೇವಕಿಯರನ್ನು ಮಾತ್ರ ಬಂಧಿಸಿ ಶೃಂಖಲೆಗಳಿಂದ ಬಿಗಿದು ಕಾರಾಗೃಹದಲ್ಲಿಟ್ಟಿದ್ದನು

ವಸುದೇವನ ಇತರ ಪತ್ನಿಯರನ್ನೂ ಅಲ್ಲಲ್ಲಿ ಬೇರೆ ಬೇರೆಯಾಗಿ ಇಡಲು ವ್ಯವಸ್ಥೆ ಮಾಡಿದ್ದನು.

**ವಿನಿಶ್ಚಯಾರ್ಥಂ ದೇವಕೀ ಗರ್ಭಜಾನಾಮನ್ಯಾ**
**ಭಾರ್ಯಾ ಧೃತಗರ್ಭಾ: ಸ ಕಂಸ: ।**
**ಸ್ಥಾನಾಂತರೇ ಪ್ರಸವೋ ಯಾವದಾಸಾಂ**
**ಸಂಸ್ಥಾಪಯಾಮಾಸ ಸುಪಾಪ ಬುದ್ಧಿ: ॥೧೦೮॥**

'ದೇವಕಿಯ ಗರ್ಭದಿಂದಲೇ ಈ ಮಗು ಹುಟ್ಟಿದ್ದು'. ಇದನ್ನು ನಿಶ್ಚಯಿಸಿಕೊಳ್ಳುವ ಉದ್ದೇಶದಿಂದ ಆ ಕಂಸನು ಗರ್ಭಧರಿಸಿದ ವಸುದೇವನ ಇತರ ಪತ್ನಿಯನ್ನು ದೂರದಲ್ಲಿಟ್ಟು ಹೆರಿಗೆಯ ವ್ಯವಸ್ಥೆ

ಮಾಡಿದ್ದನು. ಇದು ಕಂಸನ ಕಪಟ ಮತ್ತು ಪಾಪಬುದ್ಧಿಯನ್ನು ತೋರುತ್ತದೆ. (ಒಂದು ವೇಳೆ ಇಬ್ಬರು ಗರ್ಭಿಣಿಯರು ಒಂದೇ ಸ್ಥಳದಲ್ಲಿದ್ದರೆ, ಮಕ್ಕಳನ್ನು ಬದಲಾಯಿಸಬಹುದು ಎಂಬ ಶಂಕೆ ಅವನನ್ನು ಕಾಡುತ್ತಿತ್ತು.)

**ಹೇತೋರೇತಸ್ಮಾದ್ರೋಹಿಣೀ ನಂದಗೇಹೇ**
**ಪ್ರಸೂತ್ಯರ್ಥಂ ಸ್ಥಾಪಿತಾ ತೇನ ದೇವೀ ।**
**ಲೇಭೇ ಪುತ್ರಂ ಗೋಕುಲೇ ಪೂರ್ಣಚಂದ್ರ**
**–ಕಾಂತಾನನಂ ಬಲಭದ್ರಂ ಸುಶುಭ್ರಮ್ ॥೧೦೯॥**

ನಂದನ ಮನೆಯಲ್ಲಿಯೇ ಹಡೆಯಲಿ ಎನ್ನುವ ಉದ್ದೇಶದಿಂದ ರೋಹಿಣಿಯ ವ್ಯವಸ್ಥೆಯನ್ನು ಮಾಡಲಾಗಿತ್ತು. ಆ ದೇವಿಯು ಗೋಕುಲದಲ್ಲಿಯೇ ಪೂರ್ಣಚಂದ್ರನಂತೆ ಕಲೆಗಳಿಂದೊಪ್ಪುವ, ಒಳ್ಳೆಯ ಶುಭ್ರ ಬಣ್ಣದಿಂದ ಕೂಡಿದ ಬಲಭದ್ರನೆಂಬ ಮಗುವನ್ನು ಹಡೆದಳು.

**ಯದಾ ತ್ರಿಮಾಸಃ ಸ ಬಭೂವ ದೇವ–**
**ಸ್ತದಾ ವಿರಾಸೀತ್ ಪುರುಷೋತ್ತಮೋಽಜಃ ।**
**ತೌ ಕೃಷ್ಣಶೇಷಾವಾಪ್ತು ಕಾಮೌ ಸುತೌಹಿ**
**ತಪಶ್ಚಕ್ರಾತೇ ದೇವಕೀ ಶೂರ ಪುತ್ರೌ ॥೧೧೦॥**

ಬಲಭದ್ರನಿಗೆ ಮೂರು ತಿಂಗಳು ತುಂಬುತ್ತಿರುವಾಗಲೇ ಪುರುಷೋತ್ತಮನು ಆವಿರ್ಭೂತನಾದನು. ಕೃಷ್ಣ ಮತ್ತು ಶೇಷ ಇಬ್ಬರೂ ತಮ್ಮ ಮಕ್ಕಳಾಗಬೇಕೆಂದು ವಸುದೇವ ದೇವಕಿಯರು ತಪಸ್ಸು ಮಾಡಿದ್ದರು. ಅದಕ್ಕಾಗಿಯೇ ಮೊದಲು ಶೇಷನು ಕೆಲವು ದಿನ ಇಲ್ಲಿದ್ದನು. ಈಗ ಶ್ರೀಕೃಷ್ಣನು ಪೂರ್ಣರೂಪದಿಂದ ಪ್ರಕಟಗೊಂಡಿದ್ದಾನೆ.

**ವಿಷ್ಣ್ವಾವೇಶೀ ಬಲವಾನ್ಯೋ ಗುಣಾಧಿಕಃ**
**ಸ ಮೇ ಸುತಃ ಸ್ಯಾದಿತಿ ರೋಹಿಣೀ ಚ ।**
**ತೇಪೇ ತಪೋಽತೋ ಹರಿಶುಕ್ಲಕೇಶ**
**ಯುತಃ ಶೇಷೋ ದೇವಕೀ ರೋಹಿಣೀಜಃ ॥೧೧೧॥**

"ವಿಷ್ಣುವಿನ ಆವೇಶವುಳ್ಳವನು, ಬಲದಿಂದ ಅಧಿಕನು, ಸದ್ಗುಣಗಳಿಂದ ಕೂಡಿದವನು ನನಗೆ ಮಗನಾಗಬೇಕು" ಎಂದು ರೋಹಿಣಿಯೂ ತಪಸ್ಸು ಮಾಡಿದ್ದಳು. ಆ ತಪಸ್ಸಿನ ಫಲವಾಗಿಯೇ ಶೇಷನು ಶುಕ್ಲಕೇಶ ಆವೇಶಯುಕ್ತನಾಗಿ ಇತರ ಗುಣಗಳನ್ನು ಹೊಂದಿದವನಾಗಿ ದೇವಕಿ ಮತ್ತು ರೋಹಿಣಿಯರ ಗರ್ಭಗಳಲ್ಲಿ ಅವತರಿಸಿದನು.

"ದಶಮೇ ಮಾಸಿ ಜಾಯತೇ" ಇದು ಶ್ರುತಿ. ಈ ನಿಯಮವನ್ನು ಬಲರಾಮ ಮತ್ತು ಶ್ರೀಕೃಷ್ಣ ಇಬ್ಬರೂ ಅನುಸರಿಸಿದ್ದಾರೆ ಎಂಬುದನ್ನು ವಾಚಕರು ಗಮನಿಸಬೇಕು.

**ಅವರ್ಧತಾಸೌ ಹರಿಶುಕ್ಲ ಕೇಶ–**
**ಸಮಾವೇಶೀ ಗೋಕುಲೇ ರೌಹಿಣೇಯಃ ।**
**ಕೃಷ್ಣೋಽಪಿ ಲೀಲಾ ಲಲಿತಾಃ ಪ್ರದರ್ಶಯನ್**
**ಬಲದ್ವಿತೀಯೋ ರಮಯಾಮಾಸ ಗೋಷ್ಠಮ್ ॥೧೧೨॥**

ರೌಹಿಣೇಯನಾದ ಬಲರಾಮನು, ಶ್ರೀಹರಿಯ ಶುಕ್ಲಕೇಶ ಆವೇಶವುಳ್ಳವನಾಗಿ ಗೋಕುಲದಲ್ಲಿ ಬೆಳೆಯುತ್ತಿದ್ದನು. ಶ್ರೀಕೃಷ್ಣನು ಕೂಡ ಬಲರಾಮನೊಂದಿಗೆ ಕೂಡಿ ತನ್ನ ಬಾಲಲೀಲೆಗಳನ್ನು ತೋರಿಸುತ್ತ ಗೋಕುಲದಲ್ಲಿ ಸರ್ವರಿಗೂ ಆನಂದವನ್ನು ಕೊಡುತ್ತಿದ್ದನು.

**ಸ ಪ್ರಾಕೃತಂ ಶಿಶುಮಾತ್ಮಾನಮುಚ್ಚೈ–**
**ರ್ವಿಜಾನಂತ್ಯಾ ಮಾತುರಾದರ್ಶನಾಯಾ ।**
**ವಿಜೃಂಭಮಾಣೋಽಖಿಲಮಾತ್ಮ ಸಂಸ್ಥಂ**
**ಪ್ರದರ್ಶಯಾಮಾಸ ಕದಾಚಿದೀಶಃ ॥೧೧೩॥**

ತಾಯಿಯಾದ ಯಶೋದೆಯು ಶ್ರೀಕೃಷ್ಣನನ್ನು ಪ್ರಾಕೃತಶಿಶು, ಎಲ್ಲ ಮಕ್ಕಳಂತೆ ಇವನು ಒಬ್ಬ ಮಗ ಎಂದು ಭಾವಿಸಿದ್ದಳು. ಆ ಭ್ರಮೆಯನ್ನು ನಿರಸನಗೊಳಿಸಲು, ತಾನು ಅಪ್ರಾಕೃತ ಶರೀರನೆಂದು ತೋರಿಸಲು ಭಗವಂತನು ತನ್ನ ಬಾಯಿಯಲ್ಲಿ ಸ್ಥಾವರ ಜಂಗಮ ಆದಿಯಾಗಿ ಸಕಲ ಪ್ರಪಂಚವನ್ನು ಕದಾಚಿತಾಗಿ ತೋರಿಸಿದನು.

ಅದರಲ್ಲಿ,

**ಸಾಂಡಂ ಮಹಾಭೂತಮನೋಽಭಿಮಾನ**
**ಮಹತ್ಪ್ರಕೃತ್ಯಾವೃತಮಬ್ಜ ಜಾಧಿಭಿ: ।**
**ಸುರೈ: ಶಿವೇತ್ಯೈರ್ನರ ದೈತ್ಯ ಸಂಘೈ-**
**ಯುತಂ ದದರ್ಶಾಸ್ಯ ತನೌ ಯಶೋದಾ ॥೧೧೪॥**

ಶ್ರೀಕೃಷ್ಣನು ತನ್ನ ಬಾಯಿಯಲ್ಲಿ, ಇಡೀ ಬ್ರಹ್ಮಾಂಡ, ಅದರಲ್ಲಿರುವ ಮಹಾಭೂತಗಳು, ಅವುಗಳಿಗೆ ಅಭಿಮಾನಿಗಳಾದ ದೇವತೆಗಳು, ಪ್ರಕೃತಿಯಿಂದ ಆವೃತರಾದ ಬ್ರಹ್ಮ, ರುದ್ರ ಮೊದಲಾದ ದೇವತೆಗಳ ಗುಂಪುಗಳು ಮತ್ತು ದೈತ್ಯರ ಸಂಘಗಳು ಅಲ್ಲದೆ ಅನೇಕ ಲೌಕಿಕ ಪದಾರ್ಥಗಳನ್ನು ತಾಯಿಯಾದ ಯಶೋದೆಗೆ ತೋರಿದನು.

ಈ ವಿಷಯುವನ್ನು ಕುರಿತು "ಭಾಗವತದಲ್ಲಿ" ಅನೇಕ ಶ್ಲೋಕಗಳು ತುಂಬಿವೆ. ವಿವರಣೆಗೆ ಎಷ್ಟು ಪುಟಗಳಾದರೂ ಸಾಲದು.

'ಗೀತೆಯಲ್ಲಿ' ಇದೇ ವಿಷಯಕ್ಕೆ ಒಂದು ಅಧ್ಯಾಯವನ್ನೇ ಮೀಸಲಾಗಿ ಇರಿಸಲಾಗಿದೆ. ಆದರೆ ಶ್ರೀಮದಾಚಾರ್ಯರು ಆ ಎಲ್ಲ ವಿಷಯುವನ್ನು ಇಲ್ಲಿ ಕೇವಲ ಒಂದು ಶ್ಲೋಕದಲ್ಲಿ ವಿವರಿಸಿದ್ದಾರೆ. ಇದೇ ಅವರ ಶೈಲಿಯ ಮಹತ್ವ. 'ಸಿಂಧುವನ್ನು ಬಿಂದುವಿನಲ್ಲಿ ತೋರಿಸಬಲ್ಲರು' ಎಂಬ ಉಕ್ತಿ ಅವರಿಗೆ ಸರಿಯಾಗಿ ಹೊಂದುತ್ತದೆ.

ಅವರ ಸಾಕ್ಷಾತ್ ಗುರುಗಳಾದ ಶ್ರೀ ವೇದವ್ಯಾಸರು ಈ ವಿಷಯವನ್ನು ಕುರಿತು ಅದೇ ಭಾಗವತದಲ್ಲಿ ಸೂತ್ರರೂಪವಾಗಿ,

**ಅಬಗ್ನೀರನಭೋಽಹಂಕೃತ್ ಮಹತ್ತತ್ವಗುಣತ್ರಯೈ: ।**
**ಕ್ರಮಾದ್ದಶೋತ್ತರೈ: ।**

ಎಂದು ಕೇವಲ ಒಂಭತ್ತನ್ನೇ ಸೂಚಿಸಿದ್ದಾರೆ.

ಇವೆಲ್ಲವುಗಳನ್ನು ನೋಡಿದಾಗ ಶ್ರೀಮದಾಚಾರ್ಯರು "ಗುರುವಿಗೆ ತಕ್ಕ ಶಿಷ್ಯರು" ಎಂದು ಸ್ಪಷ್ಟವಾಗುತ್ತದೆ.

ನ್ಯಮೀಲಯಚ್ಚಾಕ್ಷಣೀ ಭೀತಭೀತಾ
ಜುಗೂಹ ಚಾತ್ಮಾನಮಥೋ ರಮೇಶ: ।
ವಪು: ಸ್ವಕೀಯಂ ಸುಖಚಿತ್ ಸ್ವರೂಪಂ
ಪೂರ್ಣಂ ಸತ್ಸುಜ್ಞಾಪಯಂಸ್ತಧ್ವ ದರ್ಶಯತ್ ॥೧೧೫॥

ಶ್ರೀ ಕೃಷ್ಣನು ತನ್ನ ಬಾಯಿಯಲ್ಲಿ ತೋರಿದ ವಿಚಿತ್ರ ಘಟನೆಯನ್ನು ಕಂಡು ತಾಯಿಯಾದ ಯಶೋದಾದೇವಿಯು ಬಹಳಷ್ಟು ಅಂಜಿ, ತನ್ನ ಕಣ್ಣುಗಳನ್ನು ಮುಚ್ಚಿಕೊಂಡಳು. ಅದನ್ನು ತಿಳಿದ ಸ್ವಾಮಿಯು ಅದನ್ನು ಮರೆಮಾಚಿ ತನ್ನ ನಿಜವಾದ, ಆನಂದದಾಯಕವಾದ ಬಾಲರೂಪದಿಂದ ಕಾಣಿಸಿಕೊಂಡನು.

ಇಲ್ಲಿ ಯಶೋದೆಗೆ ಆ ಅಲೌಕಿಕ ರೂಪ ತೋರಿಸುವ ಕಾರಣವಾದರೂ ಏನಿದ್ದಿತು? ಇದಕ್ಕೆ ಒಂದು ಕಾರಣವನ್ನು ಆಚಾರ್ಯರು ಮೇಲೆಯೇ ಕೊಟ್ಟಿದ್ದಾರೆ. ಯಶೋದೆಯು ಶ್ರೀಕೃಷ್ಣನನ್ನು ತನ್ನ ಮಗನೆಂದು, ಪ್ರಾಕೃತ ಶರೀರವುಳ್ಳವನು, ಅವನೂ ಇತರ ಬಾಲಕರಂತೆ ಒಬ್ಬಬಾಲಕನು. ಈ ಭ್ರಮೆ ಕೇವಲ ಯಶೋದೆಗೆ ಮಾತ್ರವಲ್ಲ. ಅನೇಕ ಜೀವರಿಗೂ ಬರುವುದುಂಟು. ಅದನ್ನು ಹೋಗಲಾಡಿಸುವುದು ಪರಮಾತ್ಮನ ಗುರಿಯಾಗಿತ್ತು.

೨. ಈ ರೂಪವನ್ನು ಕೇವಲ ಯಶೋದೆಗಾಗಿ ಅಲ್ಲ, ತನ್ನ ಭಕ್ತರಿಗೆ ತಾನು ಚಿತ್‌ಸ್ವರೂಪನು, ಪೂರ್ಣನು ಎಂದು ತೋರಿಸಬೇಕಾಗಿತ್ತು. ಯಶೋದೆ ಕೇವಲ ನಿಮಿತ್ತ ಮಾತ್ರ.

ಅರ್ಜುನನಿಗೂ ಇಂಥದೇ ರೂಪವನ್ನು ತೋರಿಸಿದ್ದಾನೆ. ಆದರೆ ಅಲ್ಲಿ ಅರ್ಜುನನೂ ಭಯಭೀತನಾಗಿದ್ದನು. ನನ್ನಿಂದ ಕಾಣಲು ಸಾಧ್ಯವಿಲ್ಲ ಎಂದು ಶರಣಾಗತನಾಗಿ ಕೃಷ್ಣನಿಗೆ ಮೊರೆಹೊಕ್ಕನು. ಭಕ್ತನ ಉದ್ಧಾರಕ್ಕಾಗಿ ಭಗವಂತನು ಅವನಿಗೆ ದಿವ್ಯಚಕ್ಷುಗಳನ್ನೇ ದಯಪಾಲಿಸಿದನು. ಇಲ್ಲಿ ಆ ಭಾಗ್ಯ ಯಶೋದೆಗೆ ದೊರೆಯಲಿಲ್ಲ. ಈಕೆ ಕೇವಲ ಹೆದರಿ ಕಣ್ಣುಗಳನ್ನು ಮಾತ್ರ ಮುಚ್ಚಿಕೊಂಡಳು. ಶರಣಾಗತಳಾಗಲಿಲ್ಲ. ಇದಕ್ಕೆ ಅವರ ಜೀವನದ ಯೋಗ್ಯತೆಯೇ ಕಾರಣವೆಂದು ಹೇಳಬೇಕಷ್ಟೇ.

ಮತ್ತೊಂದು ಸಲ,

**ಕದಾಚಿತ್ತಂ ಲಾಲಯಂತೀ ಯಶೋದಾ**
**ಪ್ರೋಢುಂ ನಾಶಕ್ನೋ ದ್ಭೂರಿಭಾರಾಧಿಕಾತ್ ।**
**ನಿಧಾಯ ತಂ ಭೂಮಿತಲೇ ಸ್ವಕರ್ಮ**
**ಯದಾ ಚಕ್ರೇ ದೈತ್ಯ ಆಗಾತ್ಸು ಘೋರಃ ॥೧೧೬॥**

ಯಶೋದಾ ದೇವಿಯು ಶ್ರೀಕೃಷ್ಣನನ್ನು ಪ್ರೀತಿಯಿಂದ ಎತ್ತಿ ಆಡಿಸುತ್ತಿದ್ದಾಗ, ಇದ್ದಕ್ಕಿದ್ದಂತೆ ಆ ಬಾಲಕನು ಎತ್ತಲು ಬಾರದಷ್ಟು ಭಾರವಾಗಿಬಿಟ್ಟನು. (ಇದರ ಮಹತ್ವವನ್ನು ಅರಿಯದ ತಾಯಿ) ಆ ಬಾಲಕನನ್ನು ನೆಲದ ಮೇಲೆ ಕುಳ್ಳಿರಿಸಿ, ತನ್ನ ಕಾರ್ಯದಲ್ಲಿ ತೊಡಗಿದಳು. ಅದೇ ಸಮಯಕ್ಕೆ ತೃಣಾವರ್ತನೆಂಬ ದೈತ್ಯನು ಅಲ್ಲಿಗೆ ಬಂದನು.

ತೃಣಾವರ್ತನಾರು?

**ತೃಣಾವರ್ತೋನಾಮತಃ ಕಂಸಭೃತ್ಯಃ**
**ಸೃಷ್ಟ್ವಾ ತ್ಯುಗ್ರಂ ಚಕ್ರವಾತಂ ಶಿಶುಂ ತಮ್ ।**
**ಆದಾಯಾಗಾದಂತರಿಕ್ಷಂ ಸ ತೇನ**
**ಶಸ್ತಃ ಕಂಠಗ್ರಾಹಸಂ ರುದ್ಧವಾಯುಃ ॥೧೧೭॥**

ತೃಣಾವರ್ತನು ಕಂಸನ ಭೃತ್ಯನು. ಅವನು ಅತ್ಯುಗ್ರವಾದ ಸುಂಟರಗಾಳಿ (ಚಕ್ರವಾತಂ)ಯನ್ನು ಸೃಷ್ಟಿಮಾಡಿದನು. ಆ ಗಾಳಿಯ ಮೂಲಕ ಶಿಶು (ಶ್ರೀಕೃಷ್ಣನನ್ನು)ವನ್ನು ಅಂತರಿಕ್ಷದಲ್ಲಿ ಹಾರಿಸಿದನು. ಶ್ರೀಕೃಷ್ಣನು ತನ್ನ ಬಾಹುಗಳಿಂದ ಆ ಅಸುರನ ಕುತ್ತಿಗೆಯನ್ನು ಚೆನ್ನಾಗಿ ಹಿಡಿದನು. ಅದರಿಂದ ಆ ರಕ್ಕಸನ ಶ್ವಾಸ ತಡೆಯಲ್ಪಟ್ಟಿತು. ಉಸುರುಗಟ್ಟಿತು. ಅದು ಅವನಿಗೆ ಶಿಕ್ಷೆಯಾಯಿತು.

ವಿ.ವಿ. ಅವನು ಅಸುರ ತೃಣಾವರ್ತನಾದರೂ, ಶ್ರೀಕೃಷ್ಣನಿಗೆ ತೃಣಕ್ಕಿಂತಲೂ ಕಡೆಯಾದನು.

**ಪಪಾತ ಕೃಷ್ಣೇನ ಹತಃ ಶಿಲಾತಲೇ**
**ತೃಣಾವರ್ತಃ ಪರ್ವತೋದಗ್ರ ದೇಹಃ ।**

**ಸುವಿಸ್ಮಯಂ ಚಾಪುರಥೋ ಜನಾಸ್ತೇ**
**ತೃಣಾವರ್ತಂ ವೀಕ್ಷ್ಯ ಸಂಚೂರ್ಣಿತಾಂಗಮ್ ॥೧೧೮॥**

ಶ್ರೀಕೃಷ್ಣನಿಂದ ಹತನಾದ ದೈತ್ಯನು ಬಂಡೆಯ ಮೇಲೆ ಬಿದ್ದನು. ಆ ತೃಣಾವರ್ತನು ಒಂದು ಪರ್ವತಾಕಾರ ದೇಹವುಳ್ಳವನಾಗಿ ನೆಲದಲ್ಲಿ ಉರುಳಿದನು. ಅವನ ಅಂಗಾಂಗಗಳೆಲ್ಲ ಪುಡಿಪುಡಿಯಾಗಿದ್ದವು. ಇದನ್ನು ಜನರು ಆಶ್ಚರ್ಯದಿಂದ ನೋಡಿದರು.

**ಅಕ್ರುಧ್ಯತಾಂ ಕೇಶವೋಽನುಗ್ರಹಾಯ**
**ಶುಭಂ ಸ್ವಯೋಗ್ಯಾದಧಿಕಂ ನಿಹಂತುಮ್ ।**
**ಸ ಕ್ರುಧ್ಯತಾಂ ನವನೀತಾದಿ ಮುಷ್ಣಂ**
**ಶ್ಚಚಾರದೇವೋ ನಿಜಸತ್ಸುಜಾಂಬುಧಿಃ ॥೧೧೯॥**

ಈ ಶ್ಲೋಕದಲ್ಲಿ ಆಚಾರ್ಯರು, "ಶ್ರೀಕೃಷ್ಣನು ಬೆಣ್ಣೆ, ಮೊಸರು ಇತ್ಯಾದಿಗಳನ್ನು ಕದ್ದನು" ಇದು ಪ್ರಸಿದ್ಧ. ಇದಕ್ಕೆ ಕಾರಣ ಮತ್ತು ರಹಸ್ಯವೇನು? ಎಂಬುದನ್ನು ತೋರಿದ್ದಾರೆ.

ಬೆಣ್ಣೆ–ಮೊಸರು ತೆಗೆದುಕೊಳ್ಳುವ ಈ ಕಾರ್ಯದಿಂದ ಯಾರು, ಶ್ರೀಕೃಷ್ಣನ ಮೇಲೆ ಸಿಟ್ಟಾಗುತ್ತಿರಲಿಲ್ಲವೋ, ಅವರಿಗೆ ಸಾಕಷ್ಟು ಪುಣ್ಯವನ್ನು ಇತ್ತು ಮಂಗಲವನ್ನು ದಯಪಾಲಿಸುತ್ತಿದ್ದನು. ಯಾರು ಕ್ರುದ್ಧರಾಗುತ್ತಿದ್ದರೋ ಅವರ ಪುಣ್ಯವನ್ನು ಕಸಿಯುತ್ತಿದ್ದನು. ಇದರಿಂದ ಅವರಿಗೆ ಪಾಪವೇ ಗತಿಯಾಗುತ್ತಿತ್ತು. ಅದು ಅವರ ದುಃಖಕ್ಕೆ ಕಾರಣವಾಗುತ್ತಿತ್ತು. ಯಾವಾಗಲೂ ಸತ್ಸುಖನಾಗಿ, ಆನಂದಸಾಗರದಲ್ಲಿ ಇರುವ ಶ್ರೀಕೃಷ್ಣನಿಗೆ ಈ ಬೆಣ್ಣೆಯಿಂದ ಏನಾಗಬೇಕಾಗಿದೆ. ಈ ಬಾಲಲೀಲೆಗಳ ದ್ವಾರ ಶ್ರೀಕೃಷ್ಣನು ಜನರ ಭಕ್ತಿಯನ್ನು ಪರೀಕ್ಷಿಸಿದ್ದಾನೆ ಎಂದರೆ ಸತ್ಯಕ್ಕೆ ದೂರವಾಗಲಾರದು.

**ಯಸ್ಮನ್ನಬ್ದೇ ಭಾದ್ರಪದೇ ಸ(ಽಥ) ಮಾಸೇ**
**ಸಿಂಹಸ್ಥ ಯೋರ್ಗುರುರವ್ಯೋಃ ಪರೇಶಃ ।**
**ಉದೈತ್ತತಃ ಫಾಲ್ಗುಣೇ ಫಲ್ಗುಣೋಽಬೂತ್**
**ಗತೇ ತತೋ ಮಾದ್ರವತೀ ಬಭಾಷೆ ॥೧೨೦॥**

ಯಾವ ವರ್ಷದ ಭಾದ್ರಪದ ಮಾಸದಲ್ಲಿ, ಗುರು ಮತ್ತು ರವಿ ಸಿಂಹರಾಶಿಯಲ್ಲಿದ್ದರೋ, ಆಗ ಸರ್ವೇಶ್ವರನಾದ ಶ್ರೀಕೃಷ್ಣನು ಪ್ರಕಟನಾದನು. ನಂತರ ಫಾಲ್ಗುಣಮಾಸದಲ್ಲಿ 'ಫಲ್ಗುಣ' ಅಂದರೆ ಅರ್ಜುನನು ಹುಟ್ಟಿದನು. ಇವೆಲ್ಲವು ಮುಗಿದ ಮೇಲೆ ಮಾದ್ರಿಯು ಪಾಂಡುರಾಜನನ್ನು ಕುರಿತು,

**ಜಾತಾ: ಸುತಾಸ್ತೇ ಪ್ರವರಾ: ಪೃಥಯಾ**
**ಮೇಕಾನಪತ್ಯಾಹ ಮತ: ಪ್ರಸಾದಾತ್ ।**
**ತದ್ಯೈವ ಭೂಯಾಸಮಹಂ ಸಂತೇತಾ**
**ವಿಧಸ್ವ ಕುಂತೀಂ ಮಮ ಮಂತ್ರದಾತ್ರೀಮ್ ॥೧೨೧॥**

"ನಿಮಗೆ ಕುಂತಿಯಲ್ಲಿ ಶ್ರೇಷ್ಠರಾದ ಮಕ್ಕಳಾಗಿದ್ದಾರೆ. ನಾನು ಮಾತ್ರ ಮಕ್ಕಳಿಲ್ಲದವಳಾಗಿದ್ದೇನೆ. ಕಾರಣ ಕುಂತಿಯಿಂದ ಮಂತ್ರೋಪದೇಶ ಮಾಡಿಸಿ, ನನಗೂ ಮಕ್ಕಳಾಗುವಂತೆ ಮಾಡಿರಿ" ಎಂದು ಪ್ರಾರ್ಥಿಸಿಕೊಂಡಳು.

"ನಿಮಗೆ ಕುಂತಿಯಲ್ಲಿ ಮಕ್ಕಳಾದವು, ನನಗೆ ಮಾತ್ರ ಮಕ್ಕಳಿಲ್ಲ" ಈ ವಾಕ್ಯದಲ್ಲಿ ಮಾದ್ರಿಯ ಸಂಕುಚಿತ ಬುದ್ಧಿ ಮತ್ತು ಸವತಿ ಮತ್ಸರ ಎದ್ದು ಕಾಣುವುದಲ್ಲವೇ? ಇದೇ 'ಜೀವ, ಜೀವರಲ್ಲಿ ಭೇದ'

**ಇತೀರಿತ: ಪ್ರಾಹ ಪೃಥಾಂ ಸ ಮಾದ್ರ್ಯೈ**
**ದಿಶಸ್ವಮಂತ್ರಂ ಸುತದಂ ವರಿಷ್ಠಮ್ ।**
**ಇತ್ಯೂಚಿವಾಂಸಂ ಪತಿಮಾಹ ಯಾದವೀ**
**ದದ್ಯಾಂ ತ್ವದರ್ಥೇ ತು ಸಕೃತ್ಫಲಾಯ ॥೧೨೨॥**

ಮಾದ್ರಿಯ ಈ ರೀತಿಯ ಮಾತುಗಳನ್ನು ಕೇಳಿ, ಪಾಂಡುರಾಜನು ಕುಂತಿಯನ್ನು ಕರೆದು, "ಮಾದ್ರಿಗೂ ಕೂಡ ಶ್ರೇಷ್ಠನಾದ ಮಗನಾಗುವಂತೆ ಮಂತ್ರವನ್ನು ಉಪದೇಶಿಸು" ಎಂದು ಹೇಳಿದನು. ಆಗ ಯದುಪುತ್ರಿಯಾದ ಕುಂತಿಯು ನಿನ್ನ ಮೇಲಿನ ಮಮತೆಯಿಂದ ಒಂದು ಫಲವನ್ನು ಮಾತ್ರ ಕೊಡತಕ್ಕ ಮಂತ್ರವನ್ನು ಹೇಳುವೆನೆಂದಳು.

ಕುಂತಿಯ ಮಾತಿನಿಂದಲೂ ಮಾದ್ರಿಯ ಸ್ವಭಾವ ವ್ಯಕ್ತವಾಗುತ್ತದೆ.

**ಉವಾಚ ಮಾದ್ರ್ಯೈ ಸುತದಂ ಮನುಂ ಚ**
**ಪುನ: ಫಲಂ ತೇ ನ ಭವಿಷ್ಯತೀತಿ ।**
**ಮಂತ್ರಂ ಸಮಾದಾಯ ಚ ಮದ್ರ ಪುತ್ರೀ**
**ವ್ಯಚಿಂತಯತ್ ಸ್ಯಾನ್ನು ಕಥಂ ದ್ವಿಪುತ್ರೀ ॥೧೨೩॥**

ಕುಂತಿಯು, ಮಾದ್ರಿಗೆ ಮಂತ್ರವನ್ನು ಉಪದೇಶಿಸಿ, "ಈ ಮಂತ್ರದ ಫಲ ಒಂದು ಸಲ ಮಾತ್ರ. ಮತ್ತೆ ಎರಡನೆಯ ಫಲ ಆಗಲಾರದು" ಎಂದು ಸ್ಪಷ್ಟ ಹೇಳಿದಳು. ಮಂತ್ರವನ್ನು ಪಡೆದ ಮೇಲೆ ಮಾದ್ರಿಯು, ಈ ಒಂದು ಮಂತ್ರದಿಂದ ಎರಡು ಮಕ್ಕಳನ್ನು ಪಡೆಯುವುದು ಹೇಗೆ? ಎಂದು ಯೋಚಿಸಹತ್ತಿದಳು.

ಇಲ್ಲಿಯೂ ಮಾದ್ರಿಯ ಸ್ವಭಾವ ಸ್ಪಷ್ಟವಿದೆ.

**ಸದಾವಿಯೋಗೌ ದಿವಜೇಷು ದಸ್ರೌ**
**ನ ಚೈತಯೋರ್ನಾಮಭೇಧ: ಕ್ವಚಿದ್ಧಿ ।**
**ಏಕಭಾರ್ಯಾ ಸ್ಯೈತಯೋರಪ್ಯುಷಾಹಿ**
**ತನಾಯಾತ: ಸಕೃದಾವರ್ತನಾ ದ್ವೌ ॥೧೨೪॥**

'ದೇವತೆಗಳಲ್ಲಿ ಅಶ್ವಿನಿ ದೇವತೆಗಳಿಗೆ ಯಾವಾಗಲೂ ವಿಯೋಗವಿಲ್ಲ. ಅಲ್ಲದೆ ಅವರಲ್ಲಿ ನಾಮಭೇದವೂ ಇಲ್ಲ. ಮೇಲಾಗಿ ಅವರಿಗೆ 'ಉಷಾ' ಎನ್ನುವವಳು ಒಬ್ಬಳೇ ಹೆಂಡತಿ. ಆವರನ್ನು ಕರೆದರೆ ಇಬ್ಬರು ಮಕ್ಕಳಾಗುವರು' ಎಂದು ನಿಶ್ಚಯಿಸಿಕೊಂಡಳು.

**ಇತೀಷ್ಯಂತ್ಯಕಾರಿತಾವಶ್ವಿನೌ ತೌ**
**ಶೀಘ್ರಂ ಪ್ರಾಪ್ತೌ ಪುತ್ರಕವ ತತ್ಪ್ರಸೂತೌ ।**
**ತಾವೇವ ದೇವೌ ನಕುಲ: ಪೂರ್ವಜಾತ:**
**ಸಹದೇವೋऽಭೂತ್ ಪಶ್ಚಿಮಸ್ತೌ ಯಯೌ ಹಿ ॥೧೨೫॥**

ಈ ರೀತಿ ಯೋಚಿಸಿ ಕೊನೆಗೆ ಅಶ್ವಿನಿ ದೇವತೆಗಳನ್ನು ಕರೆದಳು. ಅವರು ಕೂಡಲೇ ಬಂದು ಇಬ್ಬರು ಮಕ್ಕಳನ್ನು ದಯಪಾಲಿಸಿದರು. ಅವರಲ್ಲಿ ಒಬ್ಬನು ನಕುಲನು. ಅವನು ಮೊದಲು ಹುಟ್ಟಿದನು. ನಂತರ ಹುಟ್ಟಿದವನು ಸಹದೇವನು. ಎರಡು ಅವಳಿಯಾದವು.

ನಕುಲನು–ನಾಸತ್ಯನು. ಸಹದೇವನು–ದಸ್ರನು.

**ಪುನರ್ಮನೋ ಫಲವತ್ತ್ವಾಯ ಮಾದ್ರೀ**
**ಸಂಪ್ರಾರ್ಥಯಾಮಾಸ ಪತಿಂ ತದುಕ್ತಾ ।**
**ಪೃಥಾವಾದೀತ್ ಕುಟಿಲೈಷಾ ಮದಾಜ್ಞಾಮೃತೇ**
**ದೇವಾನಾಹ್ವಯಾ ಮಾಸದಸ್ರೌ ॥೧೨೬॥**

ಮತ್ತೊಂದು ಫಲವತ್ತಾದ ಮಂತ್ರವನ್ನು ಮನಸ್ಸಿನ ತೃಪ್ತಿಗಾಗಿ ಕೊಡಿಸಬೇಕೆಂದು ಮಾದ್ರಿಯು ಪತಿಯನ್ನು ಕೇಳಿದಳು. ಆತನು ಕೂಡ ಕುಂತಿಗೆ ಒತ್ತಾಯಿಸಿದನು. ಅದಕ್ಕೆ ಕುಂತಿಯು, ಮಾದ್ರಿಯು ಕುಟಿಲೆಯು. ನನ್ನ ಆಜ್ಞೆಯಿಲ್ಲದೆ ಅಶ್ವಿನಿ ದೇವತೆಗಳನ್ನು ಕರೆದಿದ್ದಾಳೆ. ಅಲ್ಲದೆ,

**ಅತೋ ವಿರೋಧಂ ಚ ಮದಾತ್ಮಜಾನಾಂ**
**ಕುರ್ಯಾದೇಷೇತ್ಯೇವ ಭೀತಾಂ ನಮಾಂ ತ್ವಮ್ ।**
**ನಿಯೋಕ್ತುಮರ್ಹ ಪುನರೇವ ರಾಜ–**
**ನ್ನಿತೀರಿತೋಽಸೌ ವಿರರಾಮ ಕ್ಷಿತೀಶಃ ॥೧೨೭॥**

ಈ ಮಾದ್ರಿಯು ನನ್ನ ಮಕ್ಕಳೊಂದಿಗೆ ವಿರೋಧ ಬೆಳೆಸುವಳು ಎಂಬ ಭಯವೂ ನನಗಿದೆ. ಕಾರಣ "ಮತ್ತೊಂದು ಮಂತ್ರವನ್ನು ಕೊಡು" ಎಂದು ಹೇಳುವುದು ತಮಗೆ ಯೋಗ್ಯವಲ್ಲ. ಅದನ್ನು ಕೇಳಿ ರಾಜನು ಸುಮ್ಮನಾದನು.

**ವಿಶೇಷನಾಮ್ನೈವ ಸಮಾಹುತಾಃ ಸುರಾ**
**ದದ್ಯುಃ ಸುತಾನಿತ್ಯವಿಶೇಷತಂ ತಯಾಃ ।**
**ವಿಶೇಷನಾಮಾಪಿ ಸಮಾಹ್ವಯತ್ತೌ**
**ಮಂತ್ರಾವೃತಿರ್ನಾಮಭೇದೇಽಸ್ತ ಚೋಕ್ತಾ ॥೧೨೮॥**

ವಿಶೇಷ ಹೆಸರಿನಿಂದ ಕರೆದರೆ ಮಾತ್ರ ದೇವತೆಗಳು ಮಕ್ಕಳನ್ನು ಕೊಡುವರು. ಈಕೆಯು ಕರೆದ ದೇವತೆಗಳ ಹೆಸರು ಮೇಲುನೋಟಕ್ಕೆ ವಿಶೇಷವಾಗಿ ಕಂಡರೂ, ಅದು ಅವಿಶೇಷವೇ. ಅಂದರೆ ಸಾಮಾನ್ಯವೇ. ಮಂತ್ರಾವೃತಿಗೆ ಭಿನ್ನವಾದ ಹೆಸರು ಇರಲೇಬೇಕು. ಅಂದರೆ ಮಾತ್ರ ಪುನರುಚ್ಚಾರಣೆ ಸಾಧ್ಯ ಎಂದು ಹೇಳಿದಳು. (ಇವರು ಉತ್ತಮ ದೇವತೆಗಳ ಸಾಲಿನಲ್ಲಿ ಬರುವುದಿಲ್ಲ) ಎಂದು ಕುಂತಿ ಕಾರಣಗಳನ್ನಿತ್ತಳು.

**ಯುಧಿಷ್ಠಿರಾದ್ಯೇಷು ಚತುರ್ಷವಾಯುಃ**
**ಸಮಾವಿಷ್ಟಃ ಫಲ್ಗುನೇಽತೋ ವಿಶೇಷಾತ್ ।**
**ಯುಧಿಷ್ಠಿರೇ ಸಾಮ್ಯರೂಪೇಣ ವಿಷ್ಣೋ**
**ವೀರೇಣ ರೂಪೇಣ ಧನಂಜಯೇಽಸೌ ॥೧೨೯॥**

ಧರ್ಮನನ್ನು ಮೊದಲ್ಗೊಂಡು ನಾಲ್ಕು ಜನರಲ್ಲಿ ವಾಯುದೇವರು ಸಮಾವೇಶರಾಗಿದ್ದಾರೆ. ಅರ್ಜುನನಲ್ಲಿ ಮಾತ್ರ ವಿಶೇಷವಾಗಿ ಇದ್ದಾರೆ.

ಧರ್ಮರಾಜನಲ್ಲಿ ಸೌಮ್ಯರೂಪದಿಂದ ಅರ್ಜುನನಲ್ಲಿ ವೀರರೂಪದಿಂದ ಆವಿಷ್ಟರಾಗಿದ್ದಾರೆ.

**ಶೃಂಗಾರರೂಪಂ ಕೇವಲಂ ದರ್ಶಯಾನೋ**
**ವಿವೇಶ ವಾಯುರ್ಯಮಾಜೌ ಪ್ರಧಾನಃ ।**
**ಶೃಂಗಾರ ಕೈವಲ್ಯ ಮಭೀಪ್ಸಮಾನಃ**
**ಪಾಂಡುರ್ಹಿ ಪುತ್ರಂ ಚಕರ್ಮ ಚತುರ್ಥಮ್ ॥೧೩೦॥**

ವಾಯುದೇವರು ಕೇವಲ ಶೃಂಗಾರ ರೂಪವನ್ನು ಪ್ರದರ್ಶಿಸಲು ನಕುಲ ಮತ್ತು ಸಹದೇವ ಇಬ್ಬರಲ್ಲೂ ಪ್ರಧಾನರಾಗಿದ್ದಾರೆ. ಅದಕ್ಕೆ ಕಾರಣ

ಪಾಂಡುರಾಜನು ಕೂಡ ಕೇವಲ ಶೃಂಗಾರ ಪ್ರದರ್ಶನದ ಅಪೇಕ್ಷೆಯಿಂದಲೇ ಈ ಮಕ್ಕಳನ್ನು ಪಡೆದರು.

ವಿ.ವಿ. ಭೀಮಸೇನ ದೇವರು ಸ್ವಯಂ ವಾಯುವಿನ ಅವತಾರರು. ಕಾರಣ ಈ ಪಟ್ಟಿಯಲ್ಲಿ ಅವರ ಹೆಸರು ಬಂದಿಲ್ಲವೆಂದು ಓದುಗರು ಗಮನಿಸಬೇಕಾಗಿ ವಿನಂತಿ–

**ಶೃಂಗಾರರೂಪೋ ನಕುಲೇ ವಿಶೇಷಾತ್**
**ಸುನೀತ ರೂಪ: ಸಹದೇವಂವಿವೇಶೇ**
**ಗುಣ್ಯೈ: ಸಮಸ್ತ್ಯೈ: ಸ್ವಯಂಮೇವವಾಯು–**
**ರ್ಬಭೂವ ಭೀಮೋ ಜಗದಂತರಾತ್ಮಾ ॥೧೩೧॥**

ಸೌಂದರ್ಯದಲ್ಲಿ, ರೂಪ ಸೌಂದರ್ಯ ನಕುಲನಲ್ಲಿದ್ದರೆ, ನೀತಿ ಸೌಂದರ್ಯ ಸಹದೇವನಲ್ಲಿದೆ. ಸಕಲ ಜಗತ್ತಿಗೂ ಅಂತರಾತ್ಮನಾದ ವಾಯು ಸಕಲ ಗುಣಗಳಿಂದ ಕೂಡಿದವನಾಗಿ ಪೂರ್ಣರೂಪದಿಂದ ಭೀಮನಾಗಿ ಹುಟ್ಟಿದ್ದಾನೆ.

ನಕುಲನಲ್ಲಿದ್ದದ್ದು ಬಾಹ್ಯ ಸೌಂದರ್ಯ. ಸಹದೇವನಲ್ಲಿದ್ದದ್ದು ಅಂತರಿಕ ಸೌಂದರ್ಯ. ಉಳಿದ ಪಾಂಡವರು ಸುಂದರರಾಗಿರಲಿಲ್ಲವೆ? ಸಮಾಧಾನ.

ಸೌಂದರ್ಯದ ಅರ್ಥ ವಿಶೇಷ.

**ಸುಪಲ್ಲವಾಕಾರ ತನುರ್ಹಿ ಕೋಮಲ:**
**ಪ್ರಾಯೋ ಜನ್ಯೈ ಪ್ರೋಚ್ಯತೇ ರೂಪಶಾಲೀ ।**
**ತತ: ಸುಜಾತೌ ವರ ವಜ್ರಕಾಯೌ**
**ಭೀಮಾರ್ಜುನಾವ ಪೃತೇ ಪಾಂಡುರೈಚ್ಛತ್ ॥೧೩೨॥**

ಪಾಂಡುರಾಜನ ದೃಷ್ಟಿಯಲ್ಲಿ, ಚಿಗುರೆಲೆಯ ಬಣ್ಣದಿಂದ ಕೂಡಿದ, ಮೃದುವಾದ ಶರೀರಉಳ್ಳವನೇ ಸುಂದರನು. ಪ್ರಾಯಶ: ಅನೇಕ ಜನರು ಇದನ್ನೇ ಸೌಂದರ್ಯವೆಂದು ಒಪ್ಪುತ್ತಾರೆ. ಭೀಮಾರ್ಜುನರು ನೋಡಲು ಸುಂದರವಾಗಿ ಕಂಡರೂ ಅವರು ವಜ್ರಕಾಯರಾಗಿದ್ದರು. ಅಂತೆಯೇ ಪಾಂಡುರಾಜನು ಬೇರೊಬ್ಬ ಸುಂದರ ಮಗನನ್ನು ಇಚ್ಛಿಸಿದನು.

ಆಚಾರ್ಯರ ದೃಷ್ಟಿಯಲ್ಲಿ ಸೌಂದರ್ಯ.

**ಅಪ್ರಾಕೃತಾನಾಂ ತು ಮನೋಹರಂ ಯ–**
**ದ್ರೂಪಂ ದ್ವಾತ್ರಿಂಶಲ್ಲ ಕ್ಷಣೋಪೇತಮಗ್ರ್ಯಮ್ ।**
**ತನಮ್ರುತೋ ನಕುಲೇ ಕೋಮಲಾಭ**
**ಏವಂ ವಾಯುಃ ಪಂಚರೂಪೋSತ್ರಚಾಸೀತ್ ॥೧೩೩॥**

ಅಪ್ರಾಕೃತರಾದವರಿಗೂ ಮನೋಹರ ರೂಪವೆಂದರೆ, ಮೂವತ್ತೆರಡು ಲಕ್ಷಣಗಳಿಂದ ಕೂಡಿದ್ದು, ಅದೇ ಶ್ರೇಷ್ಠವಾದ ಸೌಂದರ್ಯ. ಅದು ವಾಯುದೇವರಲ್ಲಿ ಇದ್ದಿತು. ಇಲ್ಲಿ ಆ ವಾಯುದೇವರು ನಕುಲನಲ್ಲಿ ಕೋಮಲ ರೂಪದಿಂದ ಇದ್ದಾರೆ. ಈ ರೀತಿ ವಾಯುದೇವರು ಪಂಚಪಾಂಡವರಲ್ಲಿ ಪಂಚರೂಪಗಳಿಂದ ವಾಸಿಸಿದ್ದಾರೆ.

'ಇಂದ್ರ' ಇದು ಪದವಿಯೋ ಅಥವಾ ವ್ಯಕ್ತಿಯೇ? ಅದಕ್ಕೆ ಸಮಾಧಾನ–

**ಅತೀತೇಂದ್ರಾ ಏವ ತೇ ವಿಷ್ಣು ಷಷ್ಟಾಃ**
**ಪೂರ್ವೇಂದ್ರೋSಸೌ ಯಜ್ಞನಾಮಾ ರಮೇಶಃ ।**
**ಸ ವೈ ಕೃಷ್ಣೋ ವಾಯುರಥ ದ್ವಿತೀಯಃ**
**ಸ ಭೀಮಸೇನೋ ಧರ್ಮ ಆಸೀತ್ತೃತೀಯಃ ॥೧೩೪॥**

'ಇಂದ್ರ' ಎಂಬುದು ವ್ಯಕ್ತಿಯಲ್ಲ. ಅದೊಂದು ಪದವಿ. ಇದುವರೆಗೆ ಆರು ಜನ ಇಂದ್ರರು ಆಗಿಹೋಗಿದ್ದಾರೆ. ಅವರಲ್ಲಿ ಮೊದಲನೆಯ ಇಂದ್ರನೇ 'ಯಜ್ಞನಾಮಕ' ಪರಮಾತ್ಮನು. ಆತನೇ ಶ್ರೀಪತಿಯು. ಅವನೇ 'ಶ್ರೀಕೃಷ್ಣ'ನಾಗಿ ಅವತರಿಸಿದ್ದಾನೆ. ಎರಡನೇಯವರೇ ವಾಯುದೇವರು. ಅವರೇ ಭೀಮಸೇನರಾಗಿ ಅವತರಿಸಿದ್ದಾರೆ. ಮೂರನೆಯ ಇಂದ್ರರು ಅವರೇ ಯುಧಿಷ್ಠಿರ.

**ಯುಧಿಷ್ಠಿರೋSಸಾವಥ ನಾಸತ್ಯದಸ್ರೌ**
**ಕ್ರಮಾತ್ತಾವೇತೌ ಮಾದ್ರವತೀಸುತೌಚ ।**
**ಪುರಂದರಃ ಷಷ್ಠ ಉತಾತ್ರ ಸಪ್ತ ಮಃ**
**ಸ ಏವೈಕಃ ಫಲ್ಗುನೋ ಹ್ಯೇತ ಇಂದ್ರಾಃ ॥೧೩೫॥**

ಧರ್ಮನು ಇಂದ್ರನಾದಮೇಲೆ, ಮಾದ್ರಿಸುತರಾದ ನಕುಲ-ಸಹದೇವರೇ ನಂತರದ ಇಂದ್ರರು. ಪುರಂದರ ಎಂಬುವನು ಆರನೆಯ ಇಂದ್ರನು. ಏಳನೇ ಇಂದ್ರನೇ ಫಲ್ಗುಣನು.

ಮನ್ವಂತರಗಳು ಮತ್ತು ಇಂದ್ರಾದಿಗಳ ವಿವರ

ಸ್ವಯಂಭು ಮನ್ವಂತರದಲ್ಲಿ ಯಜ್ಞನಾಮಕನಾರಾಯಣ ಇಂದ್ರ ಕೃಷ್ಣ.

ಉತ್ತಮ ಮನ್ವಂತರದಲ್ಲಿ ಸತ್ಯಜಿತ ಇಂದ್ರ ಧರ್ಮ.

ಸ್ವರೋಚಿಷ ಮನ್ವಂತರದಲ್ಲಿ ರೋಚನ ನಾಮಕ ಮುಖ್ಯಪ್ರಾಣ ಇಂದ್ರ ನಕುಲ.

ರೈವತತಾಪಸ ಮನ್ವಂತರದಲ್ಲಿ ತ್ರಿಶಂಕು ಇಂದ್ರ ನಕುಲ-ಸಹದೇವ.

ರೈವತತಾಪಸ ಮನ್ವಂತರದಲ್ಲಿ ಇಂದ್ರ ಪುರಂದರ

ಚಾಕ್ಷುಸ ಮನ್ವಂತರದಲ್ಲಿ ಮಂದ್ರದ್ಯುಮ್ನ ಇಂದ್ರ ಅರ್ಜುನ.

ಹೀಗೆ ಇದುವರೆಗೆ ಆರುಮಂದಿ ಇಂದ್ರರು. (ಶ್ರೀ ಶ್ರೀ ಶ್ರೀ ವಾದಿರಾಜರ ಟಿಪ್ಪಣಿ.)

**ಕ್ರಮಾತ್ಸಂಸ್ಕಾರಾನ್ ಕ್ಷತ್ರಿಯಾಣಾಮ ವಾಪ್ಯ**
**ತೇಽವರ್ಧಂತ ಸ್ವತವಸೋ ಮಹಿತ್ವನಾ ।**
**ಸರ್ವೇ ಸರ್ವಜ್ಞಾ: ಸರ್ವಧರ್ಮೋಪ ಪನ್ನಾ:**
**ಸರ್ವೇ ಭಕ್ತಾ: ಕೇಶವೇಽತ್ಯಂತ ಯುಕ್ತಾ: ॥೧೩೬॥**

ಆ ಎಲ್ಲ ಪಾಂಡು ಪುತ್ರರಿಗೆ ಆವರವರ ಕ್ರಮ ಮತ್ತು ಯೋಗ್ಯತೆಗಳಿಗೆ ತಕ್ಕಂತೆ, ಕ್ಷತ್ರಿಯರಿಗೆ ಬೇಕಾದ ಎಲ್ಲ ವಿದ್ಯೆಗಳನ್ನು ಕಲಿಸಿದರು. ಮಾಡಬೇಕಾದ ಸಂಸ್ಕಾರಗಳನ್ನು ಮಾಡಿದರು. ಎಲ್ಲರು ಜ್ಞಾನಿಗಳಾದರು. ಸರ್ವರು ಧರ್ಮದಲ್ಲಿ ಆಸಕ್ತಿಯುಳ್ಳವರು ಪರಮಾತ್ಮನ ಭಕ್ತರು, ಕೇಶವನಲ್ಲಿ ಅತ್ಯಂತ ಪ್ರೀತಿಯುಳ್ಳವರಾಗಿದ್ದರು.

ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯವಿರಚಿತೇ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ ಶ್ರೀಕೃಷ್ಣಾವತಾರ ದೇವಾಂಶಾವರಣ ನಾಮ ದ್ವಾದಶೋಽಧ್ಯಾಯಃ ।

ಇಲ್ಲಿಗೆ ಶ್ರೀಮದಾಚಾರ್ಯರಿಂದ ರಚಿತವಾದ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ 'ಕೃಷ್ಣಾವತಾರ–ದೇವಾಂಶಾವರಣ' ಎಂಬ ಹನ್ನೆರಡನೆಯ ಅಧ್ಯಾಯ ಮುಗಿದುದು.

ಇದನ್ನು ಶಾಂಡಿಲ್ಯ ಗೋತ್ರೋತ್ಪನ್ನರಾದ ಶ್ರೀ ಹನುಮಂತಾರ್ಯರ ಸುತನಾದ ರಾಘವೇಂದ್ರ ಶರ್ಮನು ಕನ್ನಡಕ್ಕೆ ಅನುವಾದಿಸಿ ಶ್ರೀಕೃಷ್ಣನ ಚರಣಾರವಿಂದದಲ್ಲಿ ಅರ್ಪಿಸಿದನು. ಶ್ರೀಕೃಷ್ಣನು ಇದನ್ನು ಸ್ವೀಕರಿಸಿ ಸಂಪ್ರೀತನಾಗಲಿ. ಭಕ್ತವೃಂದವನ್ನು ಆಶೀರ್ವದಿಸಲಿ.

**ಸರ್ವ ಶುಭಂ ಮಂಗಳಂ.**

--0--

# ಹನ್ನೆರಡನೆಯ ಅಧ್ಯಾಯದ ವೈಶಿಷ್ಟ್ಯ

ಶ್ರೀಕೃಷ್ಣನ ಅವತಾರಕ್ಕೆ ಕಾರಣರಾದ ವಸುದೇವ ದೇವಕಿಯರ ಮೂಲರೂಪದ ಪರಿಚಯ. ವಸುದೇವ ದೇವಕಿಯರ ಮದುವೆಯ ಮಂಗಲ ಪ್ರಸಂಗ. ಕಂಸನೇ ರಥವನ್ನು ನಡೆಸುತ್ತಿದ್ದಾನೆ. ಆಕಾಶವಾಣಿ 'ದೇವಕಿಯ ಎಂಟನೆಯ ಮಗನಿಂದಲೇ ನಿನಗೆ ಮೃತ್ಯು' ಕಂಸನಿಗೆ ಎಚ್ಚರಿಕೆ– ಕಂಸನಿಗೆ ಕೋಪ. ದೇವಕಿಯನ್ನು ಕೊಲ್ಲಲು ಸಿದ್ಧನಾಗುತ್ತಾನೆ. ವಸುದೇವನ ಬುದ್ಧಿವಂತಿಕೆಯಿಂದ ಗಂಡಾಂತರ ಪಾರಾಯಿತು.

ಆಕಾಶವಾಣಿ ಏಕಾಯಿತು? ಕಂಸನಿಂದ ಮಹತ್ತರ ಅಪರಾಧವಾಗಬೇಕು. ತಂದೆ–ತಾಯಿಗಳಿಗೆ ವೈರಿಯಾದವನು ಯಾವನಿದ್ದರೂ ಅವನು ಶಿಕ್ಷೆಗೆ ಅರ್ಹ. ಅಪರಾಧವಿಲ್ಲದೆ ಯಾರನ್ನೂ ಕೊಲ್ಲಬಾರದು. ಸೋದರಮಾವನು ವಧೆಗೆ ಅರ್ಹನಲ್ಲ. ಆದರೂ ಅಪರಾಧಿಯಾದರೆ ಶಿಕ್ಷೆ ತಪ್ಪಿದ್ದಲ್ಲ. ಈ ಧರ್ಮಗಳನ್ನು ತಿಳಿಸುವುದಕ್ಕಾಗಿ ಕೃಷ್ಣನೇ ಹಾಗೆ ವ್ಯವಸ್ಥೆ ಮಾಡಿದ್ದಾನೆ.

ವಸುದೇವನ ಇತರ ಮಡದಿಯರ ವಿವರ. ಅವರವರ ಮಕ್ಕಳಿಗೂ ಕೃಷ್ಣನಿಗೂ ದ್ವೇಷ. ಪೌಂಡ್ರಕ ವಾಸುದೇವ ಮತ್ತು ಸೃಗಾಲ ವಾಸುದೇವರುಗಳ ಪೂರ್ವವೃತ್ತಾಂತ. ಕೃಷ್ಣನೊಡನೆ ದ್ವೇಷಕ್ಕೆ ಕಾರಣ. ಒಳ್ಳೆಯ ಮನೆತನದಲ್ಲಿ ಹುಟ್ಟಿದರು. ಜೀವನ ಯೋಗ್ಯತೆ ಬದಲಿಯಾಗಲಾರದು. ಅದಕ್ಕೆ ಇದು ನಿದರ್ಶನ. ಭೂಮಿಯಲ್ಲಿ ಅಂಗಭೂತವಾಗಿ ಅವತರಿಸಿದ ಎಲ್ಲ ದೇವತೆಗಳೂ ವ್ಯಾಸರ ಶಿಷ್ಯರಾಗಿ ಅವರಿಂದ ಒಳ್ಳೆಯ ಜ್ಞಾನವನ್ನು ಸಂಪಾದಿಸಿದರು.

ಮರೀಚಿಗೆ ಆರು ಜನ ಮಕ್ಕಳು. ಅವರು ಋಷಿ ಕುಮಾರರಾದರೂ ಸೌಂದರ್ಯದ ಗರ್ವವಿದ್ದಿತು. ದೇವಕ ಋಷಿಗಳನ್ನು ಕಂಡು ಪರಿಹಾಸ್ಯ ಮಾಡಿದರು. ದೇವಕರ ಶಾಪದಿಂದ ಕಾಲನೇಮಿಯ ಉದರದಲ್ಲಿ ಜನಿಸಿದರು.

ದೊಡ್ಡವರ ನಿಂದೆ ಅಥವಾ ಅವಹಾಸ್ಯ ಕೇಡಿಗೆ ಕಾರಣ. ಆ ಆರು ಜನ ಮಕ್ಕಳನ್ನೇ ದುರ್ಗಾದೇವಿಯವರು ಶ್ರೀಕೃಷ್ಣನ ಆಜ್ಞೆಯಿಂದ ದೇವಕಿಯ ಗರ್ಭದಲ್ಲಿ ಸ್ಥಾಪಿಸಿದ್ದರು. ಅವರನ್ನೇ ಕಂಸನು ಕೊಂದನು.

ದುರ್ಗೆಯೋ ಮಾಯೆ. ಮಾಯೆಯ ಅದ್ಭುತ ಶಕ್ತಿ ಪ್ರದರ್ಶನ ವಿಜ್ಞಾನದ ಆಧಾರದಿಂದ ಅದಕ್ಕೆ ಸಮಾಧಾನ.

ಪಾಂಡವರ ಚರಿತ್ರೆ. ನಾರಾಯಣಾಶ್ರಮದಲ್ಲಿರುವಾಗ ಪಾಂಡುರಾಜನು ಬ್ರಹ್ಮನ ಲೋಕಕ್ಕೆ ಹೋಗಲು ಬಯಸಿದನು. ಮುನಿಗಳು ತಡೆದರು. ನೀನು ಜಗತ್ತಿಗೆ ಬಂದ ಕಾರ್ಯ ಪೂರ್ತಿಯಾಗಿಲ್ಲ. ಅದು ಆಗದ ಹೊರತು ನೀನು ಅರ್ಹನಾಗಲಾರೆ. (ದೇವತೆಗಳು ಪಾಂಡುರಾಜನಲ್ಲಿ ಹುಟ್ಟಿ ಮುಂದಿನ ಕಾರ್ಯವಾಗಬೇಕಾಗಿದೆ.)

ಗಾಂಧಾರಿ ಗರ್ಭಿಣಿಯಾದದ್ದನ್ನು ಕೇಳಿ ಪಾಂಡುವು ಯೋಚಿಸಿದನು. ಋಷಿ ಶಾಪದಿಂದ ತನಗೆ ಮಕ್ಕಳಾಗುವಂತಿಲ್ಲ. ಮುಂದೇನು? ಪತ್ನಿಯಾದ ಕುಂತಿಯನ್ನು ಕರೆದು ತನ್ನ ದುಃಖವನ್ನು ತೋಡಿಕೊಂಡನು. 'ಉತ್ತಮವಾದ ದೇವತೆಯಿಂದ ಮಗನನ್ನು ಪಡೆ' ಎಂದು ಹೇಳಿದನು. ಕುಂತಿಯು ಆ ಮಾತನ್ನು ಬಹು ದುಃಖದಿಂದ ಕೇಳಿ, ದೇವತೆಗಳ ವಶೀಕರಣದ ಮಂತ್ರ ವಿಷಯ ಹೇಳಿದಳು.

ಕುಂತಿ ಮತ್ತು ಪಾಂಡುರಾಜನ ಮಾತುಗಳಲ್ಲಿ ಪಾತಿವ್ರತ್ಯದ ಮಹತ್ವ, ದಂಪತಿಗಳ ಆಚಾರ ವಿಚಾರ ಎಲ್ಲವೂ ಅಡಕವಾಗಿದೆ. ಯುಗಧರ್ಮದ ಬದಲಾವಣೆಯ ಪ್ರಸ್ತಾಪ. ಕೊನೆಗೆ ದೇವತೆಗಳ ಆಹ್ವಾನದಿಂದ ಮಕ್ಕಳನ್ನು ಪಡೆಯುವ ನಿರ್ಧಾರ.

ಅಂದಿನ ಕಾಲದಲ್ಲಿ ದೇವಾಂಶರು ಮಕ್ಕಳು ಪಡೆಯುವ ವಿಧಾನ. ಕುಂತಿಯ ಪಾತ್ರದ ಬಗೆಗೆ ಟೀಕೆ ಮಾಡುವವರಿಗೆ, ಶಂಕಿಸುವವರಿಗೆ ಅನೇಕ ಆಧಾರಗಳಿಂದ ಸಮಾಧಾನ. ಕೊನೆಗೆ ಇಂದಿನ ಲೌಕಿಕ ಉದಾಹರಣೆಯಿಂದ ಸ್ಪಷ್ಟೀಕರಣ.

ಆ ದಿನದ 'ನಿಯೋಗ' ಪದ್ಧತಿಯ ವಿಚಾರ. ಕಾಲ, ಧರ್ಮ, ಪ್ರಸಂಗ, ಆಳವಾದ ವಿಚಾರ ಎಲ್ಲವುಗಳ ವಿವರಣೆ.

ಕುಂತಿಯು ಧರ್ಮ, ವಾಯು, ಇಂದ್ರ ಇವರ ಅನುಗ್ರಹದಿಂದ ಧರ್ಮ, ಭೀಮ ಮತ್ತು ಅರ್ಜುನನ್ನು ಪಡೆದಳು. ಮಾದ್ರಿಯ ಅಪೇಕ್ಷೆ, ಪಾಂಡುವಿನ ಆಜ್ಞೆಯ ಮೇರೆಗೆ ಮಾದ್ರಿಗೂ ಮಂತ್ರೋಪದೇಶ. ಮಾದ್ರಿಯ ಕಪಟ ಪ್ರವೃತ್ತಿ ಒಂದೇ ಮಂತ್ರದಿಂದ ಇಬ್ಬರು ಸಾಮಾನ್ಯ ದೇವತೆಗಳನ್ನು ಕರೆದು, ಇಬ್ಬರು ಮಕ್ಕಳನ್ನು ಪಡೆದಳು. ಅವರೇ ನಕುಲ ಸಹದೇವರುಗಳು.

ಈ ವಿಷಯವನ್ನು ಕೇಳಿದ ಗಾಂಧಾರಿಗೆ ಹೊಟ್ಟೆಕಿಚ್ಚು. ಗಾಂಧಾರಿ ಸ್ವಭಾವತಃ ಒಳ್ಳೆಯವಳಾದರೂ ಕಲಿಯು ಅವಳ ಉದರದಲ್ಲಿ ಪ್ರವೇಶಿಸಿದ ಕಾರಣ, ಆ ದುಷ್ಟ ಬುದ್ಧಿ ಹುಟ್ಟಿದ್ದು. ಕಲಿಯ ಉದಯ ಅದು ನಿಸರ್ಗದ ನಿಯಮಗಳನ್ನು ಬಿಟ್ಟು. ಅವನೇ ದುರ್ಯೋಧನ. ಕಲಿಯ ಅನುಯಾಯಿಗಳಾದ ದುಷ್ಟ ಬುದ್ಧಿಗಳೇ ಅವನ ತಮ್ಮಂದಿರು ಮತ್ತು ತಂಗಿ ಒಟ್ಟು ನೂರಾ ಒಂದು ಜನ. ಎಲ್ಲರೂ ಪೂರ್ವದಲ್ಲಿ ದೈತ್ಯರುಗಳೇ.

ಪಾಂಡವರ ವೈಶಿಷ್ಟ್ಯ- ಅವರವರ ಗುಣ ಸ್ವಭಾವಗಳು. ವಾಯುವಿನಲ್ಲಿದ್ದ ಮೌಲಿಕ ಗುಣಗಳು.

ಶೇಷನೇ ಬಲರಾಮನು. ಅವನು ಎರಡು ಗರ್ಭಗಳಲ್ಲಿ ವಾಸ ಮಾಡಲು ಕಾರಣಗಳು. ಶೇಷನು ಅಣ್ಣನಾಗಿ ಏಕೆ ಹುಟ್ಟಿದನು? ಅದಕ್ಕೆ ಆಧಾರಗಳು.

ಶ್ರೀಕೃಷ್ಣನ ಪ್ರಾದುರ್ಭಾವ. ಪೂರ್ಣರೂಪ ಎಂದರೇನು? ಅದರ ಲಕ್ಷಣಗಳೇನು? ಅವುಗಳ ವಿವರ. ಶ್ರೀಕೃಷ್ಣನು ಎಲ್ಲರಂತೆ ಜನಿಸಿದನೇ? ದೈತ್ಯರಿಗೆ, ಅಜ್ಞಾನಿಗಳಿಗೆ ಕಂಡಂತೆ ಅವನು ನಿಜವಾಗಿ ಮಾನವನೇ? ಅವುಗಳ ವಿವರಣೆ.

ಶ್ರೀಕೃಷ್ಣನ ಒಬ್ಬರಲ್ಲಿ ಪ್ರಕಟವಾಗಿ ಇನ್ನೊಬ್ಬರಲ್ಲಿ ಏಕೆ ಬೆಳೆದ? ಅದಕ್ಕೆ ಕಾರಣಗಳು. ಶ್ರೀಕೃಷ್ಣನು ನಿಜವಾಗಿ ಬೆಳೆದನೇ? ಜನರು ಹಾಗೆ ಏಕೆ ತಿಳಿಯರು?

ಕಂಸನು ಕೊಂದದ್ದು ಆರು ಜನ ಮಕ್ಕಳನ್ನು ನಂತರ ಕೃಷ್ಣ ಇವನು ಎಂಟನೆಯವ ಹೇಗಾದ? ಕಂಸನ ತಪ್ಪು ಲೆಕ್ಕಾಚಾರ. ಕನ್ಯೆಯನ್ನು ಎತ್ತಿ ಅಪ್ಪಳಿಸಿಕೊಳ್ಳಲು ಪ್ರಯತ್ನಿಸಿದಾಗ ಆ ಕನ್ಯೆ ಮೇಲೆ ಹಾರಿದ್ದು. ಅಲ್ಲದೆ ನಿನ್ನ ವೈರಿ ಬೇರೆಡೆ ಹುಟ್ಟಿದ್ದಾನೆಂದು ಏಕೆ ಹೀಗೆ ಹೇಳಬೇಕಾಗಿತ್ತು? ಅವನ ಪಾಪದ ಕೊಡ ತುಂಬಬೇಕಾಗಿತ್ತು. ಜೊತೆಯಲ್ಲಿ ಅನೇಕ ದೈತ್ಯರ ನಾಶವಾಗಬೇಕಾಗಿದ್ದಿತು.

ಶ್ರೀಕೃಷ್ಣನ ಬಾಲಲೀಲೆಗಳು, ಪೂತನಿಯ ನಾಶ, ಜೀವದ್ವಯ ವಿಚಾರ, ಶಕಟಾಸುರನ ಅಂತ್ಯ, ತೃಣಾವರ್ತ ಮುಂತಾದ ದೈತ್ಯರ ಸಂಹಾರ.

ಬೃಹಸ್ಪತಿ ಆಚಾರ್ಯರ ಆಂಶಿಕ ಅವತಾರಗಳು.

ದ್ರೋಣ ಮತ್ತು ಉದ್ಧವರಾಗಲೂ ಕಾರಣಗಳು.

ಅಶ್ವತ್ಥಾಮರು ರುದ್ರಾಂಶಜರು.

ಶ್ರೀಕೃಷ್ಣನ ತಾಯಿಗೆ ಬಾಯಿಯಲ್ಲಿ ಬ್ರಹ್ಮಾಂಡವನ್ನು ಏಕೆ ತೋರಿದ? ತಾಯಿಯು ಶ್ರೀಕೃಷ್ಣನನ್ನು ತನ್ನ ಮಗನೆಂದು ತಿಳಿದಿದ್ದಳು. ಆ ಭ್ರಮೆಯನ್ನು ತೊಲಗಿಸಲು ಆ ರೀತಿ ಮಾಡಿದನು.

ಅದೇ ರೀತಿಯಲ್ಲಿ ಶ್ರೀಕೃಷ್ಣನನ್ನು ಕಟ್ಟಲು ಹಗ್ಗ ತಂದಾಗಲೂ ಕೂಡ, ನೀವು ಹಗ್ಗದಿಂದ ನನ್ನನ್ನು ಬಂಧಿಸಲಾರಿರಿ. ಭಕ್ತಿಪಾಶ ಮಾತ್ರ ಸಾಧ್ಯ. ಜ್ಞಾನ, ಭಕ್ತಿ, ವೈರಾಗ್ಯ ಮೂರೂ ಇದ್ದಾಗಲೇ ಸಾಧ್ಯ. ಅವುಗಳಲ್ಲಿ ಒಂದು ಕಡಿಮೆಯಾದರೂ ಬಂಧಿಸಲಾಗುವುದಿಲ್ಲ.

ಬೆಣ್ಣೆ–ಮೊಸರು ಏಕೆ ಕದ್ದನು?

ಈ ಲೀಲೆಯಿಂದ ಭಕ್ತರಲ್ಲಿದ್ದ ಭಕ್ತಿ, ತ್ಯಾಗ ಇವುಗಳನ್ನು ಅರಿತನು. ಸಂತೋಷದಿಂದ ಅರ್ಪಿಸಿದವರಿಗೆ ಮಂಗಳವನ್ನು ಉಂಟುಮಾಡಿದನು. ಕ್ರುದ್ಧರಾದವರಿಗೆ ಪುಣ್ಯವನ್ನು ಕದ್ದು ಪಾಪವನ್ನು ಕೊಡುತ್ತಿದ್ದನು.

ಕೊನೆಯಲ್ಲಿ ಯಾವ ಯಾವ ಮನ್ವಂತರಗಳಲ್ಲಿ ಯಾರ್ಯಾರು ಇಂದ್ರರಾದರು. ಅವರವರ ವಿವರಗಳನ್ನು ಕೊಡಲಾಗಿದೆ.

ನಿಜವಾದ ಸೌಂದರ್ಯ ಯಾವುದು? ಅದನ್ನು ಹೇಗೆ ಸಂಪಾದಿಸಬಹುದು. ಆಚಾರ್ಯರ ದೃಷ್ಟಿಯಲ್ಲಿ ಅದರ ಮಹತ್ವ.

ಮೇಲಿನ ಎಲ್ಲ ವಿಷಯಗಳನ್ನು ಮೆಲುಕು ಹಾಕುವುದು ಒಳಿತು.

--0---

# ಶ್ರೀ ಗುರುಭ್ಯೋ ನಮಃ
# ಅಧ್ಯಾಯ ಹದಿಮೂರು

ಶ್ರೀಮದಾಚಾರ್ಯರು ಹನ್ನೆರಡನೆಯ ಅಧ್ಯಾಯದಲ್ಲಿ ಕೌರವ ಪಾಂಡವರ ಉತ್ಪತ್ತಿಯ ಜೊತೆಜೊತೆಯಾಗಿ ಶ್ರೀಕೃಷ್ಣನ ಪ್ರಾದುರ್ಭಾವ ಮತ್ತು ಇತರ ಅಂಗಭೂತ ದೇವತೆಗಳನ್ನು ಅವರ ಚರಿತ್ರೆಗಳನ್ನೂ ತಿಳಿಸಿದ್ದಾರೆ. ಶ್ರೀಕೃಷ್ಣನ ಬಾಲಲೀಲೆಗಳಲ್ಲಿ ಪೂತನಿ, ಶಕಟ, ತೃಣಾವರ್ತ ಮೊದಲಾದವರ ಸಂಹಾರದ ಅದ್ಭುತ ಕಾರ್ಯಗಳನ್ನು ವಿವರಿಸುತ್ತ, ತಾಯಿ ಯಶೋದೆಗೆ ತನ್ನ ಬಗೆಗೆ ಸರಿಯಾದ ತಿಳುವಳಿಕೆಯಾಗಲಿ ಎಂದು ಬಾಯಿಯಲ್ಲಿ ವಿಶ್ವರೂಪವನ್ನೇ ತೋರಿದನು. ಆದರೂ ಯಶೋದೆಯ ಜೀವನದ ಯೋಗ್ಯತೆ ಉನ್ನತ ಮಟ್ಟದ್ದು ಇಲ್ಲದ ಕಾರಣ, ಆಕೆ ಭಯಭೀತಳಾಗಿ ಕಣ್ಣುಗಳನ್ನು ಮಾತ್ರ ಮುಚ್ಚಿಕೊಂಡಳು. ಶ್ರೀಕೃಷ್ಣನನ್ನು ತನ್ನ ಮಗನೆಂದೇ ಭಾವಿಸಿ ಭ್ರಮೆಗೊಳಗಾದಳು.

ಪ್ರಸ್ತುತ ಹದಿಮೂರನೆಯ ಅಧ್ಯಾಯದಲ್ಲಿ ಶ್ರೀಮದಾಚಾರ್ಯರು ಶ್ರೀಕೃಷ್ಣನ ಬಾಲಲೀಲೆಗಳನ್ನು ಮುಂದುವರಿಸಿದ್ದಾರೆ. ಜಗತ್ತಿಗೆ ಶ್ರೀಕೃಷ್ಣನ ಬಾಲಲೀಲೆಗಳು ಕೇವಲ ಆಟಗಳಾಗಿ ಕಂಡವು. ಮನರಂಜನೆಗಾಗಿ ಪ್ರತಿಯೊಂದು ಆಟದಲ್ಲಿ ಒಂದು ಉದ್ದೇಶ, ಒಂದು ತತ್ವ, ಧರ್ಮದ ಹಿನ್ನೆಲೆಯನ್ನು ಕಂಡಿದ್ದಾರೆ. ಅವುಗಳಿಗೆ ಆಧ್ಯಾತ್ಮಿಕದ ಮೆರುಗನ್ನು ಇತ್ತಿದ್ದಾರೆ.ಅವರ ಲೇಖನಿಯಲ್ಲಿಯೇ ಅದನ್ನು ಕಾಣೋಣ.

**ಓಂ ॥ ಗರ್ಗ: ಶೂರಸುತೋಕ್ತ್ಯಾ**
**ವ್ರಜಮಾಯಾತ್ ಸಾತ್ವತಾಂ ಪುರೋಧಾ: ಸ: ।**
**ಚಕ್ರೇ ಕ್ಷತ್ರಿಯ ಯೋಗ್ಯಾನ್**
**ಸಂಸ್ಕಾರಾನ್ ಕೃಷ್ಣರೋಹಿಣೇ ಸೂನ್ವೋ: ॥೧॥**

ಗರ್ಗಾಚಾರ್ಯರು, ಶೂರಪುತ್ರನಾದ ವಸುದೇವನ ಹೇಳಿಕೆಯಂತೆ ಗೋಕುಲಕ್ಕೆ ಬಂದರು. ಅವರು ಯಾದವ ಮನೆತನಕ್ಕೆ ಪುರೋಹಿತರು

ಕೂಡ. ಅವರು ಶ್ರೀಕೃಷ್ಣ ಮತ್ತು ಬಲರಾಮರಿಗೆ ಕ್ಷತ್ರಿಯರಿಗೆ ಯೋಗ್ಯವಾದ ಸಂಸ್ಕಾರ, ಜಾತಕರ್ಮ ಇತ್ಯಾದಿಗಳನ್ನು ಮಾಡಿದರು.

ಇಲ್ಲಿ ಆಚಾರ್ಯರು 'ಕೃಷ್ಣ-ರೋಹಿಣೀ ಸೂನ್ವೋಃ' ಎಂಬ ಪದಗಳನ್ನು ಬಹು ಮಾರ್ಮಿಕವಾಗಿ ಬಳಸಿದ್ದಾರೆ. ಈಗ ಸಧ್ಯ ಶ್ರೀಕೃಷ್ಣನು ನಂದನ ಮನೆಯಲ್ಲಿ ಬೆಳೆದಿದ್ದಾನೆ. ನಂದ ಯಶೋದೆಯರು ಇಲ್ಲಿ ಕ್ಷತ್ರಿಯರಲ್ಲ. ಶ್ರೀಕೃಷ್ಣನಿಗೆ ಕ್ಷತ್ರಿಯರ ಸಂಸ್ಕಾರ ಆಗಬೇಕಾಗಿದೆ. ಅಂತೆಯೇ ಅವರು 'ನಂದಕಂದ, ಯಶೋದೆನಂದನ' ಎಂಬ ಪದಗಳನ್ನು ಬಳಸಿಲ್ಲ. ಒಂದು ವೇಳೆ ರೂಢಿಯಲ್ಲಿರುವ ಮೇಲಿನ ಪದಗಳನ್ನು ಬಳಸಿದ್ದರೆ ಅಕ್ಷತ್ರಿಯರಿಗೆ ಯೋಗ್ಯವಾದ ಕರ್ಮಗಳನ್ನೇ ಮಾಡಿಸಬೇಕಾಗುತ್ತಿತ್ತು. ಆಗ ವರ್ಣಾಶ್ರಮ ಧರ್ಮಗಳಿಗೆ ಧಕ್ಕೆಯುಂಟಾಗುತ್ತಿತ್ತು.

**ಅಕ್ಷತ್ರ ಸಂಸ್ಕಾರ ಯುತೋ ಜಾತೋಽಪಿ ಕ್ಷತ್ರಿಯೇ ಕುಲೇ ।**
**ನ ಕ್ಷತ್ರಿಯೋ ಹಿ ಭವತಿ ಯಥಾ ವ್ರಾತ್ಯೋ ದ್ವಿಜೋತ್ತಮಃ ॥**

ಎನ್ನುವ ಸ್ಮೃತಿವಾಕ್ಯವನ್ನು ಮನದಂದು ಈ ಪದಗಳನ್ನು ಬಳಸಿರುವರೆಂದು ಹೇಳಬಹುದು.

ಬೇರೆ ಗ್ರಂಥಗಳಲ್ಲಿ "ಗೌಪ್ಯವಾಗಿ ಸಂಸ್ಕಾರ ಮಾಡಲಾಯಿತು" ಎಂಬ ಭಾವನೆಯ ಪದಗಳು ಬಂದಿವೆ.

ಸಾಮಾನ್ಯವಾಗಿ, ಕಂಸನಿಗೂ ಈ ಸಮಾಚಾರ ತಿಳಿಯಬಾರದು. ತಿಳಿದರೆ ಅನರ್ಥವಾದೀತು ಎಂಬ ಭಯ ತಂದೆ ತಾಯಿಗಳಿಗೆ ಇದ್ದಿತು. ಅದಕ್ಕಾಗಿ ಅವರು ಆ ರೀತಿ ಮಾಡಿದರು ಎಂದು ಹೇಳುವುದುಂಟು. ಇಲ್ಲಿ ಆಚಾರ್ಯರ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ಮೇಲಿನ ವಿಷಯವಲ್ಲಿ ವಿಚಾರಿಸಿದಾಗ, ಆಚಾರ್ಯರಾದ ಗರ್ಗರು ರಹಸ್ಯವಾಗಿ ನಂದಗೋಪ-ಯಶೋದೆಯರಿಗೂ ಅರಿವಾಗದಂತೆ ಮಾಡಿದರು ಎಂದು ಅರ್ಥೈಸಿದರೆ ಇನ್ನು ಹೆಚ್ಚಿನ ಮಹತ್ವ ದೊರಕೀತು. ಏಕೆಂದರೆ ಗರ್ಗಾಚಾರ್ಯರು ಶಾಸ್ತ್ರಗಳನ್ನು ಚೆನ್ನಾಗಿ ಬಲ್ಲವರು. ಅವರು ಯಾವ ಕಾರ್ಯವನ್ನೇ ಮಾಡಲಿ ಯೋಚಿಸಿಯೇ ಮಾಡುವರು ಎಂದು ಬೇರೆ ಹೇಳಬೇಕಾಗಿಲ್ಲ.

**ಊಚೇ ನಂದ ಸುತೋಽಯಂ**

**ತವ ವಿಷ್ಣೋರ್ನಾವಮೋ ಗುಣೈಃ ಸರ್ವೈಃ ।**

**ಸರ್ವೇ ಚೈತತ್ತ್ರಾತಾಃ**

**ಸುಖ ಮಾಪ್ಸ್ಯಂತ್ಯುನ್ನತಂ ಭವತ್ಪೂರ್ವಾಃ ॥೨॥**

ಜಾತಕರ್ಮದ ನಂತರ ಗರ್ಗಾಚಾರ್ಯರು, ನಂದನನ್ನು ಕರೆದು, "ಈ ನಿನ್ನ ಮಗನು ಸರ್ವಗುಣಗಳಿಂದಲೂ ವಿಷ್ಣುವಿಗೆ ಕಡಿಮೆಯಲ್ಲ. ಈತನ ರಕ್ಷಣೆಯಲ್ಲಿ ಮುಂದೆ ನೀವು ಅತ್ಯಂತ ಉನ್ನತವಾದ ಸುಖವನ್ನು ಪಡೆಯಲಿದ್ದೀರಿ" ಎಂದು ಹೇಳಿದರು.

ಈ ಶ್ಲೋಕದಲ್ಲಿ ನಂದನು ಕೂಡ, ಯಶೋದೆಯಂತೆ ಶ್ರೀಕೃಷ್ಣನನ್ನು ತನ್ನ ಮಗನೆಂದೇ ಭ್ರಮಿಸಿದ್ದನು. ಶ್ರೀಮದಾಚಾರ್ಯರು ಗರ್ಗಾಚಾರ್ಯರ ಮುಖದಿಂದ ಆ ಭ್ರಮೆಯನ್ನು ದೂರೀಕರಿಸಿದ್ದಾರೆ. ಜನರಿಗುಂಟಾದ ಭ್ರಮೆಯನ್ನು ದೂರಮಾಡುವುದೇ ಶ್ರೀಮದಾಚಾರ್ಯರ ಮುಖ್ಯ ಗುರಿ. 'ಶ್ರೀಕೃಷ್ಣನೇ ನಾರಾಯಣನು' ಎಂದು ಹೇಳಿ 'ಅವತಾರಗಳಲ್ಲಿ ಭೇದವಿಲ್ಲ' ಎಂಬ ತತ್ತ್ವವನ್ನು ವ್ಯಕ್ತಪಡಿಸಿದ್ದಾರೆ.

**ಇತ್ಯುಕ್ತಃ ಸ ಮುಮೋದ**

**ಪರಯಯೌ ಗರ್ಗೋಽಪಿ ಕೇಶವೋಽಥಾದ್ಯಃ ।**

**ಸ್ವಪದೈರಗ್ರಜಯುಕ್ತ-**

**ಶ್ಚಕ್ರೇ ಪುಣ್ಯಂ ವ್ರಜನ್ ವ್ರಜೋದ್ದೇಶಮ್ ॥೩॥**

ಗರ್ಗಾಚಾರ್ಯರಿಂದ ಆ ಮಾತುಗಳನ್ನು ಕೇಳಿದ ನಂದನೂ ಆನಂದಿತನಾದನು. ಗರ್ಗಾಚಾರ್ಯರು ಅಲ್ಲಿಂದ ಹೊರಟುಹೋದರು. ಇತ್ತ (ಕೇಶವ) ಶ್ರೀಕೃಷ್ಣನು ಪುಟ್ಟ ಪುಟ್ಟ ದಿಟ್ಟವಾದ ಹೆಜ್ಜೆಗಳನ್ನಿಕ್ಕುತ್ತಾ ಅಣ್ಣನೊಂದಿಗೆ ಕೂಡಿ ಓಡಾಡಹತ್ತಿದನು. ಇದರಿಂದ ಇಡೀ ಗೋಕುಲವೇ ಪುಣ್ಯಕ್ಷೇತ್ರವಾಯಿತು. ಎಲ್ಲರೂ ಸಂತಸಗೊಂಡರು.

**ಸ ಕದಾಚಿಚ್ಛಕಟು ಭಾವಂ**

**ಕುರ್ವಂತ್ಯಾ ಮಾತುರಾತ್ಮನೋ ಭೂಯಃ ।**

**ಅಪನೇತುಂ ಪರಮೇಶೋ**

**ಮೃದಂ ಜಘಾಸೇಕ್ಷತಾಂ ವಯಸ್ಯಾನಾಮ್ ॥೮॥**

ಶ್ರೀಕೃಷ್ಣನನ್ನು ತನ್ನ ಮಗನೆಂದು ಭ್ರಾಂತಿಗೊಂಡ ತನ್ನ ತಾಯಿಯ ಈ ಭಾವನೆಯನ್ನು ಅಂತ್ಯಗೊಳಿಸುವುದಕ್ಕಾಗಿ ಆ ಪರಮೇಶ್ವರನು ತನ್ನ ಸಮವಯಸ್ಸಿನ ಮಕ್ಕಳೊಂದಿಗೆ ಆಡುತ್ತಿರುವಾಗ ಮೃತ್ತಿಕೆ (ಮಣ್ಣು)ನ್ನು ತಿಂದನು.

ವಿ.ವಿ. ಪರಮಾತ್ಮನು ಸುಜೀವಿಯನ್ನು ಉದ್ಧರಿಸುವುದಕ್ಕಾಗಿ ನಾನಾ ರೀತಿಯಿಂದ ಪರೀಕ್ಷಿಸುತ್ತಾನೆ. ಪುರಂದರದಾಸರಿಗೆ ಮಾಡಲಿಲ್ಲವೇ? ಹಾಗೆ ಮೊದಲು ಶ್ರೀಕೃಷ್ಣನು ತನ್ನ ಬಾಯಿಯಲ್ಲಿ ಬ್ರಹ್ಮಾಂಡವನ್ನೇ ತೋರಿದರೂ ಆಕೆಯ ಭ್ರಾಂತಿ ಹೋಗಿರಲಿಲ್ಲ. ಮೇಲಿನದು ಮತ್ತೊಂದು ಪ್ರಯತ್ನ.

ಶ್ರೀಕೃಷ್ಣನ ಬಾಲಲೀಲೆಯ ಒಂದೊಂದು ಆಟದಲ್ಲೂ ಒಂದೊಂದು ಮಹತ್ತರವಾದ ಉದ್ದೇಶವನ್ನು ಕಾಣಬಹುದು.

**ಮಾತ್ರೋ ಪಾಲಬ್ಧ ಈಶೋ ಮುಖ ವಿಕೃತಿ ಮಕ –**

**ರ್ನಾಂಬ ಮೃಧ್ವಹೇತಾಹಮ್ ।**

**ಪಶ್ಯೇತ್ಯಾಸ್ಯಾಂತರೇತು ಪ್ರಕೃತಿ ವಿಕೃತಿ ಯುಕ್ –**

**ಸಾ ಜಗತ್ ಪರ್ಯಪಶ್ಯತ್ ।**

**ಇತ್ಥಂ ದೇವೋಽಪ್ಯಚಿಂತ್ಯಾಮಪರದುರಧಿಗಾಂ**

**ಶಕ್ತಿ ಮುಚ್ಚಾಂ ಪ್ರದರ್ಶ್ಯ ।**

**ಪ್ರಾಯೋ ಜ್ಞಾತಾತ್ಮ ತತ್ತ್ವಾಂ ಪುನರಪಿ ಭಗವಾ –**

**ನಾ ವೃಣೋದಾತ್ಮ ಶಕ್ತ್ಯಾ ॥೯॥**

ಮಾತೆಗೆ ತನ್ನ ನಿಜರೂಪವನ್ನು ತೋರಿಸುವ ಉದ್ದೇಶದಿಂದ ಮಣ್ಣನ್ನು ತಿಂದಂತೆ ನಟಿಸಿ ಮೋರೆಯನ್ನು ಕೆಡಿಸಿಕೊಂಡನು. ದೂರದಿಂದ ಇದನ್ನು ಕಂಡ ತಾಯಿ ಓಡಿ ಬಂದು, 'ಬಾಯಿ ತೆರೆ' ಎಂದು ಕೂಗಿದಾಗ ಬಾಯಿ ತೆರೆದನು. ತೆರೆದ ಬಾಯಿಯಲ್ಲಿ ಸಕಲ ಬ್ರಹ್ಮಾಂಡ, ಮಹತ್ತತ್ವಗಳು, ಅವುಗಳ ವಿಕೃತ ರೂಪಗಳು, ಸಮಸ್ತ ಲೋಕಗಳನ್ನು ಕಂಡಳು. ಈತನು ದೇವನೇ ಇದ್ದಾನೆ. ಅಚಿಂತ್ಯ ಶಕ್ತಿಯುಳ್ಳವನು. ಎಲ್ಲರಿಗೂ ಅಧಿಕನು,

ಸರ್ವಸಮರ್ಥನು ಎಂದು ಆ ಪ್ರದರ್ಶನದಿಂದ ತಿಳಿದುಕೊಂಡಳು. ತತ್ವಜ್ಞಾನ ಸ್ವರೂಪಿಯಾದ ಭಗವಂತನನ್ನು ಅರಿತಳು. ಇದು ಬಹಳ ಹೊತ್ತು ಉಳಿಯದಿರಲಿ ಎಂದು ಶ್ರೀಕೃಷ್ಣನು ಪುನಃ ತನ್ನ ಮಾಯೆಯಿಂದ ಅದನ್ನು ಮರೆಸಿಬಿಟ್ಟನು.

**ಇತಿ ಪ್ರಭುಃ ಸಲೀಲಯಾ ಹರಿರ್ಜಗದ್ವಿಡಂಬಯನ್ ।**
**ಚಚಾರ ಗೋಷ್ಠ ಮಂಡಲೇऽ ಪ್ಯನಂತ ಸೌಖ್ಯಚಿದ್ಘನಃ ॥೬॥**

ಈ ರೀತಿ ಪ್ರಭುವಾದ ಶ್ರೀಕೃಷ್ಣನು ತನ್ನ ಮನರಂಜನೆಯ ಆಟಗಳಿಂದ ವಿಡಂಬನೆಗೈಯುತ್ತ ಗೋಕುಲದ ಜನರಿಗೂ ಮಾತಾ–ಪಿತೃಗಳಿಗೂ ಆನಂದವೀಯುತ್ತಿದ್ದನು. ಎಷ್ಟಾದರೂ ಪರಮಾತ್ಮನು ಅನಂತ ಸೌಖ್ಯಗಳ ಆನಂದ ಮೂರ್ತಿಯಲ್ಲವೇ?

**ಕದಾಚಿದೀಶ್ವರಃ ಸ್ತನಂ ಪಿಬನ್ಯಶೋದಯಾ ಪಯಃ ।**
**ಸೃತಂ ವಿಧಾತು ಮುಜ್ಝಿತೋ ಬಭಂಜದಧ್ಯಮತ್ರಕಮ್ ॥೭॥**

ಒಂದು ದಿನ ಶ್ರೀಕೃಷ್ಣನು ಸ್ತನವನ್ನು ಪಾನಮಾಡುತ್ತಿದ್ದನು. ಆ ಸಮಯದಲ್ಲಿ ಒಲೆಯ ಮೇಲಿಟ್ಟ ಹಾಲು ಉಕ್ಕಹತ್ತಿತು. ಅದನ್ನು ತಿಳಿದ ಯಶೋದೆಯು, ಆ ಕೂಸನ್ನು ಅವಸರದಿಂದ ಅಲ್ಲಿಯೇ ಕುಳ್ಳಿರಿಸಿ ಒಳಗೆ ನಡೆದಳು. ಆಗ ಶ್ರೀಕೃಷ್ಣನು ಅಲ್ಲಿದ್ದ ಮೊಸರ ಕಡೆಯುವ ಗಡಿಗೆಯನ್ನೇ ಒಡೆದುಬಿಟ್ಟನು.

ವಿ.ವಿ. ಶ್ರೀಮದಾಚಾರ್ಯರು, ಮೇಲಿನ ಎರಡು ಶ್ಲೋಕಗಳಲ್ಲಿ ಅವು ತೋರಿಕೆಗೆ ಆಟಗಳಾಗಿ ಕಂಡರೂ ಅವುಗಳಲ್ಲಿ ಎರಡು ಉದ್ದೇಶಗಳು ಅಡಗಿವೆ. (೧) ಪರಮಾತ್ಮನು ಅವತಾರಗಳಲ್ಲಿ ಯಾವ ಕಾರ್ಯಗಳನ್ನೇ ಮಾಡಲಿ ಅವು ವಿಡಂಬನೆಗಾಗಿ, ಅವು ಕೇವಲ ನಟನೆಗಳು ಮಾತ್ರ.

(೨) ಜಗತ್ತಿಗೆ ಸರ್ವೋತ್ತಮನಾದ, ಸೃಷ್ಟಿಕರ್ತನಾದ ಪರಮಾತ್ಮನೇ ತನ್ನ ತೊಡೆಯ ಮೇಲಿರುವಾಗ ಅದನ್ನು ತಿಳಿಯದೆ ಕೇವಲ ಹಾಲಿನ ಮೇಲಿನ ಮೋಹಕಾಗಿ, ಪರಮಾತ್ಮನನ್ನು ಅಲ್ಲಗಳೆದು ಒಳಗೆ ಹೋದಳು. ಇದು ಅಜ್ಞಾನಿಯಾದ ಜೀವನ ಲಕ್ಷಣ.

**ಪ್ರಮಥ್ಯ ಮಾನದಧ್ಯುರುಪ್ರಜಾತಮಿಂದು ಸನ್ನಿಭಮ್ ।**
**ನವಂ ಹಿ ನೀತಮಾದದೇ ರಹೋ ಜಘಾನ ಚೇಶಿತಾ ॥೮॥**

ಮೊಸರನ್ನು ಚೆನ್ನಾಗಿ ಮಥಿಸಿದಾಗ, ಅದರಲ್ಲಿ ಚಂದ್ರನಿಗೆ ಸಮನಾದ, (ಬಿಳುಪಾದ, ತಂಪಾದ ಮತ್ತು ದುಂಡಾದ) ಹೊಸ ಬೆಣ್ಣೆಯ ಮುದ್ದೆ ಹೊರಬಂದಿತು. ಶ್ರೀಕೃಷ್ಣನು ಗುಟ್ಟಾಗಿ ತೆಗೆದುಕೊಂಡು ತಿಂದುಬಿಟ್ಟನು.

ಶ್ರೀಕೃಷ್ಣನು ಬೆಣ್ಣೆಯನ್ನೇ ಏಕೆ ತಿಂದನು? ಅದಕ್ಕೆ ಸಮಾಧಾನ.

**ಪ್ರಜಾಯತೇ ಹಿಯತುಲೇ ಯಥಾಯುಗಂ ಯಥಾವಯ: ।**
**ತಥಾ ಪ್ರವರ್ತನಂ ಭವೇದ್ಧಿವೌಕಸಾಂ ಸಮುದ್ಭವೇ ॥೯॥**
**ಇತಿ ಸ್ವಧರ್ಮಮುತ್ತಮಂ ದಿವೌಕಸಾಂ ಪ್ರದರ್ಶಯನ್ ।**
**ಅಧರ್ಮಪಾವಕೋಽಪಿ ಸನ್ ವಿಡಂಬತೇ ಜನಾರ್ದನ: ॥೧೦॥**

ಯಾವ ಕುಲದಲ್ಲಿ, ಯಾವ ಯುಗದಲ್ಲಿ ತಾನು ಹುಟ್ಟಿದ್ದಾನೆ. ಯಾವ ವಯಸ್ಸಿನಲ್ಲಿದ್ದಾನೆ, ಅವುಗಳಿಗೆ ತಕ್ಕಂತೆ ಅನುಸರಿಸಿ ವರ್ತಿಸುವುದೇ ದೇವತೆಗಳ ಆದ್ಯ ಕರ್ತವ್ಯ ಮತ್ತು ಅನಿವಾರ್ಯ. ದೇವತೆಗಳಿಗೆ ಇದನ್ನು ತಿಳಿಸುವುದಕ್ಕಾಗಿ ತಾನು ಹಾಗೆ ನಟಿಸಿದ್ದಾನೆ.

ಸ್ವಧರ್ಮವು ಉತ್ತಮವಾದದ್ದು. ಅಧರ್ಮವು ಬೆಂಕಿಯಂತೆ ದು:ಖಕರವಾದದ್ದು ಎಂದು ತಿಳಿದರೂ ದೇವತೆಗಳು ಅದರಂತೆ ಮಾಡಲೇಬೇಕಾಗುತ್ತದೆ, ಎಂದು ವಿಡಂಬನೆಗಾಗಿ ಜನಾರ್ದನನು ತಾನು ಮಾಡಿ ತೋರಿದ್ದಾನೆ.

'ಮರ್ತ್ಯಸ್ಯ ಮರ್ತ್ಯ ಶಿಕ್ಷಣಂ" ಎಂಬ ವಾಕ್ಯವು ಇದೇ ಅರ್ಥವನ್ನೇ ಸಮರ್ಥಿಸುತ್ತದೆ.

**ನೃತಿರ್ಯಗಾದಿ ರೂಪಕ: ಸಬಾಲ್ಯಯೌವನಾದಿಯುಕ್ ।**
**ಕ್ರಿಯಾಶ್ಚ ತತ್ತದುದ್ಭವಾಃ ಕರೋತಿ ಶಾಶ್ವತೋಽಪಿಸನ್ ॥೧೧॥**

ಪರಮಾತ್ಮನು ಶಶ್ವದೇಕಪ್ರಕಾರವಾಗಿ ಇರತಕ್ಕವನು ಆತನಿಗೆ ವೃದ್ಧಿ–ಹ್ರಾಸಗಳಿಲ್ಲ. ಆದರೂ 'ನೃತಿರ್ಯಗಾದಿ ರೂಪಕಃ' ಅಂದರೆ, ಮತ್ಸ್ಯ, ಕೂರ್ಮ ವರಹ ನಾರಸಿಂಹ ಮೊದಲಾದ ಅವತಾರಗಳಲ್ಲೂ ರಾಮ, ಕೃಷ್ಣ ಮೊದಲಾದ ಮಾನವ ರೂಪಗಳಲ್ಲೂ ಆಯಾ ಕಾಲಕ್ಕೆ ತಕ್ಕಂತೆ ಕ್ರೀಡೆಗಳನ್ನು ಮಾಡಿ ತೋರಿದ್ದಾನೆ. ಬಾಲ್ಯ, ಯೌವನ, ವೃದ್ಧಾಪ್ಯ, ಮೊದಲಾದ ಅವಸ್ಥೆಗಳನ್ನೂ ಪ್ರದರ್ಶಿಸಿದ್ದಾನೆ.

**ಸ ವಿಪ್ರರಾಜಗೋಪಕ ಸ್ವರೂಪಕಸ್ತ ದುದ್ಭವಾಃ ।**
**ತದಾ ತದಾ ವಿಚೇಷ್ಟತೇ ಕ್ರಿಯಾಃ ಸುರಾನ್ವಿಶಿಕ್ಷಯನ್ ॥೧೨॥**

ಆ ಪರಮಾತ್ಮನು ವಿಪ್ರ–ವ್ಯಾಸ ಮತ್ತು ಪರಶುರಾಮರ ಅವತಾರಗಳು. ರಾಜ– ರಾಮಚಂದ್ರ ಗೋಪಕ–ಶ್ರೀಕೃಷ್ಣ ಮೊದಲಾದ ಅವತಾರಗಳನ್ನು ಎತ್ತಿದಾಗಲೂ, ಆಯಾಕಾಲ, ಮತ್ತು ಸ್ಥಿತಿಗಳಿಗೆ ತಕ್ಕಂತೆ ಕ್ರಿಯೆಗಳನ್ನು ಮಾಡಿ ತೋರಿಸಿದ್ದಾರೆ. ಇವೆಲ್ಲವೂ ದೇವತೆಗಳಿಗೆ ಶಿಕ್ಷಣಕ್ಕಾಗಿಯೇ (ಕಲಿಯುವುದಕ್ಕಾಗಿ) ಜಗತ್ತಿಗೆ ಮಾರ್ಗದರ್ಶನಕ್ಕಾಗಿಯೂ ಮಾಡಿದ್ದಾನೆ.

ಈ ಎರಡು ಶ್ಲೋಕಗಳನ್ನು ಓದಿದಾಗ ಒಂದು ಸಂಶಯ ಬರಲು ಆಸ್ಪದವಿದೆ. ಅದು ಏನೆಂದರೆ

ಮೊದಲ ಶ್ಲೋಕದಲ್ಲಿ 'ನೃತಿರ್ಯಗಾದಿ ರೂಪಕಃ' ಎಂದು ಹೇಳಿ ಆಗಿದೆ.

ಎರಡನೆಯ ಶ್ಲೋಕದಲ್ಲಿ 'ಸ ವಿಪ್ರರಾಜಗೋಪಕ ಸ್ವರೂಪಕಃ' ಎಂದಿದೆ. ಇದು ಪುನರುಕ್ತಿ ಅಥವಾ ದ್ವಿರುಕ್ತಿಯಾಗಲಿಲ್ಲವೇ? ಆಚಾರ್ಯರಂಥವರು ಇದನ್ನು ಬರೆಯಲು ಕಾರಣವಾದರೂ ಏನು? ಸಮಾಧಾನ.

ಮೊದಲ ಶ್ಲೋಕದ ಪದಪುಂಜದಲ್ಲಿ ಬರುವ ಅವತಾರಗಳು ಪರಮಾತ್ಮನವೇ? ಆದರೂ ಅವುಗಳಲ್ಲಿ ವಯೋವಸ್ಥಾಗಳು, ತಕ್ಕ ಕ್ರಿಯೆಗಳು ಎದ್ದು ಕಾಣುವುದಿಲ್ಲ. ಅವುಗಳ ಸ್ಪಷ್ಟೀಕರಣಕ್ಕಾಗಿಯೇ ಎರಡನೆಯ ಶ್ಲೋಕದಲ್ಲಿ 'ಪದಪುಂಜ ವಿಪ್ರರಾಜ ಮತ್ತು ಗೋಪಕ' ಬಳಸಿದ್ದಾರೆ. ಈ ಮೂರೂ ಅವತಾರಗಳಲ್ಲಿ ವಯಸ್ಸು, ಅವುಗಳಿಗೆ ತಕ್ಕ ಕ್ರಿಯೆಗಳು ವ್ಯಕ್ತವಾಗುತ್ತದೆ. ಎರಡನೆಯ ಶ್ಲೋಕ ಮೊದಲ ಶ್ಲೋಕದ ಸ್ಪಷ್ಟೀಕರಣವೇ ಎಂದು ಹೇಳಬಹುದು. ದ್ವಿರುಕ್ತಿಯಲ್ಲ, ಪುವನರುಕ್ತಿಯಂತೂ ಅಲ್ಲವೇ ಅಲ್ಲ.

**ತಥಾ ಪ್ಯ ನನ್ಯ ದೇವಾತಾ ಸಮಂ ನಿಜಂ ಬಲಂ ಪ್ರಭುಃ ।**
**ಪ್ರಕಾಶಯನ್ ಪುನಃ ಪುನಃ ಪ್ರಕಾಶ (ಪ್ರದರ್ಶ) ಯತ್ಯಜೋ ಗುಣಾನ್ ॥೧೩॥**

"ಅನ್ಯ ದೇವತೆಗಳಲ್ಲಿ ಯಾರೂ ಕೂಡ ಶ್ರೀಹರಿಗೆ ಸಮನಾಗಲಿ, ಬಲದಲ್ಲಾಗಲಿ ಪ್ರಭುತ್ವದಲ್ಲಾಗಲಿ ಶಕ್ತಿ ಮತ್ತು ಸಾಮರ್ಥ್ಯದಲ್ಲಾಗಲಿ,

ಗುಣಗಳಲ್ಲಾಗಲಿ ಸರಿಯಾಗಲಾರರು" ಎಂಬುದನ್ನು ತೋರಿಸುವುದಕ್ಕಾಗಿಯೇ ಮತ್ತೆ ಮತ್ತೆ ಅವತರಿಸಿದ್ದಾನೆ.

**ಅಥಾತ್ತಯಷ್ಟೀಮಿಾಷ್ಯ ತಾಂ ಸ್ವ ಮಾತರಂ ಜಗದ್ಗುರುಃ ।**
**ಸ ಪುಪ್ಲುವೇ ತಮಸ್ವಗಾನ್ಮನೋ ವಿದೂರಮಂಗನಾ ॥೧೪॥**

ತನ್ನ ತಾಯಿಗೆ, ತಾನು ಜಗದ್ಗುರು ಎಂದು ತೋರುವುದಕ್ಕಾಗಿಯೇ ಹೀಗೆ ಮಾಡಿದನು. ತನ್ನ ತಾಯಿಯು ಹಿಡಿದು ಹೊಡೆಯುವಳಲ್ಲಾ ಎಂಬ ಭೀತಿಯನ್ನು ತೋರುವಂತೆ ನಟಿಸಿ ಓಡಹತ್ತಿದನು. ತಾಯಿಯು ಕೂಡ ಶ್ರೀಕೃಷ್ಣನನ್ನು ಹಿಡಿಯುವ ಉದ್ದೇಶದಿಂದ ಓಡಪತ್ತಿದಳು. ಯೋಗಿಗಳ ಮನಕ್ಕೂ ದೊರಕದ ಶ್ರೀಕೃಷ್ಣನು ಯಶೋದೆಯ ಕೈಗೆ ದೊರೆಯಬಲ್ಲನೇ?

**ಪುನಃ ಸಮಿಾಕ್ಷ್ಯ ತಚ್ಛ್ರಮಂ ಜಗಾಮ ತತ್ಕರ ಗ್ರಹವರ್ ।**
**ಪ್ರಭುಃ ಸ್ವಭಕ್ತವಶ್ಯತಾಂ ಪ್ರಕಾಶಯನ್ನುರುಕ್ರಮಃ ॥೧೫॥**

ಮತ್ತೆ ತಾಯಿಯ ಶ್ರಮವನ್ನರಿತು, ಭಕ್ತವತ್ಸಲನಾದ ಶ್ರೀಹರಿಯು ತಾಯಿಯ ಕೈಗೆ ಸಿಕ್ಕನು. (ಇದು ಆತನ ಕರುಣೆ) ಇದರಿಂದ ಪ್ರಭುವು ಭಕ್ತರಿಗೆ ವಶನಾಗಬಲ್ಲನೆಂಬುದನ್ನು ತೋರಿಸಿಕೊಟ್ಟನು.

**ಸದಾವಿಮುಕ್ತ ಮಾಶ್ವರಂ ನಿಬದ್ಧು ಮಂಜಸಾದದೇ ।**
**ಯದ್ಯೈವ ದಾಮ ಗೋಪಿಕಾ ನ ತತ್ಪುರೂರ ತಂ ಪ್ರತಿ ॥೧೬॥**

ಸದಾ ಬಂಧನರಹಿತನಾದ ಪರಮಾತ್ಮನನ್ನು ಆ ಯಶೋದೆಯು ಬಂಧಿಸಲು ಪ್ರಯತ್ನಿಸಿದಳು ಅದಕ್ಕಾಗಿ ಅವಳು ಗೋವುಗಳನ್ನು ಕಟ್ಟುವ ಹಗ್ಗವನ್ನು ತಂದಳು. ಆ ಹಗ್ಗವು ಅವನನ್ನು ಕಟ್ಟುವುದಕ್ಕೆ ಪೂರ್ತಿಯಾಗಲಿಲ್ಲ. (ಕಟ್ಟಲು ಸಾಲಲಿಲ್ಲ).

**ಸಮಸ್ತದಾಮ ಸಂಚಯಃ ಸುಸಂಧಿತೋಽಪ್ಯಪೂರ್ಣತಾಮ್ ।**
**ಯಯಾವನಂತವಿಗ್ರಹೇ ಶಿಶುತ್ವ ಸಂಪ್ರದರ್ಶಕೇ ॥೧೭॥**

ಮನೆಯಲ್ಲಿರುವ ಸಮಸ್ತ ಹಗ್ಗಗಳನ್ನು ತಂದು ಅವುಗಳನ್ನು ಕೂಡಿಸಿ ಕಟ್ಟಿದರೂ ಅದು ಪೂರ್ತಿಯಾಗಲಿಲ್ಲ. ಅನಂತ ವಿಗ್ರಹಗಳುಳ್ಳ ಅಪರಿಮಿತ

ವ್ಯಾಪ್ತನಾದಾಗ್ಯೂ ಶ್ರೀಹರಿ ತನ್ನ ಶಿಶುರೂಪವನ್ನೇ ಪ್ರದರ್ಶಿಸಿದರೂ ಆ ಹಗ್ಗ ಪೂರ್ತಿಯಾಗಲಿಲ್ಲ.

**ಅಬಂಧಯೋಗ್ಯತಾಂ ಪ್ರಭುಃ ಪ್ರದರ್ಶಲೀಲಯಾ ಪುನಃ ।**
**ಸ ಏಕವತ್ಸ ಪಾಶಕಾಂತರಂಗತೋऽಖಿಲಂಭರಃ ॥೧೮॥**
**ಸುತಸ್ಯ ಮಾತೃವಶ್ಯತಾಂ ಪ್ರದರ್ಶಧರ್ಮಮೀಶ್ವರಃ ।**
**ಬಭಂಜ ತೌ ದಿವಿಸ್ಪೃಶೌ ಯಮಾರ್ಜುನೌ ಸುರಾತ್ಮಜೌ ॥೧೯॥**

'ವಿಶ್ವಂಭರನಾದ ಶ್ರೀಹರಿಯು ಬಂಧನಕ್ಕೆ ಯೋಗ್ಯನಲ್ಲ'' ಎಂಬುದನ್ನು ತೋರಿಯೂ, ತನ್ನ ಲೀಲಾಮಾತ್ರದಿಂದ ಬಂದು ಕರುವಿಗೆ ಕಟ್ಟುವ ಚಿಕ್ಕ ಹಗ್ಗದಿಂದಲೇ ಕಟ್ಟಿಸಿಕೊಂಡನು.

'ಮಗನಾದವನು ತಾಯಿಯ ವಶದಲ್ಲಿಬೇಕು' ಎಂಬ ಧರ್ಮವನ್ನು ಪ್ರದರ್ಶಿಸಿದ್ದಾನೆ. ಮುಂದೆ ಶ್ರೀಹರಿ ಆಟವಾಡುತ್ತ ಅಂಗಳದಲ್ಲಿ ಬೆಳೆದ ಗಿಡಗಳನ್ನು ಮುರಿದು, ಯಮಾರ್ಜುನರ ಮಕ್ಕಳನ್ನು ಹೊರತಂದು, ಇಬ್ಬರು ರಾಕ್ಷಸರನ್ನು ಸಂಹರಿಸಿದ್ದಾನೆ.

ವಿ.ವಿ. ಮೇಲಿನ ಶ್ಲೋಕಗಳಲ್ಲಿ ಪರಮಾತ್ಮನು 'ಅಣು' ಮತ್ತು 'ಬೃಹತ್' ಆಗಬಲ್ಲನೆಂಬುದನ್ನು ತೋರಿದ್ದಾನೆ.

**ಪುರಾಧುನಿಶ್ಚಮುಸ್ತಥಾಪಿ ಪೂತನಾ ಸಮನ್ವಿತೌ ।**
**ಅನೋಕ್ಷ ಸಂಯುತೌ ತಪಃ ಪ್ರಚಕ್ರತುಃ ಶಿವಾಂ ಪ್ರತಿ ।**
**ತಯೌ ರೋऽಪ್ಯವಧ್ಯತಾ ಚತುರ್ಷ ಚ ಪ್ರಯೋಜಿತಃ ॥೨೦॥**

ಮೊದಲು ಧುನಿ, ಚಮೂ, ಪೂತನಿ ಮತ್ತು ಶಕಟ ಈ ನಾಲ್ವರು ಕೂಡಿ ಶಿವನನ್ನು ಕುರಿತು ತಪಸ್ಸು ಮಾಡಿ 'ಅವಧ್ಯತಾ' ವರವನ್ನು ಪಡೆದಿದ್ದರು.

**ಅನಂತರಂ ತೃಣೋಧ್ವಮಿಸ್ತಪೋऽಚರದ್ವರಂ ಚ ತಮ್ ।**
**ಅವಾಪ ತೇ ತ್ರಯೋ ಹತಾಃ ಶಿಶುಸ್ವರೂಪವಿಷ್ಣುನಾ ॥೨೧॥**

ನಂತರ ತೃಣಾವರ್ತನು ಕೂಡ ತಪಸ್ಸು ಮಾಡಿ ವರವನ್ನು ಪಡೆದನು. ಅವರಲ್ಲಿ ಮೂರು ಜನ 'ಪೂತನಿ, ಶಕಟ, ತೃಣಾವರ್ತ' ಶ್ರೀಕೃಷ್ಣನು ಶಿಶುರೂಪದಲ್ಲಿದ್ದಾಗಲೇ ಆತನಿಂದ ಹತರಾದರು.

**ಧುನಿಶ್ಚಮುಶ್ಚ ತೌ ತರೂ ಸಮಾಶ್ರಿತೌ ನಿಷೂದಿತೌ ।**
**ತರು ಪ್ರಭಂಗತೋಽಮುನಾ ತರೂ ಚ ಶಾಪಸಂಭವೌ ॥೨೨॥**

ಧುನಿ ಮತ್ತು ಚಮೂ ಇಬ್ಬರು ಆ ಮರಗಳನ್ನು ಆಶ್ರಯಿಸಿದ್ದರು. ಅವು ಶಾಪದ ನಿಮಿತ್ತ ಮರಗಳಾಗಿ ಹುಟ್ಟಿದ್ದವು. ಶ್ರೀಕೃಷ್ಣನು ಆ ಮರಗಳನ್ನು ಮುರಿದಾಗ ಆ ರಾಕ್ಷಸರು ಹೊರಬಂದು ನಾಶವರಾದರು.

ಮರಗಳು ಆರು? ಶಾಪ ಬರಲು ಕಾರಣವೇನು? ಸಮಾಧಾನ.

**ಪುರಾ ಹಿ ನಾರದಾಂತಿಕೇ ದಿಗಂಬರೌ ಶಶಾಪ ಸಃ ।**
**ಧನೇಶ ಪುತ್ರಕೌ ದ್ರುತಂ ತರುತ್ವಮಾಪ್ನು ತಂ ತ್ವಿತಿ ॥೨೩॥**

ಹಿಂದೆ ಕುಬೇರನ ಮಕ್ಕಳಾದ 'ನಲಕೂಬರ-ಮಣಿಗ್ರೀವ' ಎಂಬವರು ದಿಗಂಬರರಾಗಿ ನಾರದರ ಎದುರಿಗೆ ಬಂದು ನಿಂತರು. ಅದನ್ನು ಕಂಡ ನಾರದರು "ನೀವಿಬ್ಬರೂ ಮರಗಳಾಗಿರಿ" ಎಂದು ಶಾಪವನ್ನಿತ್ತಿದ್ದರು.

ಹರಿವಂಶದಲ್ಲಿ ಬರುವ ವಿಸ್ತೃತವಾದ ಕಥೆಯನ್ನು ಇಲ್ಲಿ ಕರಿಯನ್ನು ಕನ್ನಡಿಯಲ್ಲಿ ಹಿಡಿದಿದ್ದಾರೆ. ಅದೇನು? ಎಂಬುದನ್ನು ಅರಿಯಲು ಹರಿವಂಶದತ್ತ ವಾಚಕರ ಮನಸ್ಸು ಧಾವಿಸುತ್ತದೆ. ಕುತೂಹಲ ಕೆರಳಿಸುತ್ತದೆ. ಇದೊಂದು ಶೈಲಿಯ ವಿಶಿಷ್ಟತೆ.

ಕಥೆ ಸಂಕ್ಷಿಪ್ತವಾಗಿ ಹೀಗಿದೆ. ಕುಬೇರನ ಮಕ್ಕಳು ಸುರೆಯಿಂದ ಮತ್ತರಾಗಿ ಸರೋವರದ ಹತ್ತಿರ ಸ್ನಾನಕ್ಕಾಗಿ ಬಂದಿದ್ದರು. ಬಟ್ಟೆಗಳನ್ನು ಕಳಚಿ ನೀರಿನಲ್ಲಿಳಿಯಲು ಸಿದ್ಧರಾಗಿದ್ದರು. ಅಕಸ್ಮಾತ್ತಾಗಿ ನಾರದರು ಆ ಮಾರ್ಗದಲ್ಲಿ ಹಾದು ಹೋಗುತ್ತಿದ್ದರು. ಕುಬೇರನ ಮಕ್ಕಳು ದೊಡ್ಡವರನ್ನು ಕಂಡಾಗ ಮುಂದೆ ಬಂದು ಮರ್ಯಾದೆಯಿಂದ ನಮಸ್ಕರಿಸಬೇಕಾಗಿತ್ತು. ಇಲ್ಲವೆ ತಮ್ಮ ಕೃಷ್ಣಕ್ಕೆ ತಾವು ಅಲ್ಲಿ ಇರಬಹುದಾಗಿದ್ದಿತು. ಹಾಗೆ ಮಾಡದೆ ಮದ್ಯದ ಅಮಲಿನಲ್ಲಿ ನಾರದರನ್ನು ಛೇಡಿಸಬೇಕೆಂದು ದಿಗಂಬರರಾಗಿಯೇ ಮುಂದೆ ಬಂದರು. ಈ ಅವಿನಯವನ್ನು ಕಂಡ ನಾರದರು, 'ನೀವು ಮರಗಳಾಗಿ ಹುಟ್ಟಿರಿ" ಎಂದು ಶಾಪವಿತ್ತರು. ಆ ಶಾಪಗ್ರಸ್ತರಾದ ಕುಬೇರನ ಮಕ್ಕಳೇ ಈ ಮರಗಳಾಗಿ ಹುಟ್ಟಿದರು.

ಶಾಪ ವಿಮೋಚನೆಗಾಗಿ ಶ್ರೀಕೃಷ್ಣನ ಮನೆಯ ಅಂಗಳದಲ್ಲಿ ತರುಗಳಾಗಿ ಬೆಳೆದಿದ್ದಾರೆ. ಅವರಲ್ಲಿ ರಾಕ್ಷಸರು ಸೇರಿಕೊಂಡಿದ್ದರು. ಮರಗಳು ಮುರಿದು ಬಿದ್ದಾಗ ಕುಬೇರನ ಮಕ್ಕಳಿಗೆ ಮೋಕ್ಷವಾಯಿತು. ರಾಕ್ಷಸರಿಗೆ ಶಿಕ್ಷೆಯಾಯಿತು.

ಈ ಕಥೆಯಿಂದ ೧) ಮದ್ಯದ ಅಮಲು ಎಂತಹ ಕೆಟ್ಟ ಪರಿಣಾಮ ಮಾಡುತ್ತದೆ? ೨) ದೊಡ್ಡವರ ಹತ್ತಿರ ವಿನಯದಿಂದ ನಡೆಯದಿದ್ದರೆ ಏನಾಗುತ್ತದೆ? ಎಂಬ ವಿಷಯಗಳತ್ತ ವಾಚಕರು ಗಮನಹರಿಸಲಿ.

**ತತೋ ಹಿ ತೌ ನಿಜಾಂ ತನುಂ ಹರೇಃ ಪ್ರಸಾದತಃ ಶುಭೌ ।**
**ಅವಾಪತುಃ ಸ್ತುತಿಂ ವಿಭೋ ರ್ವಿಧಾಯ ಜನ್ಮತುರ್ಗೃಹಂ ॥೨೪॥**

ಇಂದು ಅದೇ ಕುಬೇರನ ಮಕ್ಕಳು ಶ್ರೀಹರಿಯ ಪಾದಸ್ಪರ್ಶ ಮತ್ತು ಪ್ರಸಾದದಿಂದ ಸುಂದರವಾದ ದೇಹಗಳನ್ನು ಪಡೆದರು, ಶ್ರೀಹರಿಯನ್ನು ಸ್ತುತಿಸಿ ತಮ್ಮ ಸ್ವಗೃಹಕ್ಕೆ ನಡೆದರು.

**ನಲಕೂಬರ ಮಣಿಗ್ರೀವೌ ಮೋಚಯಿತ್ವಾಚ ಶಾಪತಃ ।**
**ವಾಸುದೇವೋಽಥ ಗೋಪಾಲ್ಯೈರ್ವಿಸ್ಮಿತೈರಭಿವೀಕ್ಷಿತಃ ॥೨೫॥**

ನಲಕೂಬರ-ಮಣೀಗ್ರೀವರು, ವಾಸುದೇವನ ಕೃಪೆಯಿಂದ ಈಗ ಶಾಪದಿಂದ ಮುಕ್ತರಾಗಿದ್ದಾರೆ. ಇದನ್ನು ಕಂಡ ಗೋಪಾಲಕರು ವಿಸ್ಮಿತರಾಗಿ ಆ ದೃಶ್ಯವನ್ನು ನೋಡಿದರು.

**ವೃಂದಾವನಂ ಯಿಯಾಸುಃ ಸನ್ನಂದಸೂನುರ್ಬೃಹದ್ವನೇ ।**
**ಸಸರ್ಜ ರೋಮಕೂಪೇಭ್ಯೋವೃಕಾನ್ ವ್ಯಾಘ್ರಸಮಾನ**
**ಬಲೇ ॥೨೬॥**

ಶ್ರೀಕೃಷ್ಣನು ಗೋಕುಲವನ್ನು ಬಿಟ್ಟು ವೃಂದಾವನಕ್ಕೆ ತೆರಳಲು ಇಚ್ಛಿಸಿದನು. ಆ ಸ್ಥಳವನ್ನು ತ್ಯಜಿಸುವ ವಿಶಿಷ್ಟ ಉದ್ದೇಶದಿಂದ ತನ್ನ ರೋಮಕೂಪಗಳಿಂದ ವಿಚಿತ್ರವಾದ 'ವೃಕ'ಗಳನ್ನು ಸೃಷ್ಟಿಸಿದನು. ಅವು ಬಲದಲ್ಲಿ ವ್ಯಾಘ್ರಗಳಿಗೆ ಸಮವಾಗಿದ್ದವು.

**ಅನೇಕಕೋಟಿ ಸಂಖ್ಯೈಸ್ತ್ಯೈಃ ಪೀಡ್ಯಮಾನಾ ವ್ರಜಾಲಯಾಃ ।**
**ಯಯುರ್ವೃಂದಾವನಂ ನಿತ್ಯಾನಂಶದಮಾಯ ನಂದಜಮ್ ॥೨೭॥**

ಅನೇಕ ಕೋಟಿ ಸಂಖ್ಯೆದಲ್ಲಿ ವೃಕಗಳು ಉತ್ಪನ್ನವಾಗಿ ಗೋಕುಲದ ಜನರಿಗೆ ಪೀಡಿಸಹತ್ತಿದವು. ಅವುಗಳ ಪೀಡೆಯನ್ನು ತಾಳಲಾರದೆ ಅಲ್ಲಿಯ ಜನರು ನಿತ್ಯಾನಂದಮಯನಾದ, ನಂದನಂದನಾದ ಶ್ರೀಕೃಷ್ಣನನ್ನು ಕೂಡಿಕೊಂಡು ವೃಂದಾವನಕ್ಕೆ ಬಂದರು.

**ಇಂದಿರಾಪತಿರಾನಂದ ಪೂರ್ಣೋ ಬೃಂದಾವನೇ ಪ್ರಭುಃ ।**
**ನಂದಯಾಪಾಸ ನಂದಾದೀನುದ್ದಾಮ ತರಚೇಷ್ಟಿತೈ ॥೨೮॥**

ಇಂದಿರಾಪತಿಯು, ಆನಂದಪೂರ್ಣನು, ಸರ್ವರಿಗೂ ಪ್ರಭುವಾದ ಶ್ರೀಕೃಷ್ಣನು ವೃಂದಾವನದಲ್ಲಿ ಬಂದು ತನ್ನ ಶ್ರೇಷ್ಠವಾದ ಆಟಗಳಲ್ಲಿ ನಿರತನಾಗಿ, ಲೀಲೆಗಳನ್ನು ತೋರಿಸುತ್ತ ನಂದನೇ ಮೊದಲಾದ ಸರ್ವರಿಗೂ ಆನಂದವನ್ನೀಯುತ್ತಿದ್ದನು.

**ಸ ಚಂದ್ರತೋ ಹಸತ್ಕಾಂತವದನೇನೇಂದು ವರ್ಚಸಾ ।**
**ಸಹಿತೋ ರೌಹಿಣೇಯೇನ ವತ್ಸಪಾಲೋ ಬಭೂವ ಹ ॥೨೯॥**

ಚಂದ್ರನಂತೆ ದುಂಡಾದ ಮುಖ, ಮಂದಸ್ಮಿತನಾದ ವದನ, ಚಂದ್ರಕಾಂತಿಯಂತೆ ಹೊಳಪುಳ್ಳ ಬಿಳಿಯ ಬಣ್ಣ, ಇವುಗಳಿಂದ ಕೂಡಿದ ರೋಹಿಣೀಸುತನಾದ ಬಲರಾಮನೊಡಗೂಡಿ ಶ್ರೀಕೃಷ್ಣನು ದನ-ಕರುಗಳನ್ನು ಕಾಯುತ್ತಿದ್ದನು.

ವತ್ಸಾಸುರ ಮತ್ತು ಬಕಾಸುರರ ವಧೆ.

**ದೈತ್ಯಂ ಸ ವತ್ಸತನುಮಪ್ರಮಯಃ ಪ್ರಗೃಹ್ಯ**
**ಕಂಸಾನುಗಂ ಹರವರಾದ ಪರ್ಯೈವವಧ್ಯಮ್ ।**
**ಪ್ರಕ್ಷಿಪ್ಯ ವೃಕ್ಷಶಿರಸಿನ್ಯಹನದ್ಬಕೋಽಪಿ**
**ಕಂಸಾನುಗೋಽಥ ವಿಭುಮಚ್ಯುತಮಾಸಸಾದ ॥೩೦॥**

ಒಬ್ಬ ದೈತ್ಯನು ಕರುವಿನ ರೂಪವನ್ನು ಧರಿಸಿ ಅಲ್ಲಿಗೆ ಬಂದನು. ಅವನು ಕಂಸನ ಅನುಯಾಯಿ ಆಗಿದ್ದನು. ಹರನ ವರದಿಂದ ಅವಧ್ಯನೂ ಆಗಿದ್ದನು. ಅವನೇ 'ವತ್ಸಾಸುರ'. ಶ್ರೀಕೃಷ್ಣನು ಅವನ ಹಿಂಬದಿಯ ಕಾಲುಗಳನ್ನು ಹಿಡಿದು ಮೇಲೆ ಎತ್ತಿ ಅಪ್ಪಳಿಸಿ ಕೊಂದನು. ಅನಂತರ ಇನ್ನೊಬ್ಬ ದೈತ್ಯನು 'ಬಕನ' ರೂಪದಲ್ಲಿ ಬಂದನು. ಅವನನ್ನೂ ಅಚ್ಯುತನು ಈ ವಿಧದಲ್ಲಿ ಆಯಾಸವಿಲ್ಲದೆ ಕೊಂದನು.

**ಸ್ಕಂದ ಪ್ರಸಾದಕವಚಃ ಸ ಮುಖೇ ಚಕಾರ**
**ಗೋವಿಂದ ಮಗ್ನಿವದಮುಂ ಪ್ರವಹಂತ ಮುಚ್ಚೈಃ ।**
**ಚಚ್ಚರ್ದ ತುಂಡ ಶಿರಸ್ಸೈವ ನಿಹಂತುಮೇನ-**
**ಮಯಾಂತಮೀಷ್ಯ ಜಗೃಹೇಽಸ್ಯ ಸ ತಂಡಮಿಾಶಃ ॥೩೦॥**

ಆ ಬಕಾಸುರನಿಗೆ ಷಣ್ಮುಖನ ವರವೇ ಕವಚವಾಗಿತ್ತು ಆ ಬಕನು ಶ್ರೀಕೃಷ್ಣನನ್ನು ಬಾಯಿಯಲ್ಲಿಟ್ಟು ನುಂಗಿಬಿಟ್ಟನು. ಆಗ ಗೋವಿಂದನು ಅಗ್ನಿಯಂತೆ ಅವನ ಹೊಟ್ಟೆಯಲ್ಲಿ ಸುಡಹತ್ತಿದನು. ಅದನ್ನು ತಡೆಯದೆ ದೈತ್ಯನು ಶ್ರೀಕೃಷ್ಣನನ್ನು ಹೊರಗೆ ಉಗುಳಿಬಿಟ್ಟನು. ಆಗ ಶ್ರೀಕೃಷ್ಣನು ಅವನ ಎರಡೂ ಕೊಕ್ಕುಗಳನ್ನು ತನ್ನ ಕೈಯಿಂದ ಬಲವಾಗಿ ಹಿಡಿದು ಕೊಂದನು.

**ತುಂಡದವಯಂ ಯದುಪತಿಃ ಕರಪಲ್ಲವಾಭ್ಯಾಂ**
**ಸಂಗೃಹ್ಯ ಚಾಶು ವಿದದಾರ ಹ ಪಕ್ಷಿದೈತ್ಯಮ್ ।**
**ಬ್ರಹ್ಮಾದಿಭಿಃ ಕುಸುಮ ವರ್ಷಿಬಿರೀಡ್ಯ ಮಾನಃ**
**ಸಾಯಂ ಯಯೌ ವ್ರಜಭುವಂ ಸಹಿತೋಽಗ್ರಜೇನ ॥೩೧॥**

ಯದುಪತಿಯಾದ ಶ್ರೀಕೃಷ್ಣನು ತನ್ನ ಕೋಮಲವಾದ ಕರಗಳಿಂದ ಆ ಪಕ್ಷಿದೈತ್ಯನ ಎರಡೂ ಕೊಕ್ಕುಗಳನ್ನು ಹಿಡಿದು ತುಂಡರಿಸಿದನು. ಅದರಿಂದ ಆ ಬಕನು ಅಲ್ಲಿಯೇ ಸತ್ತು ಬಿದ್ದನು. ಇದನ್ನು ಕಂಡ ಬ್ರಹ್ಮಾದಿದೇವತೆಗಳು ಆನಂದಭರಿತರಾಗಿ ಪುಷ್ಪವೃಷ್ಟಿಯನ್ನೇ ಗೈದು ಸ್ತುತಿಸಿದರು. ಸಾಯಂಸಮಯದಲ್ಲಿ ಅಣ್ಣನನ್ನು ಕೂಡಿಕೊಂಡು ಶ್ರೀಕೃಷ್ಣನು ವ್ರಜಭುವನಕ್ಕೆ ಬಂದನು.

ಏವಂ ಸ ದೇವವರವಂದಿತಪಾದ ಪದ್ಮೋ
ಗೋಪಾಲಕೇಷು ವಿಹರನ್ ಭುವಿಷಷ್ಠಮಬ್ದಮ್ ।
ಪ್ರಾಪ್ತೋ ಗವಾಮಖಿಲಪ್ತೋಽಪಿ ಸ ಪಾಲಕೋಽಭೂತ್
ವೃಂದಾವನಾಂತರಗಸಾಂದ್ರ ಲತಾವಿತಾನೇ ॥೩೩॥

ಈ ರೀತಿಯಾಗಿ ಸಕಲದೇವತೆಗಳಿಂದಲೂ ವಂದಿತ, ಪಾದ ಪದ್ಮಗಳುಳ್ಳ ಶ್ರೀಕೃಷ್ಣನು, ತನ್ನ ಗೆಳೆಯರಾದ ಗೋಪಾಲಕರಿಂದ ಕೂಡಿ, ವಿಹರಿಸುತ್ತ, ಆಟವಾಡುತ್ತ, ಕಾಲಕಳೆಯುತ್ತಿದ್ದನು. ಆರು ವರುಷಗಳು ತುಂಬಿದ ನಂತರ ಗೋವುಗಳನ್ನು ಕಾಯುವುದಕ್ಕಾಗಿ, ಗೋಪಾಲಕರನ್ನು ಕೂಡಿಕೊಂಡು ಬೃಂದಾವನದ ಅಕ್ಕಪಕ್ಕದಲ್ಲಿ ಸಾಂದ್ರವಾಗಿ ಬೆಳೆದ ಮರಬಳ್ಳಿಗಳ ಪ್ರದೇಶದಲ್ಲಿ ಓಡಾಡುತ್ತಿದ್ದನು.

ಜ್ಯೇಷ್ಠಂ ವಿಹಾಯ ಸ ಕದಾಚಿದಚಿಂತ್ಯಶಕ್ತಿ
ರ್ಗೋಗೋಪ ಗೋಗಣಯುತೋಽಯಮುನಾ ತಟೇಷು ।
ರೇಮೇ ಭವಿಷ್ಯದನುವೀಕ್ಷ್ಯ ಹಿ ಗೋಪ ದುಃಖಂ
ತದ್ಬೋಧನಾಯ ನಿಜಮಗ್ರಮೇಷು ಸೋಽಧಾತ್ ॥೩೪॥

ಒಂದು ದಿನ ಅಚಿಂತ್ಯಶಕ್ತನಾದ ಶ್ರೀಕೃಷ್ಣ (ಪರಮಾತ್ಮ)ನು ಅಣ್ಣನಾದ ಬಲರಾಮನನ್ನು ಬಿಟ್ಟು ಗೋಪಾಲಕರಿಂದ, ಗೋವುಗಳ ಗುಂಪಿನಿಂದ ಕೂಡಿದವನಾಗಿ, ಗೋವುಗಳನ್ನು ಕಾಯಲು ಯಮುನಾತೀರಕ್ಕೆ ಬಂದನು.

ಬಲರಾಮನನ್ನು ಬಿಟ್ಟು ಬರಲು ಕಾರಣ, ಆ ಗೋಪಾಲಕರಿಗೆ ಮುಂದೆ ಆಗಬಹುದಾದ ದುಃಖವನ್ನು ಶ್ರೀಕೃಷ್ಣನು ಅರಿತಿದ್ದನು. ಅದನ್ನು ತಿಳಿಸಲೆಂದೇ ಅಣ್ಣನಾದ ಬಲರಾಮನನ್ನು ಬಿಟ್ಟು ಬಂದಿದ್ದನು.

ಭಗವಂತನು ತ್ರಿಕಾಲಜ್ಞಾನಿ ಮತ್ತು ಸರ್ವಜ್ಞ. ಆತನಿಗೆ ಭವಿಷ್ಯ ತಿಳಿಯುವುದು ಆಶ್ಚರ್ಯವೇ?

ವಿ.ವಿ. ಮೇಲಿನ ಶ್ಲೋಕದಲ್ಲಿ ಆಚಾರ್ಯರು 'ಗೋ, ಗೋಪ, ಗೋಗಣ' ಈ ಮೂರೂ ಪದಗಳನ್ನು ಒಂದೆಡೆ ಉಪಯೋಗಿಸಿ ತಮ್ಮ ಕಾವ್ಯ ಪ್ರತಿಭೆ, ಪದಲಾಲಿತ್ಯವನ್ನು ವ್ಯಕ್ತ ಪಡಿಸಿದ್ದಾರೆ. ಅವುಗಳಲ್ಲಿರುವ ಅರ್ಥವೈಶಿಷ್ಟ್ಯವನ್ನು ತೋರಿ ಪಾಂಡಿತ್ಯದ ಪ್ರಭಾವವನ್ನೂ ಬೀರಿದ್ದಾರೆ.

ತಂಬ್ರಹ್ಮಣೋ ವರಬಲಾದುರಗಂ ತ್ವವಧ್ಯಂ
ಸರ್ವೈರವಾರ್ಯವಿಷವೀರ್ಯಮೃತೇ ಸುಪರ್ಣಾತ್ ।
ವಿಜ್ಞಾಯ ತದ್ವಿಷವಿದೂಷಿ ವಾರಪಾನ-
ಸನ್ನಾನ್ಪಶೂನಪಿ ವಯಸ್ಯಜನಾನ್ ಸ ಆವೀತ್ ॥೩೫॥

ಆ ಯಮುನೆಯಲ್ಲಿ ಬ್ರಹ್ಮನ ವರಬಲದಿಂದ ಅವಧ್ಯನಾಗಿಯೂ, ಗರುಡನ ಅಂಕಿತದ ಎಲ್ಲೆಯನ್ನು ಮೀರಿಯೂ, ಬಲವತ್ತಾದ ವಿಷದಿಂದ ಕೂಡಿದ ಒಂದು ಸರ್ಪವು ವಾಸವಾಗಿತ್ತು. ವಿಷದೂಷಿತ ಆ ನದೀನೀರನ್ನು ಕುಡಿಯುವುದರಿಂದ ಗೋಪಾಲಕರು ಗೋವುಗಳ ಸಹಿತವಾಗಿ ಮೂರ್ಛಿತರಾಗಿ ಬಿದ್ದದ್ದನ್ನು ಶ್ರೀಕೃಷ್ಣನು ಕಂಡನು.

ತದ್ದೃಷ್ಟಿ ದಿವ್ಯಸುಧಯಾ ಸಹಸಾಭಿವೃಷ್ಟಾಃ
ಸರ್ವೇಽಪಿ ಜೀವಿತಮೇಪಾಪಿರಥೋಚ್ಚ ಶಾಖಿಮ್ ।
ಕೃಷ್ಣಃ ಕದಂಬಮಧಿರುಹ್ಯ ತತೋಽತಿ ತುಂಗಾ-
ದಾಸ್ಫೋಷ್ಯಗಾಢಶನೋ ನ್ಯಪತದ್ವಿಷೋದೇ ॥೩೬॥

ಶ್ರೀಕೃಷ್ಣನು ತನ್ನ ಅಮೃತದೃಷ್ಟಿಯನ್ನು ಬೀರಿ, ಮೂರ್ಛಿತರಾಗಿ ಬಿದ್ದ ಗೋವುಗಳನ್ನು ಮತ್ತು ಗೋಪಾಲಕರನ್ನು ಬದುಕಿಸಿದನು. ನಂತರ ಅಲ್ಲಿಯೇ ಇದ್ದು ಎತ್ತರವಾಗಿ ಬೆಳೆದ ಕಂದಂಬವೃಕ್ಷದ ಉನ್ನತವಾದ ಟೊಂಗೆ (ರೆಂಬೆ)ಯನ್ನೇರಿ ಕಟಿಬದ್ಧನಾಗಿ, ಭುಜಗಳನ್ನು ಛಪ್ಪರಿಸಿ ವಿಷಪೂರಿತನೀರಿನಲ್ಲಿ ಹಾರಿದನು.

ಸಾರ್ಪಹ್ರದಃ ಪುರುಷಸಾರನಿಪಾತವೇಗ-
ಸಂಕ್ಷೋಭಿತೋರಗ ವಿಷೋಚ್ಛ್ವ ಸಿತಾಂಬುರಾಶಿಃ ।
ಪರ್ಯಾಕ್ ಪ್ಲುತೋ ವಿಷಕಷಾಯ ವಿಭೀಷಣೋರ್ಮಿ-
ಭೀಮೋ ಧನುಶ್ಶತಮನಂತನಂತಬಲಸ್ಯ ಕಿಂ ತತ್ ॥೩೭॥

ಪುರುಷೋತ್ತಮನಾದ ಶ್ರೀಕೃಷ್ಣನು ನೀರಿನಲ್ಲಿ ವೇಗದಿಂದ ಹಾರಿದಾಗ, ಆ ಮಡುವಿನಲ್ಲಿದ್ದ ಸರ್ಪದ ಹೃದಯವು ತಲ್ಲಣಗೊಂಡು ಕ್ಷೋಭೆಗೊಳಗಾಯಿತು. ಕುಪಿತಗೊಂಡು ಶ್ವಾಸೋಚ್ಛ್ವಾಸದಿಂದ ನೀರಿನಲ್ಲಿ

ವಿಷದರಾಶಿಯನ್ನೇ ಕಾರಿತು. ಅದರಿಂದ ಜಲರಾಶಿಯಲ್ಲಿ ವಿಷಮಯವಾಯಿತು. ಇಂತಹ ಭೀಮಾಕಾರದ ನೀರು ಶ್ರೀಕೃಷ್ಣನ ಹಾರುವಿಕೆಯಿಂದ ನೂರುಧನುಸ್ಸಿನ ಎತ್ತರಕ್ಕೆ ಹಾರಿತು. ಅನಂತ ಬಲವುಳ್ಳ ಶ್ರೀಹರಿ ಹಾರಿದಾಗ ನೀರು ನೂರು ಧನುಸ್ಸು ಎತ್ತರ ಹಾರುವುದು ಅಚ್ಚರಿಯೇ? ಎಂದು ಪ್ರಶ್ನಿಸಿದ್ದಾರೆ. ಅಂದರೆ ನೂರೇನು, ಸಾವಿರ ಧನುಸ್ಸು ಹಾರಬಹುದಾಗಿದ್ದಿತು ಎಂಬ ಭಾವನೆ ಅದರಲ್ಲಡಗಿದೆ.

ವಿ.ವಿ. ಈ ಶ್ಲೋಕದಲ್ಲಿ ಶ್ರೀಮದಾಚಾರ್ಯರು, ನೀರಿನ ವಿಷವನ್ನು ವಿವರಿಸಲು 'ವಿಷಕಷಾಯ ವಿಭೀಷಣೋರ್ಮಿ' ಎಂಬ ಪದಗಳನ್ನು ಬಳಸಿ, ಬಹು ಒತ್ತುಗೊಟ್ಟು ಹೇಳಿದ್ದಾರೆ. ವಿಷದ ಕಷಾಯ, ಚೆನ್ನಾಗಿ ಮರಳಿಸಿದ ವಿಷ. ಅದು ಕಷಾಯ. ಅಂದರೆ ಅದು ಪೂರ್ಣವಿಷದ ಸಾರವೇ ಆಗಿತ್ತು. ಆಚಾರ್ಯರ ಮನಸ್ಸು ಅಷ್ಟಕ್ಕೆ ತೃಪ್ತ ಆಗಲಿಲ್ಲ. ಮುಂದೆ 'ಭೀಷಣ' ಎಂಬ ಪದವೂ ಇದೆ. ಅಲ್ಲಿಗೂ ನಿಲ್ಲದೆ 'ಊರ್ಮಿ' ಎಂಬ ಪದವನ್ನು ಬಳಸಿದ್ದಾರೆ. ಈ ಪೂರ್ಣವಾಕ್ಯವನ್ನು ಅರ್ಥವತ್ತಾಗಿ ಓದಿದಾಗ ಆ ವಿಷದ ಭೀಕರತೆ ಎಷ್ಟಾಗುತ್ತೆಂಬುದನ್ನು ವಾಚಕರೇ ಊಹಿಸಬೇಕು.

**ತಂ ಯಾಮುನಹ್ರದ ವಿಲೋಕಮಾಪ್ಯ ನಾಗಃ**
**ಕಾಲ್ಯೋ ನಿಜೈಃ ಸಮದಶತ್ ಸಹ ವಾಸುದೇವಮ್ ।**
**ಭೋಗೈರ್ಬಬಂಧ ಚ ನಿಜೇಶ್ವರಮೇನ ಮಜ್ಞಃ**
**ಸೇಹೇ ತಮೀಶ ಉತ ಭಕ್ತಿ ಮತೋಽಪರಾಧಮ್ ॥೩೮॥**

ಯಮುನೆಯ ಹೃದಯವನ್ನೇ ಕದಡಿದ ಶ್ರೀಕೃಷ್ಣನನ್ನು ಅಲ್ಲಿಯ ನಾಗವು ತನ್ನ ಬಂಧು ಬಾಂಧವರೊಂದಿಗೆ ಬಂದು ಕಚ್ಚಿತು. ತನ್ನ ಬಾಲದಿಂದ ಸರ್ವಪ್ರಭುವಾದ ಶ್ರೀಕೃಷ್ಣನ್ನು ಬಂಧಿಸಿತು. ಭಕ್ತವತ್ಸಲನಾದ ಪರಮಾತ್ಮನು, ಅಜ್ಞಾನದಿಂದ ಆ ಸರ್ಪವು ಮಾಡಿದ ಎಲ್ಲ ವೇದನೆಗಳನ್ನು ಸಹಿಸಿಕೊಂಡನು.

ಇತ್ತ

**ಉತ್ಪಾತಮೀಕ್ಷ್ಯತು ತದಾಖಿಲಗೋಪಸಂಘ-**
**ಸ್ತತ್ರಾಜಗಾಮ ಹಲಿನಾ ಪ್ರತಿಬೋಧಿತೋಽಪಿ ।**

ದೃಷ್ಟ್ವಾ ನಿಜಾಶ್ರಯಜನಸ್ಯ ಬಹೋಃ ಸಂದುಃ ಖಂ
ಕೃಷ್ಣಃ ಸ್ವಭಕ್ತಮಪಿ ನಾಗಮಮುಂ ಮಮರ್ದ ॥೪೯॥

ಗೋಕುಲದಲ್ಲಿ ಉತ್ಪಾತಗಳಾದವು. ಅದನ್ನು ಕಂಡಜನ ಗಾಬರಿಯಾದರು. ಎಲ್ಲ ಗೋಪಾಲಕರು ಆ ಸ್ಥಳಕ್ಕೆ ಧಾವಿಸಿ ಬಂದರು. ಬಲರಾಮನು ಎಷ್ಟು ಹೇಳಿದರೂ ಕೇಳಲಿಲ್ಲ. ಶ್ರೀಕೃಷ್ಣನು ತನ್ನ ಆಶ್ರಯದಲ್ಲಿದ್ದ ಸ್ವಭಕ್ತರ ದುಃಖವನ್ನು ನೋಡಿದನು. ನಾಗನೂ ಕೂಡ ಸ್ವಭಕ್ತನೇ ಆಗಿದ್ದನು. ಹಾಗಿದ್ದರೂ ಶ್ರೀಕೃಷ್ಣನು ನಾಗನನ್ನು ಮರ್ದಿಸಿದನು.

ವಿ.ವಿ. ಇಬ್ಬರೂ ಭಕ್ತರೇ ಆದಾಗ್ಯೂ ಅವರವರ ಭಕ್ತಿಯಲ್ಲಿ "ತರತಮಭಾವವಿದೆ. ತಾರತಮ್ಯವಿದೆ" ಎಂಬುದು ಸ್ಪಷ್ಟವಿದೆ. ಇದು ಆಚಾರ್ಯರ ಸಿದ್ಧಾಂತ.

ತಸ್ಯೋನ್ನತೇಷು ಸ ಫನೇಷು ನನರ್ತ ಕೃಷ್ಣೋ
ಬ್ರಹ್ಮಾದಿಭೀಃ ಕುಸುಮವರ್ಷಿಭಿರೀಡ್ಯಮಾನಃ ।
ಆರ್ತೋ ಮುಖೈರುರು ಪಮನ್ರುಧಿರಂ ಸನಾಗೋ
ನಾರಾಯಣಂ ತಮರಣಂ ಮನಸಾ ಜಗಾಮ ॥೫೦॥

ಆ ನಾಗನ ಉನ್ನತವಾದ ಫಣೆಯ ಮೇಲೆ ನಿಂತು ಶ್ರೀಕೃಷ್ಣನು ನರ್ತಿಸಿದನು. ಇದನ್ನು ಕಂಡ ಬ್ರಹ್ಮಾದಿದೇವತೆಗಳು ಸಂತುಷ್ಟರಾಗಿ ಶ್ರೀಹರಿಯನ್ನು ಸ್ತುತಿಸುತ್ತ ಪುಷ್ಪವೃಷ್ಟಿಯನ್ನುಗೈದರು. ಶ್ರೀಕೃಷ್ಣನ ಕಾಲಿನ ತುಳಿತವನ್ನು ತಾಳಲಾರದೆ, ಆ ನಾಗನು ಆರ್ತನಾಗಿ ಮುಖಗಳಿಂದ ರಕ್ತವನ್ನು ಕಾರುತ್ತ ನಾರಾಯಣನಿಗೆ ಮನಃಪೂರ್ವಕ ಶರಣಾಗತವಾದನು.

ತಚ್ಚಿತ್ರತಾಂಡವವಿರುಗ್ಣ ಫಣಾತಪತ್ರಂ
ರಕ್ತಂ ವಮಂತಮುರುಸನ್ನಿಧಿಯಂ ನಿತಾಂತಮ್ ।
ದೃಷ್ಟ್ವಾ ಹಿ ರಾಜ ಮುಪಸೇದುರಮುಷ್ಯ ಪತ್ನ್ಯೋ
ನೇಮುಶ್ಚ ಸರ್ವಜಗದಾದಿಗುರುಂ ಭುವೀಶಮ್ ॥೫೧॥

ಶ್ರೀಕೃಷ್ಣನ ಆ ವಿಚಿತ್ರವಾದ ನರ್ತನದಿಂದ ಆ ಕಾಳಿಂಗನ ಫಣೆಗಳೆಲ್ಲ ಗಾಯಗೊಂಡವು. ರಕ್ತಮಯವಾದವು. ಆ ನಾಗನು ಬಾಯಿಯಿಂದ

ರಕ್ತವನ್ನು ಕಾರಹತ್ತಿದನು. ನಿರ್ವಿಣ್ಣನಾದನು. ನಾಗರಾಜನ ಈ ಸ್ಥಿತಿಯನ್ನು ಕಂಡು, ಆತನ ಪತ್ನಿಯರು ಸರ್ವಜಗತ್ತಿಗೆ ಪ್ರಭುವು, ಬ್ರಹ್ಮಾದಿಗಳಿಗೆ ಗುರುವೂ ಆದ ಶ್ರೀಕೃಷ್ಣನಿಗೆ ಸಾಷ್ಟಾಂಗ ನಮಸ್ಕಾರ ಹಾಕಿದರು.

**ತಾಭಿಃ ಸ್ತುತಃ ಸ ಭಗವಾನಮುನಾ ಚ ತಸ್ಮೈ**
**ದತ್ವಾಭಯಂ ಯಮಸಹೋದರವಾರಿತೋಽಮುಮ್ ।**
**ಉತ್ಸೃಜ್ಯ ನಿರ್ವಿಷಜಲಾಂ ಯಮುನಾಂ ಚಕಾರ**
**ಸಂಸ್ತೂಯಮಾನಚರಿತಃ ಸುರಸಿದ್ಧಸಾಧ್ಯೈಃ ॥೪೨॥**

ಆ ನಾಗನು, ಆತನ ಪರಿವಾರವು ಕೂಡಿಯೇ ಶ್ರೀಹರಿಯನ್ನು ಸ್ತುತಿಸಲಾರಂಭಿಸಿದವು. ಆಗ ಶ್ರೀಕೃಷ್ಣನು ಆ ನಾಗಗಳಿಗೆ ಗರುಡನಿಂದ ಯಾವ ಭಯವೂ ಇಲ್ಲದಂತೆ ಅಭಯವನ್ನಿತ್ತನು. ನಂತರ ಯಮುನಾನದಿಯ ನೀರನ್ನು ನಿರ್ವಿಷವನ್ನಾಗಿ ಮಾಡಿದನು. ಇದನ್ನು ನೋಡಿದ ದೇವತೆಗಳು, ಸಿದ್ಧರು, ಸಾಧ್ಯರೇ ಮೊದಲಾದವರು ಭಗವಂತನನ್ನು ಕೊಂಡಾಡಿದರು.

**ಗೋಪೈರ್ಬಲಾದಿಭಿರುದೀರ್ಣತರ ಪ್ರಮೋದೈಃ**
**ಸಾರ್ಧಂ ಸಮೇತ್ಯ ಭಗವಾನಾರವಿಂದನೇತ್ರಃ ।**
**ತಾಂ ರಾತ್ರಿಮತ್ರ ನಿವಸನ್ಯಮುನಾ ತಟೇ ಸ**
**ದಾವಾಗ್ನಿ ಮುದ್ಧತಬಲಂ ಚ ಪಪೌ ವ್ರಜಾರ್ಥೇ ॥೪೩॥**

ಕಮಲನೇತ್ರನಾದ ಭಗವಂತನು, ಗೋಪಾಲಕರನ್ನು, ಬಲರಾಮನನ್ನು ಕೂಡಿಕೊಂಡು ಆ ರಾತ್ರಿಯನ್ನು ಆನಂದದಿಂದ ಅಲ್ಲಿಯೇ ಕಳೆದನು. ಅವರು ಆ ಯಮುನಾತಟದಲ್ಲಿರುವಾಗಲೇ ಅಂದಿನ ರಾತ್ರಿ ಅಲ್ಲಿ ಕಾಡ್ಗಿಚ್ಚು ಹತ್ತಿ ಉರಿಯಹತ್ತಿತು. ಗೋಕುಲದ ಜನರನ್ನು ರಕ್ಷಿಸುವ ನಿಮಿತ್ತ ಶ್ರೀಹರಿಯು ಆ ಅಗ್ನಿಯನ್ನು ಪಾನಮಾಡಿದನು.

ಉಗ್ರಾಸುರನ ವಧೆ.

**ಇತ್ಥಂ ಸುರಾಸುರಗಣೈರವಿಚಿಂತ್ಯ ದಿವ್ಯ-**
**ಕರ್ಮಾಣಿ ಗೋಕುಲಗತೇಽಗಣತೋರುಶಕ್ತೌ ।**

**ಕುರ್ವತ್ಯಜೇ ವ್ರಜಭುವಾಮಭವದ್ವಿನಾಶ**
**ಉಗ್ರಾಭಿಧಾದಸುರ ತಸ್ತರರೂಪತೋಽಲಮ್ ॥೪೪॥**

**ತದ್ಗಂಧತೋ ನೃಪಶುಮುಖ್ಯ ಸಮಸ್ತ ಭೂತಾ-**
**ನ್ಯಾಪ್ರುರ್ಮ್ಯತಿಂ ಬಹುಲರೋಗನಪೀಡಿತಾನಿ ।**
**ಧಾತುರ್ವರಾಬ್ಜಗದಭಾವ ಕೃತೈಕ ಬುದ್ಧಿ-**
**ರ್ವಧ್ಯೋ ನ ಕೇನಚಿದಾಸೌ ತರುರೂಪದೈತ್ಯಃ ॥೪೫॥**

ಗಣನೆಗೆ ಅಶಕ್ಯವಾದ ಶಕ್ತಿಯುಳ್ಳ ಪರಮಾತ್ಮನು, ಈ ರೀತಿಯಾಗಿ ದೇವದೈತ್ಯರ ಚಿಂತನೆಗೂ ನಿಲುಕದ ಅನೇಕ ದಿವ್ಯ, ಉತ್ತಮ ಕರ್ಮಗಳನ್ನು ಗೈಯುತ್ತ ಜನತೆಗೆ ಚಕಿತಗೊಳಿಸುತ್ತ ಕಾಲಕಳೆಯುತ್ತಿರುವಾಗ ಆ ಗೋಕುಲದ ಭವಿಷ್ಯವನ್ನೇ ನಾಶಮಾಡುವ ಉದ್ದೇಶದಿಂದ 'ಉಗ್ರಾಸುರ' ಎಂಬ ಅಸುರನು ಗಿಡರೂಪದಿಂದ ಅಲ್ಲಿ ಚೆನ್ನಾಗಿ ಬೆಳೆದನು. ಕೇವಲ ಆ ಗಿಡದ ಗಂಧಮಾತ್ರದಿಂದ ಅಲ್ಲಿಯ ಅನೇಕ ಜನರುಗಳಿಗೂ ಅದು ಬಿಡಲಿಲ್ಲ. ಪಶು-ಪಕ್ಷಿಗಳು ಅನೇಕ ರೋಗಗಳಿಂದ ಪೀಡಿತರಾದರು. ಆ ದೈತ್ಯನಿಗೂ ಬ್ರಹ್ಮನಿಂದ, 'ಅವಧ್ಯನಾಗು' ಎಂಬ ವರವಿದ್ದಿತು ಕಾರಣ ಆ ಗಿಡವನ್ನು ನಾಶಪಡಿಸುವ ಶಕ್ತಿ ಯಾರಿಗೂ ಇರಲಿಲ್ಲ.

**ಸಂಕರ್ಷಣೋಽಪಿ ತದುದಾರವಿಷಾನು ವಿಷ್ಟೇ**
**ಕೃಷ್ಣೋ ನಿಜಸ್ಪರ್ಶಿತ (ಸ್ಪ ಖುಶತ) ಸ್ತಮಪೇತರೋಗಮ್ ।**
**ಕೃತ್ವಾ ಬಭಂಜ ವಿಷವೃಕ್ಷಮಮುಂ ಬಲೇನ**
**ತಸ್ಯಾನುಗೈಃ ಸಹ ತದಾಕೃತಿಭಿಃ ಸಮಸ್ತೈಃ ॥೪೬॥**

(ಸಂಕರ್ಷಣ) ಬಲರಾಮನಿಗೂ ಆ ವೃಕ್ಷದ ವಿಷದ ಗಾಳಿ ಬಿಡಲಿಲ್ಲ. ಆತನು ಮೂರ್ಛಿತನಾದನು. ಶ್ರೀಕೃಷ್ಣನ ಸ್ಪರ್ಶಮಾತ್ರದಿಂದ ಆತನು ಎಚ್ಚೆತ್ತನು. ನಿರೋಗಿಯಾದನು. ಬಲಯುತನಾದನು. ಶ್ರೀಕೃಷ್ಣನು ತನ್ನ ಬಲದಿಂದ ಆ ವೃಕ್ಷವನ್ನು ಅಕ್ಕಪಕ್ಕದಲ್ಲಿ ಬೆಳೆದ ಅದರ ಮರಿಗಳನ್ನು (ಸಸಿಗಳನ್ನು) ಕಿತ್ತಿ ಎಸೆದನು.
'ಬಲೇನ' ಎಂಬ ಪದಕ್ಕೆ 'ಬಲರಾಮನಿಂದಲೇ ಈ ಕಾರ್ಯ ಮಾಡಿಸಿದನು'' ಎಂದೂ ಅರ್ಥೈಸಬಹುದು.

ಅಷ್ಟೇ ಅಲ್ಲದೆ,

ದೈತ್ಯಾಂಶ್ಚ ಗೋವಪುಷ ಆತ್ತವರಾನಿರಿಂಜಾತ್
ಮೃತ್ಯುಜ್ಝಿತಾನಪಿ ನಿಪಾತ್ಯ ದದಾಹ ವೃಕ್ಷಾನ್ ।
ವಿಕ್ರೀಡ್ಯ ರಾಮಸಹಿತೋ ಯಮುನಾಜಲೇ ಸ
ನೀರೋಗಮಾಳು ಕೃತವಾನ್ ವ್ರಜಮಬ್ಜನಾಭಃ ॥೪೭॥

ಅಲ್ಲಿ ಕೆಲದೈತ್ಯರೇ ಗೋವುಗಳ ರೂಪಗಳನ್ನು ಧಾರಣಮಾಡಿದ್ದರು. ಅವರಿಗೂ ವಿರಂಚಿಯ ವರವಿದ್ದಿತು. ಮರಣವನ್ನೂ ಗೆದ್ದಿದ್ದರು. ಆದರೂ ಶ್ರೀಕೃಷ್ಣನು ಆ ವೃಕ್ಷಗಳ ಜೊತೆಯಲ್ಲಿಯೇ ಅವುಗಳನ್ನೂ ಸುಟ್ಟು ಹಾಕಿದನು. ಬಲರಾಮನ ಸಹಿತರಾಗಿ ಎಲ್ಲರೂ ಯಮುನಾ ನದಿಯ ನೀರಿನಲ್ಲಿ ಆಟ ಆಡಿ ಮಿಂದ ಪ್ರಯುಕ್ತ ಎಲ್ಲರು ರೋಗರಹಿತರಾದರು. ಪದ್ಮನಾಭನ ಕೃಪೆಯಿಂದ ಗೋಕುಲದ ಆ ಪ್ರದೇಶವೆಲ್ಲವೂ ಆರೋಗ್ಯಕರವಾಯಿತು.

ವಿ.ವಿ. ಪರಿಸರ ಮಾಲಿನ್ಯ ಕಳೆಯಲು ಇದು ಉತ್ತಮ ಉದಾಹರಣೆ.
'ನೀಲಾ' ದೇವಿಯರೊಂದಿಗೆ ಶ್ರೀಕೃಷ್ಣನ ವಿವಾಹ.

ಸಪ್ತೋಕ್ಷಣೋಽತಿಬಲವೀರ್ಯಯುತಾನದಮ್ಯಾನ್
ಸರ್ವೈರ್ಗಿರೀಶವರತೋ ದಿತಿಜ ಪ್ರಧಾನಾನ್
ಹತ್ವಾ ಸುತಾಮಲಭದಾಶು ವಿಭುರ್ಯಶೋದಾ-
ಭ್ರಾತುಃ ಸ ಕುಂಭಕ ಸಮಾಹ್ವಯಿನೋಽಪಿ ನೀಲಾಮ್ ॥೪೮॥

ಯಶೋದೆಯ ಸಹೋದರನು ಕುಂಭಕನು. ಅವನ ಹತ್ತಿರ ಏಳು ಗೂಳಿಗಳಿದ್ದವು, ಆ ಏಳು ಗೂಳಿಗಳು ಬಲಯುತವಾಗಿದ್ದವು. ಅದಮ್ಯವೂ ಕೂಡ. ಏಳು ಜನ ಪ್ರಧಾನರಾದ ದೈತ್ಯರೇ ಗೂಳಿಗಳಾಗಿ ಬಂದಿದ್ದರು. ಅವರಿಗೂ ಗಿರೀಶನ ವರವಿದ್ದಿತು. ಇದನ್ನು ಯಾರೂ ಅರಿಯರು. ಶ್ರೀಕೃಷ್ಣನು ಮಾತ್ರ ಬಲ್ಲವನಾಗಿದ್ದನು. ಆತನು ಆ ಏಳೂ ಗೂಳಿಗಳನ್ನು ಕೊಂದು ಕುಂಭಕನ ಮಗಳಾದ ನೀಲಾದೇವಿಯನ್ನು ವರಿಸಿದನು.

ವಿ.ವಿ. ಆ ಏಳು ಗೂಳಿಗಳನ್ನು ಒಂದೇ ಹಗ್ಗದಿಂದ ಯಾರು ಬಂಧಿಸುವರೋ ಅವರಿಗೆ ತನ್ನ ಮಗಳನ್ನು ಕೊಡುವುದಾಗಿ ಕುಂಭಕನು ಸಾರಿದ್ದನು. ಇದು ಒಂದು ರೀತಿಯ ಸ್ವಯಂವರ ಪದ್ಧತಿಯೆನ್ನಬಹುದಲ್ಲವೇ?

(ಹರಿವಂಶ ಆಧಾರ).

ನೀಲಾದೇವಿ ಯಾರು?

ಯಾ ಪೂರ್ವಜನ್ಮನಿ ತಪಃ ಪ್ರಥಮೈವ ಭಾರ್ಯಾ
ಭೂಯಾಸಮಿತ್ಯಚರದಸ್ಯ ಹಿ ಸಂಗಮೋಮೇ ।
ಸ್ಯಾತ್ ಕೃಷ್ಣಜನ್ಮನಿ ಸಮಸ್ತ ವರಾಂಗ ನಾಭ್ಯಃ
ಪೂರ್ವಂ ತ್ವಿತಿಸ್ಮ ತದಿಮಾಂ ಪ್ರಥಮಂ ಸ ಆಪಃ ॥೪೯॥

ಆ ನೀಲಾದೇವಿಯು ಪೂರ್ವಜನ್ಮದಲ್ಲಿ ಶ್ರೀಕೃಷ್ಣನಿಗೆ ತಾನೇ ಮೊದಲ ಹೆಂಡತಿಯಾಗಬೇಕು. ಪ್ರಭುವಿನ ಸಂಗ ತನಗೇ ಮೊದಲು ಲಭ್ಯವಾಗಬೇಕು ಎಂಬ ಉದ್ದೇಶದಿಂದ ತಪಸ್ಸನ್ನು ಆಚರಿಸಿದ್ದಳು. ಅವಳೇ ಇಂದು ಕೃಷ್ಣಾವತಾರದಲ್ಲಿ ಇತರ ಪತ್ನಿಯರಿಗಿಂತಲೂ ತಾನೇ ಮೊದಲ ಹೆಂಡತಿಯಾಗಿದ್ದಾಳೆ.

ಅಗ್ರೇ ದ್ವಿಜತ್ವತ ಉಪಾವಹದೇಷನೀಲಾಂ
ಗೋಪಾಂಗನಾ ಅಪಿ ಪುರಾವರಮಾಪಿರೇಯತ್ ।
ಸಂಸ್ಕಾರತಃ ಪ್ರಥಮಮೇವ ಸುಸಂಗಮೋ ನೋ
ಭೂಯಾತ್ತವೇತಿ ಪರಮಾಪ್ಸರಸಃ ಪುರಾ ಯಾಃ ॥೫೦॥

ಉಪನಯನವಾಗುವ ಮೊದಲೇ ಶ್ರೀಕೃಷ್ಣನು ನೀಲಾದೇವಿಯನ್ನು ಸ್ವೀಕರಿಸಿದನು. ಇತರ ಅನೇಕ ಅಪ್ಸರೆಯರು ಕೂಡ ಶ್ರೀಕೃಷ್ಣನ ಸಂಗದ ಬಯಕೆಯಿಂದಲೇ ಗೋಪಾಂಗನೆಯರಾಗಿ ಅವತರಿಸಿದ್ದಾರೆ. ಅವರೂ ಪ್ರಥಮಸಂಗವನ್ನೇ ಬಯಸಿದ್ದಾರೆ. ಆದರೂ ಶ್ರೀಕೃಷ್ಣನು ಗೂಳಿಗಳ ನಿಮಿತ್ತದಿಂದ ನೀಲಾದೇವಿಯ ಇಚ್ಛೆಯನ್ನು ಈಡೇರಿಸಿದ್ದಾನೆ.

ಗೂಳಿಗಳಾದ ದೈತ್ಯರನ್ನು ಕೊಲ್ಲುವುದು ಮೊದಲ ಅವಶ್ಯಕವಾಗಿತ್ತು. ಅದಕ್ಕಾಗಿ ನೀಲಾದೇವಿಯರ ವಿವಾಹ ಆಯಿತು.

ತತ್ರಾಥ ಕೃಷ್ಣಮವದನ್ ಸಬಲಂ ವಯಸ್ಯಾಃ
ಪಕ್ವಾನಿ ತಾಲಸುಫಲಾನ್ಯನು ಭೋಜಯೇತಿ ।
ಇತ್ಯರ್ಥಿತಃ ಸಬಲ ಆಪ ಸ ತಾಲವೃಂದಂ
ಗೋಪ್ಯೈರ್ದುರಾಸದ ಮತೀವ ಹಿ ಧೇನುಕೇನ ॥೫೧॥

ಅಲ್ಲಿಯೇ ಅನೇಕ ತಾಲಮರಗಳು ಬೆಳೆದಿದ್ದವು. ಅವುಗಳಿಗೆ ಪಕ್ವವಾದ ಅನೇಕ ಫಲಗಳಿದ್ದವು. ಶ್ರೀಕೃಷ್ಣನ ಅನೇಕ ಗೆಳೆಯರು ಬಲಭದ್ರನೇ ಮೊದಲಾದವರು ಆ ಫಲಗಳನ್ನು ಭುಂಜಿಸಲು ಬಯಸಿದರು. ಶ್ರೀಕೃಷ್ಣನು ಬಲರಾಮನಿಂದ ಆ ಗಿಡಗಳನ್ನು ಕತ್ತರಿಸಿ ಗೋಪಾಲಕರ ಇಚ್ಛೆಯನ್ನು ಪೂರ್ತಿಗೊಳಿಸಿದನು. ಧೇನುಕನೆಂಬ ದೈತ್ಯನೇ ಅಲ್ಲಿ ಇರುತ್ತಿದ್ದನು. ಗಿಡಗಳು ನಾಶವಾದ ಕೂಡಲೆ ಅವನು ಓಡಿದನು.

ಈ ರೀತಿಯಾಗಿ ಧೇನುಕಾಸುರನ ಪರಾಭವವಾಯಿತು.

ಆ ಧೇನುಕನಾರು?

**ವಿಷ್ಣೋಃಶತೋ ಪರಮಾಪ್ಯ ಸುದುಷ್ಟದೈತ್ಯೋ**
**ದೀರ್ಘಾಯುರುತ್ತಮಬಲಃ ಕದನಪ್ರಿಯೋऽಭೂತ್ ।**
**ನಿತ್ಯೋದ್ಧತಃ ಸ ಉತ ರಾಮಮವೇಷ್ಯ ತಾಲ**
**ಬೃಂದಾತ್ಫಲಾನಿಗಲಯಂತಮಥಅಭ್ಯಧಾವತ್ ॥೫೨॥**

ಆ ಧೇನುಕನು ಒಬ್ಬ ದುಷ್ಟದೈತ್ಯನು. ಅವನು ವಿಷ್ಣೋಃಶನನ್ನು ಮೆಚ್ಚಿಸಿ, ದೀರ್ಘಾಯು ಮತ್ತು ಉತ್ತಮ ಬಲ ಇವುಗಳನ್ನು ಪಡೆದಿದ್ದನು. ಅವನು ಕದನ ಪ್ರಿಯನೂ ಆಗಿದ್ದನು. ಆ ತಾಲ ಫಲಗಳನ್ನು ತಿಂದು ದೈತ್ಯನು ತೃಪ್ತನಾಗುತ್ತಿದ್ದನು. ಬಲರಾಮನಿಂದ ಆ ಮರಗಳು ನಾಶವಾದಾಗ ಅವನು ಅಲ್ಲಿಂದ ಓಡಿಹೋದನು.

**ತಸ್ಯ ಪ್ರಹಾರಮಭಿಕಾಂಕ್ಷತ ಆಶು ಪೃಷ್ಠ-**
**ಪಾದೌ ಪ್ರಗೃಹ್ಯ ತೃಣರಾಜಶಿರೋऽಹರತ್ಸಃ॥**
**ತಸ್ಮಿನ್ ಹತೇ ಖರತರೇ ಖರರೂಪದೈತ್ಯೇ**
**ಸರ್ವೇ ಖರಾಶ್ಚ ಖರಾತಾಲವನಾಂತ ರಸ್ಥಾ: ।**
**ಪ್ರಾಪುಃ ಖರಸ್ವರತರಾಃ ಖರಾರಾಕ್ಷಸಾರಿಂ**
**ಕೃಷ್ಣಂ ಬಲೇನ ಸಹಿತಂ ನಿಹತಾಶ್ಚ ತೇನ ॥೫೩॥**

ಬಲರಾಮನ ಪೆಟ್ಟಿನಿಂದ ಓಡಿಹೋದ ದೈತ್ಯನು ಪುನಃ ಖರರೂಪದಿಂದ ಅಲ್ಲಿಗೆ ಬರಹತ್ತಿದನು. ತನ್ನ ಹಿಂದಿನ ಕಾಲುಗಳಿಂದ ಒದೆದು ಅವರನ್ನು

ಕೊಲ್ಲಬೇಕೆಂಬ ಉದ್ದೇಶ ಅವನದಾಗಿತ್ತು. ಆದರೆ ರಾಮಕೃಷ್ಣರು ಆ ಕತ್ತೆ ಬರುವುದನ್ನು ಕಂಡು ಅದರ ಹಿಂಬದಿಯ ಎರಡೂ ಕಾಲುಗಳನ್ನು ಹಿಡಿದು ಮೇಲಕ್ಕೆ ಎತ್ತಿ ಅಪ್ಪಳಿಸಿದರು. ಅದರಿಂದ ಆ ಖರರೂಪದೈತ್ಯನ ನಾಶವಾಯಿತು. ಅಲ್ಲದೆ ಖರವೈರಿಯಾದ ಕೃಷ್ಣನು ಆ ಖರನ ಇತರ ಅನುಯಾಯಿಗಳನ್ನು ಬಲರಾಮನಿಂದ ಕೊಲ್ಲಿಸಿದನು. ಈ ರೀತಿಯಾಗಿ ಖರನ ವಂಶವೇ ನಾಶವಾಯಿತು.

ಸರ್ವಾನ್ನಿಹತ್ಯ ಖರರೂಪಧರಾನ್ ಸ ದೈತ್ಯಾನ್
ವಿಘ್ನೇಶ್ವರಸ್ಯ ವರತೋಽನ್ಯ ಜನೈರವಧ್ಯಾನ್ ।
ಪಕ್ವಾನಿ ತಾಲಸುಫಲಾನಿ ನಿಜೇಷು ಚಾದಾ-
ದ್ದುರ್ವಾರಪೌರುಷಗುಣೋದ್ಧುರಿತೋ ರಮೇಶಃ ॥೫೪॥

ಈ ರೀತಿಯಾಗಿ ಖರರೂಪಧರಿಸಿದ ಎಲ್ಲ ದೈತ್ಯರು ಹತರಾದರು. ಅವರೆಲ್ಲರಿಗೂ ವಿಘ್ನೇಶ್ವರನ ವರಬಲ ಮತ್ತು ಅಜೇಯತ್ವವಿದ್ದಿತು. ಆದರೂ ಶ್ರೀಕೃಷ್ಣನು ಅವರೆಲ್ಲರನ್ನೂ ನಾಶಮಾಡಿದನು. ಶ್ರೇಷ್ಠ ಪೌರುಷ ಉಳ್ಳವನು, ಸರ್ವಗುಣಸಂಪನ್ನನು ಆದ ರಮೇಶನು ದೈತ್ಯಸಮುದಾಯವನ್ನು ನಾಶಗೊಳಿಸಿ, ಪಕ್ವವಾದ ತಾಲಫಲಗಳನ್ನು ತನ್ನ ಪರಿವಾರಕ್ಕಿತ್ತು ಸಂತೋಷ ಪಡಿಸಿದನು.

'ಪ್ರಲಂಬ' ಅಸುರನವಧೆ.

ಪಕ್ಷದ್ವಯೇನ ವಿಹರತ್ಸ್ವಥ ಗೋಪಕೇಷು
ದೈತ್ಯಃ ಪ್ರಲಂಬ ಇತಿ ಕಂಸವಿಸೃಷ್ಟ ಆಗಾತ್ ।
ಕೃಷ್ಣಸ್ಯ ಪಕ್ಷಿಸು ಜಯತ್ಸು ಸ ರಾಮಮೇತ್ಯ
ಪಾಪಃ ಪರಾಜಿತ ಉವಾಹ ತಮುಗ್ರರೂಪ ॥೫೫॥

ಒಂದು ದಿನ ಎಲ್ಲ ಗೋಪಾಲಕರು ತಮ್ಮಲ್ಲಿ ಎರಡು ಗುಂಪುಗಳನ್ನು ಮಾಡಿಕೊಂಡು ವಿಹಾರ (ವಿನೋದ)ಕ್ಕೆಂದು ಆಟವಾಡುತ್ತಿದ್ದರು.

ಒಂದು ಗುಂಪಿಗೆ ಬಲರಾಮನು, ಇನ್ನೊಂದಕ್ಕೆ ಶ್ರೀಕೃಷ್ಣನು ಮುಖ್ಯರಾಗಿದ್ದರು. ಆಗ ಕಂಸನಿಂದ ಕಳಿಸಲ್ಪಟ್ಟ 'ಪ್ರಲಂಬ' ಎಂಬ ದೈತ್ಯನು ಅಲ್ಲಿಗೆ ಬಾಲರೂಪದಲ್ಲಿ ಬಂದನು. ಕೃಷ್ಣನ ಪಕ್ಷದಲ್ಲಿದ್ದರೆ ತನಗೆ ಜಯ

ನಿಷ್ಠೆಯೆ ಎಂದು, ಕೃಷ್ಣನ ಪಕ್ಷಕ್ಕೆ ಸೇರಿದನು. ಶ್ರೀಕೃಷ್ಣನ ಪಕ್ಷಕ್ಕೆ ಜಯವಾಯಿತು. ಆವರೆ ಪ್ರಲಾಂಬನಿಗೆ ಪರಾಜಯವಾಯಿತು. ಆ ಪಾಪಿಷ್ಠನಾದ ದೈತ್ಯನು ಬಲರಾಮನನ್ನು ತನ್ನ ಬೆನ್ನಮೇಲೆ ಹೊತ್ತು ತನ್ನ ಉಗ್ರರೂಪ ತಾಳಿದನು.

ಆಟದ ಹಿನ್ನಲೆ– ಆಟದಲ್ಲಿ ಸೋತವರು ಗೆದ್ದವರನ್ನು ತಮ್ಮ ಬೆನ್ನಮೇಲೆ ಹೊತ್ತುಕೊಂಡು ಓಡಬೇಕು. ಇದು ನಿಯಮ. ಇಂತಹ ಆಟಗಳನ್ನು ಇಂದಿಗೂ ಹಳ್ಳಿಗಳಲ್ಲಿ ಆಡುವುದುಂಟು. ಇದಕ್ಕಾಗಿ ಹಣದ ವೆಚ್ಚವಿಲ್ಲ. ಮೇಲಾಗಿ ಶಾರೀರಿಕ ಸ್ವಾಸ್ಥ್ಯವು ಲಭಿಸುತ್ತದೆ.

ವಿ.ವಿ. 'ಪ್ರಲಂಬ' ಒಬ್ಬ ದೈತ್ಯ. ದೈತ್ಯರು ನಿಶಾಚರರು. ಅವರು ಕತ್ತಲಲ್ಲಿಯೇ ವಾಸಿಸುವವರು. ಅಂತೆಯೇ ಅವನು ಕೃಷ್ಣ ಪಕ್ಷವನ್ನು ಬಯಸಿದನು. ಅವನಿಗೆ ಶುಕ್ಲಪಕ್ಷವು ಹಿಡಿಸುವುದಾದರೂ ಹೇಗೆ?

ಕೆಟ್ಟವರು ಎಲ್ಲಿದ್ದರೂ ಅವರ ಪಾಲಿಗೆ ಸೋಲು ಕಟ್ಟಿಟ್ಟದ್ದೇ!

**ಭೀತೇನ ರೋಹಿಣಿ ಸುತೇನ ಹರಿಃ ಸ್ತುತೋಽಸೌ**
**ಸ್ವಾವಿಷ್ಟತಾಮುಪದಿದೇಶ ಬಲಾಭಿಪೂರ್ತ್ಯೈ ॥**
**ತೇನೈವ ಪೂರಿತಬಲೋಽಬರಚಾರಿಣಂ ತಂ**
**ಪಾಪಂ ಪ್ರಲಂಬಮುರುಮುಷ್ಟಿಹತಂ ಚಕಾರ ॥೫೬॥**

ಆ ದುಷ್ಟನಾದ ದೈತ್ಯನು ಬಲರಾಮನನ್ನು ಹೊತ್ತು, ಆಕಾಶಕ್ಕೆ ಹಾರಿದನು. ಭೀತನಾದ ಬಲರಾಮನು ಆಕಾಶದಲ್ಲಿಯೇ ಶ್ರೀಹರಿಯನ್ನು ಸ್ತುತಿಸಿದನು. ಬಲರಾಮನಲ್ಲಿ ಆವಿಷ್ಟನಾಗಿದ್ದ ಶುಕ್ಲಕೇಶಿ ಪರಮಾತ್ಮನ ಬಗೆಗೆ ಉಪದೇಶಿಸಿದನು. ಅದರ ಪರಿಣಾಮದಿಂದ ಬಲರಾಮನಲ್ಲಿ ಬಲ ಮತ್ತು ಸ್ಫೂರ್ತಿ ತುಂಬಿಕೊಂಡವು. ಅದರಿಂದ ಬಲವಂತನಾದ ಬಲರಾಮನು ಆ ಪಾಪಿಯಾದ ಪ್ರಲಂಬನನ್ನು ಅಲ್ಲಿ ತನ್ನ ಪ್ರಬಲವಾದ ಮುಷ್ಟಿಯಿಂದ ಹೊಡೆದು ಕೆಡಹಿದನು.

ವಿ.ವಿ. ಮೇಲಿನ ಶ್ಲೋಕದಿಂದ ಪ್ರಲಂಬನು ಬಲರಾಮನಿಗಿಂತಲೂ ಬಲಿಷ್ಠನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಜೊತೆಯಲ್ಲಿ ಪರಮಾತ್ಮನ ಆವೇಶವು ಎಷ್ಟು ಪ್ರಬಲವಾದದ್ದು ಎಂತಹ ಕಾರ್ಯಗಳನ್ನೂ ಮಾಡಬಲ್ಲುದು ಎಂಬುದೂ ತಿಳಿಯುತ್ತದೆ.

ತಸ್ಮಿನ್ ಹತೇ ಸುರಗಣಾ ಬಲದೇವನಾಮ
ರಾಮಸ್ಯ ಚಕ್ರುರತಿತೃಪ್ತಿಯುತಾ ಪರಿಶ್ಚ ।
ವಹ್ನಿಂ ಪಪೌ ಪುನರಪಿ ಪ್ರದಹಂತಮುಚ್ಚೈಃ
ಗೋಪಾಂಶ್ಚ ಗೋಗಣಮಗಣ್ಯಗುಣಾರ್ಣವೋಽಪಾತ್ ॥೫೭॥

ಅಂತಹ ದೈತ್ಯನ ಹತ್ಯೆಯಿಂದ ದೇವತೆಗಳು ಸಂತುಷ್ಟರಾದರು. ಇದುವರೆಗೆ ಆತನನ್ನು ಕೇವಲ ರಾಮನೆಂದು ಕರೆಯುತ್ತಿದ್ದರೆ. ಇಂದು ಬಲರಾಮನೆಂದು ಕರೆದರು. ಅಷ್ಟರಲ್ಲಿ ಕಾಡ್ಗಿಚ್ಚು ಮತ್ತೊಮ್ಮೆ ಹತ್ತಿ ಉರಿಯಹತ್ತಿತು. ಸರ್ವಗುಣಗಳಿಂದ ಸಂಪೂರ್ಣನಾದ ಶ್ರೀಹರಿ ಅದನ್ನು ಪುನಃ ಪಾನಮಾಡಿ ಗೋಪರನ್ನೂ, ಗೋವುಗಳನ್ನೂ ರಕ್ಷಿಸಿದನು. ಸರ್ವರೂ ತೃಪ್ತಿಗೊಂಡರು.

ವಿಪ್ರಪತ್ನಿಯರ ಭಕ್ತಿ

ಕೃಷ್ಣಂ ಕದಾಚಿದತಿದರೂಗತಂ ವಯಸ್ಯಾ
ಊಚುಃ ಷುಧಾ ರ್ದಿತ ತರಾಮಯ ಮಿತ್ಯುದಾರಮ್।
ಸೋಽಪ್ಯಾಹ ಸತ್ರಮಿಹ ವಿಪ್ರ ಗಣಾಶ್ಚರಂತಿ
ತಾನ್ಯಾ ಚತೇತಿ ಪರಿಪೂರ್ಣ ಸಮಸ್ತ ಕಾಮಃ ॥೫೮॥

ಒಂದು ದಿನ ಶ್ರೀಕೃಷ್ಣನು ತನ್ನ ಗೆಳೆಯರೊಂದಿಗೆ ಬಹುದೂರ ಹೋಗಿದ್ದನು. ಅಲ್ಲಿ ಗೋಪಾಲಕರಿಗೆ ಹಸಿವೆಯಾಯಿತು. ಉದಾರಿಯಾದ ಶ್ರೀಕೃಷ್ಣನನ್ನು ಕುರಿತು ಆಹಾರಕ್ಕಾಗಿ ಪ್ರಾರ್ಥಿಸಿದರು. ಹತ್ತಿರದಲ್ಲಿಯೇ ವಿಪ್ರರು ಯಾಗವನ್ನು ಆಚರಿಸುತ್ತಿದ್ದರು. ಶ್ರೀಕೃಷ್ಣನು ತಾನು ಸಮಸ್ತ ಕಾಮಗಳಿಂದ ಪೂರ್ಣನಾದರೂ, ಗೋಪಾಲಕರಿಗಾಗಿ ಆಹಾರವನ್ನು ಕೇಳಲು ಹೇಳಿ ಕಳುಹಿದನು.

ತಾನ್ಪ್ರಾಪ್ಯ ಕಾಮ ಮನವಾಪ್ಯ ಪುನಶ್ಚ ಗೋಪಾಃ
ಕೃಷ್ಣಂ ಸಮೀ ಯುರಭ ತಾನವದತ್ಯ ದೇವಃ ।
ಪತ್ನೀಃ ಸಮರ್ಥಯತ ಮದ್ವಚನಾ ದಿತಿ ಸ್ಮ
ಚಕ್ರುಶ್ಚ ತೇ ತದಪಿ ತಾ ಭಗವಂತ ಮಾಪುಃ ॥೫೯॥

ಆ ಗೋಪಾಲಕರು ಅಲ್ಲಿ ಬಂದು ಬೇಡಿದರು. ಅವರ ಆಶೆ ಪೂರ್ತಿಯಾಗಲಿಲ್ಲ. ಪುನಃ ಆ ಗೋಪಾಲಕರು ಶ್ರೀಕೃಷ್ಣನ ಹತ್ತಿರ ಬಂದು ಕೇಳಿದರು. ಆಗ ಶ್ರೀಹರಿ ನಾನು ಬಂದಿದ್ದೇನೆ ಎಂದು ಹೇಳಿ ಬ್ರಾಹ್ಮಣ ಪತ್ನಿಯರನ್ನು ಕೇಳಿ ಎಂದು ಹೇಳಿದನು ಹೀಗೆ ಕೇಳಿದ ಕೂಡಲೇ ಆ ಬ್ರಾಹ್ಮಣರ ಪತ್ನಿಯರು ಕೂಡಲೇ ಭಗವಂತನಿದ್ದಲ್ಲಿಗೆ ಧಾವಿಸಿ ಬಂದರು. ಹೇಗೆ ಬಂದರು?

**ತಾಂ ಷಡ್ವಿಧಾನ್ನ ಪರಿಪೂರ್ಣಕರಾಃ ಸಮೇತಾಃ**
**ಪ್ರಾಪ್ತಾ ವಿಸೃಜ್ಯ ಪತಿ–ಪುತ್ರ ಸಮಸ್ತ ಬಂಧೂನ್ ।**
**ಆತ್ಮಾರ್ಚನೈಕ ಪರಮಾ ವಿಸಸರ್ಜ ಕೃಷ್ಣ**
**ಏಕಾ ಪತಿ–ಪ್ರವಿಧೃತಾ ಪದಮಾಪ ವಿಷ್ಣೋಃ ॥೬೦॥**

ಗೋಪಾಲಕರಿಂದ ಶ್ರೀಕೃಷ್ಣನು ಬಂದ ವಿಚಾರವನ್ನು ಕೇಳಿದ ಆ ಸ್ತ್ರೀಯರು ಷಡ್ರಸಗಳಿಂದ ಕೂಡಿದ ಆಹಾರವನ್ನು ತುಂಬುಕರಗಳಲ್ಲಿ ಹಿಡಿದು ಸರ್ವರೂ ಕೂಡಿ ಅಲ್ಲಿಗೆ ಬಂದರು. ಅವರೆಲ್ಲರೂ ಪತಿ–ಪುತ್ರ ಮತ್ತು ಬಂಧುಗಳನ್ನು ಬಿಟ್ಟು ಬಂದಿದ್ದರು. ಪರಮಾತ್ಮನನ್ನು ಪೂಜಿಸುವುದೇ ಅವರ ಪರಮ ಮತ್ತು ಏಕೈಕ ಗುರಿಯಾಗಿತ್ತು. ಶ್ರೀಕೃಷ್ಣನು ಅವರನ್ನು ಸಂತೈಸಿ ಹಿಂದಿರುಗಿಸಿದನು. ಒಬ್ಬ ಸ್ತ್ರೀಯಳನ್ನು ಮಾತ್ರ ಆಕೆಯ ಪತಿಯು ತಡೆದು ನಿಲ್ಲಿಸಿದ್ದನು. ಆಕೆಯು ಅಲ್ಲಿಯೇ ಆ ಶರೀರವನ್ನು ತ್ಯಜಿಸಿ ಶ್ರೀಕೃಷ್ಣನ ಸನ್ನಿಧಿಯನ್ನು ಪಡೆದಳು.

**ಭುಕ್ತ್ವಾಥ ಗೋಪಾ ಸಹಿತೋ ಭಗವಾಂಸ್ತದನ್ನಂ**
**ರೇಮೇ ಚ ಗೋಕುಲ ಮವಾಪ್ಯ ಸಮಸ್ತನಾಥಃ ।**
**ಆಜ್ಞಾತಿ ಲಂಘನ ಕೃತೇ ಸ್ವಕೃತಾಪರಾಧಾತ್**
**ಪಶ್ಚಾತ್ತು ತಪ್ತ ಮನಸೋऽಪ್ಯಭವಂಶ್ಚ ವಿಪ್ರಾಃ ॥೬೧॥**

ಬ್ರಾಹ್ಮಣ ಸ್ತ್ರೀಯರು ಭಕ್ತಿಯಿಂದ ತಂದ ಅನ್ನವನ್ನು ಭಗವಂತನು ಮತ್ತು ಗೋಪಾಲಕರು ಕೂಡಿಯೇ ಭುಂಜಿಸಿದರು. ಎಲ್ಲರೂ ಗೋಕುಲಕ್ಕೆ ಬಂದು ಆನಂದದಿಂದ ಕಾಲಕಳೆಯಹತ್ತಿದರು. ಆ ಬ್ರಾಹ್ಮಣರು ಶ್ರೀಹರಿಯ

ಆಜ್ಞೆಯನ್ನು ಉಲ್ಲಂಘಿಸಿದುದಕ್ಕಾಗಿ, ತಾವು ಮಾಡಿದ ಅಪರಾಧಕ್ಕಾಗಿ ಖಿನ್ನರಾಗಿ ಪಶ್ಚಾತ್ತಾಪಪಡಹತ್ತಿದರು.

ಭಕ್ತಿಮಾರ್ಗದಲ್ಲೂ ಪುರುಷರಿಗಿಂತ ಸ್ತ್ರೀಯರು ಮುಂದು ಎಂದು ಹೇಳಬಹುದಲ್ಲವೇ?

ಇಂದ್ರನ ಗರ್ವಭಂಗ

**ಕೃಷ್ಣೋSಥ ವೀಕ್ಷ್ಯ ಪುರುಹೂತಮಹ ಪ್ರಯತ್ನಂ**
**ಗೋಪಾನ್ನ್ಯ ವಾರಯದ ವಿಸ್ಮರಣಾಯ ತಸ್ಯ ।**
**ಮಾಮಾನು ಕ್ಷ್ಣೋಯಮಿತಿ ಮಾಮವ ಗಚ್ಛತಾತ್ಸ**
**ಇತ್ಯವ್ಯಯೋSಸ್ಯ ವಿದಧೇ ಮಹಭಂಗ ಮೀಶಃ ॥೬೨॥**

ಇಂದ್ರನಿಗೆ ಅಹಂಕಾರ ಬಂದಿತ್ತು. ಶ್ರೀಕೃಷ್ಣನು ಸಾಮಾನ್ಯ ಗೋಪಾಲಕನು. ಅವನೂ ಎಲ್ಲರಂತೆ ಮನುಷ್ಯನು ಎಂದು ತಿಳಿದಿದ್ದನು. ಶ್ರೀಕೃಷ್ಣನು ಪರಮಾತ್ಮನು ಎಂಬುದನ್ನು ಮರೆತಿದ್ದನು. ಇದನ್ನು ನೋಡಿದ ಶ್ರೀಕೃಷ್ಣನು, ಇಂದ್ರನ ವಿಸ್ಮರಣೆಯನ್ನು ಸರಿಪಡಿಸುವ ಉದ್ದೇಶದಿಂದ ಗೋಪಾಲಕರು ಆಚರಿಸುತ್ತಿರುವ ಇಂದ್ರನ ಪೂಜೆಯನ್ನು ನಿಲ್ಲಿಸಿದನು.

ಇಂದ್ರಯಾಗ.

**ಗೋಪಾಂಶ್ಚ ತಾನ್ ಗಿರಿ ಮಹೋSಸ್ಮದುರು ಸ್ವಧರ್ಮ**
**ಇತ್ಯುಕ್ತಿ ಸಚ್ಚಲತ ಆತ್ಮಮಹೇSವತಾರ್ಯ ।**
**ಭೂತ್ವಾತಿ ವಿಸ್ತೃತ ತನುರ್ಬುಭುಜೇ ಬಲಂ ಸ**
**ನಾನಾ ವಿಧಾನ್ನ ರಸಪಾನ ಗುಣ್ಯೈಃ ಸಹೈವ ॥೬೩॥**

ಗಿರಿಯ ಪೂಜೆಯನ್ನು ಮಾಡುವುದೇ ನಮಗೆ ಉತ್ತಮವಾದ ಧರ್ಮ. ಸ್ವಧರ್ಮವೂ ಕೂಡ ಎಂದು ಹೇಳಿ ಗೋಪಾಲಕರಿಗೆ ಗಿರಿಯ ಪೂಜೆಗಾಗಿ ಪ್ರಚೋದಿಸಿದನು. ತಾನೇ ಆ ಪರ್ವತದಲ್ಲಿ ಪ್ರವೇಶಿಸಿದನು. ತನ್ನ ವಿಸ್ತೃತವಾದ ಶರೀರ ಮತ್ತು ಬಲವನ್ನು ಅದರಲ್ಲಿ ಪ್ರದರ್ಶಿಸಿದನು. ಅವರಿತ್ತ ನಾನಾವಿಧ ಅನ್ನ ರಸಪಾನಗಳನ್ನು, ಅವರ ಭಕ್ತಿಯನ್ನು ಸ್ವೀಕರಿಸಿದನು.

ಇಲ್ಲಿ ಶ್ರೀಕೃಷ್ಣನು ಸುಳ್ಳಾಡಿದನೇ? ಇಲ್ಲ.

ಆಪಾತತಃ ಇದು ಸುಳ್ಳಿನಂತೆ – ಕಾಣುವುದು. ಕಣ್ಣಿಗೆ ಕಾಣದ ಇಂದ್ರನನ್ನು ಏಕೆ ನಂಬಬೇಕು? ಗಿರಿಯಿಂದ ನಮಗೆ ಹುಲ್ಲು, ಮೇವು, ನೀರು ಎಲ್ಲವೂ ದೊರೆಯುತ್ತದೆ. ಕಾರಣ ಗಿರಿಯನ್ನೇ ಪೂಜಿಸಬೇಕು ಎಂಬ ನಾಸ್ತಿಕ ವಾದದ ಛಾಯೆಯಂತೆಯೂ ಕಾಣುತ್ತದೆ. ಇದು ತೋರಿಕೆಗೆ ಮಾತ್ರ.

ಇದು ಶ್ರೀಕೃಷ್ಣನ ಉದ್ದೇಶವೂ ಅಲ್ಲ. ಶ್ರೀ ಮದಾಚಾರ್ಯರ ಸಮ್ಮತವೂ ಅಲ್ಲ. ಅಂತೆಯೇ ಅವರು 'ಆತ್ಮ ಮಹೋದತಾರ್ಯ' ಎಂಬ ಪದವನ್ನು ಬಳಸಿದ್ದಾರೆ. ಸರ್ವ ಶಬ್ದವಾಚ್ಯನು ಪರಮಾತ್ಮನೇ ಅಲ್ಲವೇ? ಅದರಲ್ಲಿ ಗಿರಿಯೂ ಸೇರಿದೆ. 'ಗಿರಿ' ಎಂದಾಗ ಕೇವಲ ಜಡವಾದ ಕಲ್ಲು ಬಂಡೆಯಲ್ಲ, ಆ ಗಿರಿಯ ಅಭಿಮಾನಿದೇವತೆ ಅಂದರೆ ಪರಮಾತ್ಮನೇ, ಎಂದು ಅರ್ಥಮಾಡಿದಾಗ ಉತ್ತಮ. ನಾಮಾನಿ ಸರ್ವಾಣಿ ಯಾಮಾ ವಿಶಂತಿ ಎಂಬ ಶ್ರುತಿ ವಾಕ್ಯವು ಇದನ್ನೇ ಹೇಳುತ್ತದೆ.

ಅಲ್ಲದೆ ಶ್ರೀ ಜಗನ್ನಾಥದಾಸರು ತಮ್ಮ ಹರಿಕಥಾಮೃತಸಾರ ಗ್ರಂಥದಲ್ಲಿ ಇದನ್ನು ಸ್ಪಷ್ಟವಾಗಿ ಪುಷ್ಟೀಕರಿಸಿದ್ದಾರೆ.

ಜಲಜನಾಭನಿಗೆರಡು ಪ್ರತಿಮೆಗ । ಳಿಳೆಯೊಳಗೆ ಜಡ
ಚೇತನಾತ್ಮಕ
ಚಲವೊಳೀರ್ವಗೆ ಸ್ತ್ರೀ ಪುರುಷ ಭೇದದಲಿ ಜಡದೊಳಗೆ ।
ತಿಳಿವುದಾಹಿತ ಪ್ರತಿಮೆ ಸಹಜಾ । ಚಲಗಳೆಂದಿಬ್ಬಗೆ ಪ್ರತೀಕದಿ
**ಲಲಿತ ಪಂಚತ್ರಯ ಸುಗೋಳಕವರಿತು ಭಜಿಸುತಿರು ॥೧೧–೨೩॥**

ಕ್ಷುಲ್ಲಕದೇವತೆಗಳನ್ನು ಪೂಜಿಸಬಾರದು. ಸರ್ವವ್ಯಾಪ್ತನಾದ ಭಗವಂತನನ್ನೇ ಪೂಜಿಸಬೇಕೆಂಬುದೇ ಇದರ ಅಂತರಾರ್ಥ

**ಇಂದ್ರೋಽಥ ವಿಸ್ಮೃತರಥಾಂಗ ಧರಾವತಾರೋ**
**ಮೇಘಾನ್ ಸಮಾದಿಶದುರೋದಕ ಪೂಗವೃಷ್ಟ್ಯೈ ।**
**ತೇ ಪ್ರೇರಿತಾಃ ಸಕಲಗೋಕುಲನಾಶನಾಯ**
**ಧಾರಾ ವಿತೇರುರುನಾಗಕರ ಪ್ರಕಾರಾಃ ॥೬೪॥**

ಈಗ ಇಂದ್ರನು, ಚಕ್ರಪಾಣಿಯಾದ ಶ್ರೀಕೃಷ್ಣನು ನಾರಾಯಣನ ಅವತಾರ, ಎಂಬುದನ್ನು ಮರೆತು ಬಿಟ್ಟಿದ್ದನು. ಅವನು 'ಮೇಘಗಳನ್ನು ಕರೆದು ಸಾಕಷ್ಟು ಮಳೆಗರೆದು ಗೋಕುಲವನ್ನು ನಾಶಮಾಡಿರಿ' ಎಂದು ಪ್ರೇರೇಪಿಸಿದನು. ಆಗ ಆ ಮೇಘಗಳು ಆನೆಗಳ ಸೊಂಡಿಲುಗಳ ಗಾತ್ರದಲ್ಲಿ ಧಾರಾಕಾರವಾಗಿ ಒಂದೇ ಸಮನೆ ಮಳೆಯನ್ನು ಸುರಿಸಹತ್ತಿದವು.

**ತಾಭಿರ್ನಿಪೀಡಿತ ಮುದೀಕ್ಷ್ಯ ಸ ಕಂಜನಾಭಃ**
**ಸರ್ವಂ ವ್ರಜಂ ಗಿರಿವರಂ ಪ್ರಸಭಂ ದಧಾರ ।**
**ವಾಮೇನ ಕಂಜದಲ ಕೋಮಲ ಪಾಣಿ ನೈವ**
**ತತ್ರಾಖಿಲಾಃ ಪ್ರವಿವಿಶುಃ ಪಶುಪಾಃ ಸ್ವಗೋಭಿಃ ॥೬೫॥**

ಆ ಗಿರಿಯ ಮೇಲೆ ಧಾರಾಕಾರವಾಗಿ ಬೀಳುವ ಮಳೆಯಿಂದ ಪೀಡಿತರಾದ ಗೋಕುಲದ ಸರ್ವಜನರನ್ನು ಕಮಲನಾಭನಾದ ಶ್ರೀಕೃಷ್ಣನು ನೋಡಿದನು. ಕಮಲದಳದಂತೆ ಮೃದುವಾದ ಕೋಮಲವಾದ ತನ್ನ ಎಡಗೈಯಿಂದಲೇ ಆ ಗೋವರ್ಧನ ಪರ್ವತವನ್ನೇ ಎತ್ತಿ ಹಿಡಿದನು. ಅದರ ಆಶ್ರಯದಲ್ಲಿ ಗೋಪಾಲಕರು, ಗೋವುಗಳು ಮತ್ತು ಇತರ ಸರ್ವಜನರೂ ಬಂದು ಸೇರಿಕೊಂಡರು.

**ವೃಷ್ಟ್ವೋರು ವಾರ್ಯಥ ನಿರಂತರ ಸಪ್ತರಾತ್ರಂ**
**ತ್ರಾತಮ ನಿರೀಕ್ಷ್ಯ ಹರಿಣಾ ವ್ರಜ ಮಶ್ರಮೇಣ ।**
**ಶಕ್ರೋಽನು ಸಂಸ್ಮೃತ ಸುರ ಪ್ರವರಾತಾರಃ**
**ಪಾದಾಂಬುಜಂ ಯದುಪತೇಃ ಶರಣಂ ಜಗಾಮ ॥೬೬॥**

ಧಾರಾಕಾರವಾಗಿ ನಿರಂತರ ಏಳು ದಿನಗಳವರೆಗೆ ಮಳೆಯಾಯಿತು. ಆದರೂ ಗೋಕುಲದ ಜನರಿಗೆ ಯಾವ ಶ್ರಮವೂ ಆಗಲಿಲ್ಲ ಏಕೆಂದರೆ ಅವರೆಲ್ಲರೂ ಶ್ರೀಕೃಷ್ಣನ ರಕ್ಷೆಯಲ್ಲಿದ್ದರು. ಇದನ್ನು ನೋಡಿದ ಮೇಲೆ ಇಂದ್ರನು ಎಚ್ಚೆತ್ತನು. ವಿಸ್ಮರಣೆ ದೂರವಾಯಿತು. ಶ್ರೀಕೃಷ್ಣನು ಸಾಮಾನ್ಯನಲ್ಲ ಸಾಕ್ಷಾತ್ ನಾರಾಯಣನ ಅವತಾರವೇ ಎಂದು ಸ್ಮರಿಸಿಕೊಂಡನು. ಕೂಡಲೇ ಯದುಪತಿಯಾದ ಶ್ರೀಕೃಷ್ಣನ ಪಾದಕಮಲಗಳಲ್ಲಿ ಶರಣಾಗತನಾದನು.

ತುಷ್ಟಾವ ಚೈನ ಮುರು ವೇದಶಿರೋಗತಾಭಿಃ
ಗೀರ್ಭಿಃ ಸದಾಗಣಿತ ಪೂರ್ಣಗುಣಾರ್ಣವಂ ತಮ್ ।
ಗೋಭೃದ್ಗುರುಂ ಹರಗುರೋರಪಿ ಗೋಗಣೇನ
ಯುಕ್ತಃ ಸಹಸ್ರ ಗುರಗಾಧ ಗುಮಗ್ರ್ಯ ಮಗ್ರ್ಯಾತ್ ॥೬೭॥

"ಹೇ ದೇವ, ಅನುಗ್ರಹಿಸು, ನೀನು ಅಪೌರುಷೇಯ ವೇದಗಳಿಂದ ಪ್ರತಿಪಾದ್ಯನು. ಉಪನಿಷತ್ತುಗಳಿಂದ ಮಾತ್ರ ನಿನ್ನನ್ನು ತಿಳಿಯಲು ಸಾಧ್ಯ. ನೀನು, ಯಾವಾಗಲೂ ಅನಂತ ಗುಣಗಳಿಂದ ಪೂರ್ಣನು. ಅನಂತ ಮಹಿಮೆಯುಳ್ಳವನು. ಬ್ರಹ್ಮ ರುದ್ರ ಮೊದಲಾದವರಿಗೆ ಗುರುವಾದವನು. ಎಲ್ಲರಲ್ಲಿ ಅಗ್ರಗಣ್ಯನು. ಸರ್ವೋತ್ತಮನು. ಅನೇಕ ಗೋಪಾಲಕರಿಂದ ಕೂಡಿದವನು" ಎಂದು ಸ್ತುತಿಸಿದನು.

ತ್ವತ್ತೋ ಜಗತ್ಸ ಕಲ ಮಾವಿರ ಭೂದ ಗಣ್ಯ-
ಧಾಮ್ನ ಸ್ತ್ವಮೇವ ಪರಿಪಾಸಿ ಸಮಸ್ತಮಂ ತೇ ।
ಅತ್ಸೋ ತ್ವಯ್ಯೆವ ಜಗತೋಽಸ್ಯ ಹಿ ಬಂಧಮೋಕ್ಷಾ
ನ ತ್ವತ್ಸಮೋಽಸ್ತಿ ಕುಹ ಚಿತ್ಪರಿ ಪೂರ್ಣ ಶಕ್ತ್ಯೇ ॥೬೮॥

"ಹೇ ಭಗವಾನ್! ನೀನು ಸಕಲ ಜಗತ್ತಿನಲ್ಲಿ ವ್ಯಾಪಕನಾಗಿರುವಿ. ಶ್ರೇಷ್ಠವಾದ ಧಾಮ (ವೈಕುಂಠ ಮೊದಲಾದ ಲೋಕಗಳು) ನಿನ್ನಿಂದಲೇ ಪಾಲಿಸಲ್ಪಡುತ್ತವೆ. ಸಂಸಾರದ ಬಂಧ ಮೋಕ್ಷಗಳಿಗೆ ನೀನೇ ಕಾರಣನಾಗಿರುವೆ. ನಿನಗೆ ಸಮನಾದವರೇ ಯಾರು ಇಲ್ಲ. ನಿನಗಿಂತ ಪರಿಪೂರ್ಣ ಮತ್ತು ಶಕ್ತಿಯುತರು ಇರಲು ಶಕ್ಯವೇ?"

ಇದು ದೇವೇಂದ್ರನು ಮಾಡಿದ ಸ್ತೋತ್ರ.

ಕ್ಷಂ ತವ್ಯ ಮೇವ ಭವತಾ ಮಮ ಬಾಲ್ಯ ಮೀಶ
ತ್ವತ್ಸಂಶ್ರಯೋಽಸ್ಮಿ ಹಿ ಸದೇ ತ್ಯಭಿವಂದಿತೋಽಜಃ ।
ಕ್ಷಾಂತಂ ಸದೈವ ಭವತಸ್ತವ ಶಿಕ್ಷಣಾಯ
ಪೂಹಾ ಪಹಾರ ವಿಧಿರಿತ್ಯ ವದದ್ರಮೇಶಃ ॥೬೯॥

"ಹೇ ಈಶ, ನನ್ನ ಬಾಲಬುದ್ಧಿಯನ್ನು ಕ್ಷಮಿಸು. ನಾನು ನಿನ್ನನ್ನೇ ಆಶ್ರಯಿಸಿ ಇದ್ದೇನೆ". ಅವನು ಈ ರೀತಿ ಹೇಳುತ್ತ ಜನನರಹಿತನಾದ ಶ್ರೀಹರಿಗೆ ವಂದಿಸಿದನು. ಆಗ ರಮೇಶನು, ನೀನು ಸುದೈವ ನನ್ನ ಭಕ್ತನು. ನಿನ್ನ ಶಿಕ್ಷಣಗಾಗಿಯೇ ನಿನ್ನ ಪೂಜೆಗಳನ್ನು ತಡೆದೆನು. ಇಂದು ನಿನ್ನನ್ನು ಕ್ಷಮಿಸಲಾಗಿದೆ. ಎಂದು ಹೇಳಿದನು.

ಇಲ್ಲಿಗೆ ಇಂದ್ರನ ಅಸುರಾವೇಶ ತೊಲಗಿತು.

**ಗೋವಿಂದಮೇ ನಮಭಿಷಿಚ್ಯ ಸ ಗೋಗಣೇಶೋ**
**ಗೋಭಿರ್ಜಗಾಮ ಗುಣಪೂರ್ಣಮಮುಂ ಪ್ರಣಮ್ಯ ।**
**ಗೋಪ್ಯೈರ್ಗಿರಾಂ ಪತಿರಪಿ ಪ್ರಣತೋಭಿಽಗಮ್ಯ**
**ಗೋವರ್ಧನೋದ್ಧಾರಣ ಸಂಗತ ಸಂ ಶಯೈಸ್ಸಃ ॥೭೦॥**

ಶ್ರೀಕೃಷ್ಣನ ಮಾತುಗಳನ್ನು ಕೇಳಿದ ಇಂದ್ರನು, ಸಂತುಷ್ಟನಾಗಿ ಶ್ರೀಹರಿಗೆ ಚೆನ್ನಾಗಿ ಅಭಿಷೇಕ ಮಾಡಿದನು. ಗೋಗಣಗಳಿಗೆ ಒಡೆಯನಾದ, ಗುಣಪೂರ್ಣನಾದ ಪರಮಾತ್ಮನಿಗೆ ನಮಸ್ಕರಿಸಿದನು. ಗೋಶ್ರೇಷ್ಠವಾದ ಸುರಭಿಗೆ ಒಡೆಯನಾದ ಇಂದ್ರನು ತನ್ನ ಲೋಕಕ್ಕೆ ನಡೆದನು. ಈ ಘಟನೆಯಿಂದ, ಶ್ರೀಕೃಷ್ಣನ ಕುರಿತಾಗಿ ಕೆಲವು ಗೊಲ್ಲರಲ್ಲಿದ್ದ ಸಂಶಯವೂ ದೂರವಾಯಿತು. ಗೋವರ್ಧನ ಗಿರಿಯನ್ನು ಎತ್ತಿದ ಕಾರಣ ಅಂದಿನಿಂದ ಶ್ರೀಕೃಷ್ಣನನ್ನು ಜನರು ಗೋವಿಂದ ಎಂದೇ ಕರೆದರು.

**ಕೃಷ್ಣಂ ತತಃ ಪ್ರಭೃತಿ ಗೋಪ ಗಣಾ ವ್ಯಜಾನನ್**
**ನಾರಾಯಣೋಽಯ ಮಿತಿ ಗರ್ಗವಚಶ್ಚ ನಂದಾನ್ ।**
**ನಾರಾಯಣಸ್ಯ ಸಮ ಇತ್ಯುದಿತಂ ನಿಶಮ್ಯ**
**ಪೂಜಾಂ ಚ ಚಕ್ರುರಧಿಕಾಮರವಿಂದ ನೇತ್ರೇ ॥೭೧॥**

ಗೋವರ್ಧನ ಪರ್ವತವನ್ನು ಎತ್ತಿದ ನಂತರ, ಈ ಅದ್ಭುತ ಕಾರ್ಯವನ್ನು ಕಂಡ ಗೋಪಾಲಕರು ಶ್ರೀಕೃಷ್ಣನು ನಾರಾಯಣನೆಂದೇ ನಿಶ್ಚಯಿಸಿದರು. ಹಿಂದೆ ಗರ್ಗಾಚಾರ್ಯರು, 'ಈತನು ನಾರಾಯಣನೇ' ಎಂದು ಹೇಳಿದ ಮಾತು ನೆನಪಿಗೆ ಬಂದು ನಂದನಿಗೂ ಕೃಷ್ಣನಲ್ಲಿ ವಿಶ್ವಾಸ ದೃಢವಾಯಿತು.

ಅರವಿಂದನೇತ್ರವಾದ ಶ್ರೀಕೃಷ್ಣನಿಗೆ ಯಾರೂ ಸಮರಿಲ್ಲ ಎಂದು ತಿಳಿದು ಅತಿ ಭಕ್ತಿಯಿಂದ ಪೂಜಿಸಹತ್ತಿದರು.

**ಸ್ಕಂದಾದುಪಾತ್ತ ವರತೋ ಮರಣಾದಪೇತಂ**
**ದೃಷ್ಟ್ವಾಚ ರಾಮನಿಹತಂ ಬಲಿನಂ ಪ್ರಲಂಬಮ್ ।**
**ಚಕ್ರುರ್ವಿನಿಶ್ಚಯ ಮಮುಷ್ಯ ಸುರಾಧಿಕತ್ವೇ**
**ಗೋಪಾ ಅಥಾಸ್ಯ ವಿದಧುಃ ಪರಮಾಂ ಚ ಪೂಜಾಮ್ ॥೭೨॥**

ಸ್ಕಂದನ ವರಬಲದಿಂದ ಅವಧ್ಯನಾದ ಪ್ರಲಂಬನನ್ನು ಬಲರಾಮನು ಸಂಹರಿಸಿದ್ದನ್ನು ಕಂಡ ಗೋಪಾಲಕರು, ಈತನೂ ಸಾಮನ್ಯನಲ್ಲ. ಒಬ್ಬ ಶ್ರೇಷ್ಠನಾದ ದೇವತೆಯೇ ಇರಬೇಕೆಂದು ನಿಶ್ಚಯಿಸಿ, ಆತನನ್ನೂ ಯಥಾಯೋಗ್ಯ ಪೂಜಿಸಹತ್ತಿದರು.

**ಕಾತ್ಯಾಯನೀ ವ್ರತಧರಾಃ ಸ್ವಪತಿತ್ವ ಹೇತೋಃ**
**ಕನ್ಯಾ ಉವಾಹ ಭಗವಾನ ಪರಾಶ್ಚ ಗೋಪೀಃ ।**
**ಅನ್ಯ ರ್ಧೃತಾ ಆಯುಗ ಬಾಣಶರಾಭಿನುನ್ನಾಃ**
**ಪ್ರಾಪ್ತಾ ನಿಶಾಸ್ವರಮ ಯಚ್ಛ ಶಿರಾಜ ತಾಸು ॥೭೩॥**

ಕೆಲವು ಗೋಪಿಕಾಸ್ತ್ರೀಯರು, ಶ್ರೀಕೃಷ್ಣನೇ ತಮಗೆ ಪತಿಯಾಗಬೇಕೆಂದು ಕಾತ್ಯಾಯನೀ ವ್ರತವಲ್ಲಿ ತೊಡಗಿದ್ದರು. ಶ್ರೀಕೃಷ್ಣನು ಅವರನ್ನು ಸ್ವೀಕರಿಸಿದನು. ಮನ್ಮಥನ ಬಾಣಗಳಿಂದ ಪೀಡಿತರಾದ ಅನ್ಯರನ್ನು ವಿವಾಹವಾಗಿ, ಬೆಳದಿಂಗಳ ರಾತ್ರಿಯಲ್ಲಿ ವಿಹಾರಕ್ಕೆಂದು ನಡೆದನು.

(ಇಲ್ಲಿ ರಾಸಕ್ರೀಡೆ, ಜಲಕ್ರೀಡೆಗಳನ್ನು ಕೈ ಬಿಡಲಾಗಿದೆ. ಈ ಘಟನೆಗಳೇ ಅನೇಕರ ಆಕ್ಷೇಪಕ್ಕೆ ಆಹಾರಗಳಾಗಿವೆ. ಕೈಬಿಟ್ಟ ಕಾರಣ ತಿಳಿದಿಲ್ಲ. ಸಂಶಯಗಳನ್ನು ನಿವಾರಿಸಿ, ಸ್ಪಷ್ಟೀಕರಿಸಿದ್ದರೆ ಉತ್ತಮವಾಗುತ್ತಿತ್ತು.)

(ಲೇಖಕ)

**ತಾಸ್ವತ್ರ ತೇನ ಜನಿತಾ ದಶಲಕ್ಷ ಪುತ್ರಾ**
**ನಾರಾಯನಾಹ್ವಯಯುತಾ ಬಲಿನಶ್ಚ ಗೋಪಾಃ ।**

**ಸರ್ವೇಽಪಿ ದೈವತಗಣಾ ಭಗವತ್ಸು ತತ್ತ್ವ–**
**ಮಾಪ್ತುಂ ಧರಾತಲಗತಾ ಹರಿಭಕ್ತಿಹೇತೋಃ ॥೭೪॥**

ಶ್ರೀಕೃಷ್ಣನು ಸ್ವೀಕರಿಸಿದ ಕನ್ನಿಕೆಯರಲ್ಲಿ ಹತ್ತು ಲಕ್ಷ ಮಕ್ಕಳಾದರು. ಅವರೆಲ್ಲರನ್ನು ನಾರಾಯಣ ಎಂದೇ ಕರೆದರು.

ಆ ಕನ್ನಿಕೆಯರು ಯಾರು? ಅವರೆಲ್ಲರೂ ದೇವತೆಗಳೇ. ಶ್ರೀಹರಿಯ ಸೇವೆಯ ಮಾಡಬೇಕು. ಆತನಿಂದ ಒಳ್ಳೆಯ ತತ್ವಗಳನ್ನು ತಿಳಿದುಕೊಳ್ಳಬೇಕು ಎಂಬ ಉದ್ದೇಶದಿಂದಲೇ ಭೂಮಿಯಲ್ಲಿ ಹುಟ್ಟಿದ್ದರು. ಗೋಪಿಕೆಯರಲ್ಲಿ ಹುಟ್ಟಿದ ಕಾರಣ ಅವರು ಗೊಲ್ಲರಾಗಿಯೇ ಉಳಿದರು.

ಶ್ರೀಕೃಷ್ಣನು ಕನ್ನಿಕೆಯರನ್ನು ಏಕೆ ಮದುವೆಯಾದನು?

**ತಾಸ್ತತ್ರ ಪೂರ್ವವರದಾನಕೃತೇ ರಮೇಶೋ**
**ರಾಮಾದ್ದ್ವಿಜತ್ವ ಗಮನಾದಪಿ ಪೂರ್ವ ಮೇವ ।**
**ಸರ್ವಾ ನಿಶಾಸ್ವರಮಯತ್ಸಮ ಭೀಷ್ಮ ಸಿದ್ಧಿ –**
**ಚಿಂತಾಮಣಿರ್ಹಿ ಭಗವಾನ ಶುಭೈರಲಿಪ್ತಃ ॥೭೫॥**

ರಮೇಶನು, ರಾಮನಿಗೆ ದ್ವಿಜತ್ವ ಸಂಸ್ಕಾರ ಪೂರ್ತಿಯಾಗುವ ಮೊದಲೇ ನಾನು ನಿಮ್ಮ ಅಭೀಕ್ಷೆಯನ್ನು ಪೂರ್ತಿ ಮಾಡುತ್ತೇನೆ ಎಂದು ಅವರಿಗೆ ಪೂರ್ವದಲ್ಲಿಯೇ ವರವನ್ನು ಕೊಟ್ಟಿದ್ದನು. ಅದರಂತೆ ಅವನು ನಡೆದುಕೊಂಡನು.

ಈ ಕಾರ್ಯ ನಿಷಿದ್ಧವಲ್ಲವೇ? ದೋಷಯುಕ್ತವಲ್ಲವೇ?
ಭಗವಂತನು ಚಿಂತಾಮಣಿಯಿದ್ದಂತೆ. ಭಕ್ತರು ಚಿಂತಿಸಿದುದನ್ನು ಬೇಡಿದುದನ್ನು ಕೊಕಡುವುದು ಅದರ ಧರ್ಮ. ಭಗವಂತನು ಅಲಿಪ್ತ. ಆತನಿಗೆ ಶುಭಾಶುಭ ಕರ್ಮಗಳ ಲೇಪವಿಲ್ಲ. ಯಾವುದೇ ದೋಷವು ಆತನಿಗೆ ಹತ್ತಲಾರದು.

ವಿ.ವಿ. ಮೇಲಿನ ಶ್ಲೋಕದಲ್ಲಿ "ದ್ವಿಜತ್ವದ ಪೂರ್ವದಲ್ಲಿ" ಎಂಬ ಪದಪುಂಜವಿದೆ. ಆಗ ಅವರ ವಯಸ್ಸು ಎಷ್ಟು ಎಂಬುದು ಓದುಗರು ಊಹಿಸಲಿ. ಅಲ್ಲಿ ಕೇವಲ ಭಕ್ತಿ ಮತ್ತು ವಾತ್ಸಲ್ಯಗಳನ್ನು ಮಾತ್ರ ಕಾಣಬಹುದು. ಅನ್ಯ ವಿಷಯಗಳಿಗೆ ಆಸ್ಪದವಿಲ್ಲ.

**ಸಂಪೂರ್ಣ ಚಂದ್ರಕಾರ ರಾಜಿತ ಸದ್ರಜನ್ಯಾಂ**
**ಬೃಂದಾವನೇ ಕುಮುದ ಕುಂದ ಸುಗಂಧ ವಾತೇ ।**
**ಶ್ರುತ್ವಾ ಮುಕುಂದಮುಖನಿಃ ಸೃತಗೀತ ಸಾರಂ**
**ಗೋಪಾಂಗನಾ ಮುಮುಹುರತ್ರ ಸಸಾರ ಯಕ್ಷಃ ॥೭೭॥**

ಪೂರ್ಣಚಂದ್ರನ ಕಿರಣಗಳಿಂದ ತುಂಬಿದ ಅಂದಿನ ರಾತ್ರಿಯಲ್ಲಿ ಕುಮುದ ಕುಂದಪುಷ್ಪಗಳ ವಾಸನೆಯನ್ನು ಮಂದಮಾರುತನು ಹರಡಿದನು. ಮುಕುಂದನು ತನ್ನ ಮಧುರ ಧ್ವನಿಯಲ್ಲಿ ಗೀತೆಯನ್ನು ಹಾಡತೊಡಗಿದನು. ಬೆಳದಿಂಗಳ ಆನಂದ, ಪುಷ್ಪಗಳ ಸುವಾಸನೆ, ಕೃಷ್ಣನ ಮಧುರಗಾನ ಇವುಗಳಿಂದ ಬೃಂದಾವನದ ಸ್ತ್ರೀಯರು ಮದದಿಂದ ಮತ್ತರಾದರು. ಆಗ ಅಲ್ಲಿಗೆ ಒಬ್ಬ ಯಕ್ಷನು ಬಂದನು

ಶ್ರೀಕೃಷ್ಣನು ಸಾಮಾನ್ಯವಾಗಿ ಕೊಳಲನ್ನು ನುಡಿಸುವುದರಲ್ಲಿ ಪ್ರಸಿದ್ಧನಾಗಿದ್ದಾನೆ. ಆದರೆ ಇಲ್ಲಿ ಗಾನದಲ್ಲಿಯೂ ಪ್ರವೀಣನು ಎಂದು ವ್ಯಕ್ತವಾಗುತ್ತದೆ.

ಆ ಯಕ್ಷನಾರು?

**ರುದ್ರ ಪ್ರಸಾದ ಕೃತರಕ್ಷ ಉತಾಸ್ಯ ಸಖ್ಯು –**
**ರ್ಭೃತ್ಯೋ ಬಲೀ ಖರತರೋಽಪಿ ಚ ಶಂಖಚೂಡಃ ।**
**ತಾಃ ಕಾಲಯನ್ ಭಗವತಸ್ತಲ ತಾಡನೇನ**
**ಮೃತ್ಯುಂ ಜಗಾಮ ಮಣಿಮಸ್ಯ ಜಹಾರ ಕೃಷ್ಣಃ ॥೭೭॥**

ಆ ಯಕ್ಷನಿಗೆ ಮಹಾರುದ್ರ ದೇವರ ವರಪ್ರಸಾದವಿದ್ದಿತು. ಜೊತೆಯಲ್ಲಿ ನೆಚ್ಚಿನ ಸೇವಕನಂತಿದ್ದ ಕಾರಣ ಮಹಾರುದ್ರರ ರಕ್ಷೆಯು ದೊರೆತಿತ್ತು. ಈ ಎರಡರಿಂದ ಅವನು ಬಲಶಾಲಿಯಾಗಿದ್ದನು. ಅವನೇ 'ಶಂಖಚೂಡ'. ಕುಬೇರನಿಗೆ ಸಖನೂ ಆಗಿದ್ದನು. ಅವನು ಗೋಪಿಕೆಯರನ್ನು ಅಪಹರಿಸಲು ಬಂದಿದ್ದನು. ಅಂಥವನು ಶ್ರೀಕೃಷ್ಣನ ಹಸ್ತ ಪ್ರಹಾರದಿಂದಲೇ ಮರಣ ಹೊಂದಿದನು. ಅವನ ಹಣೆಯಲ್ಲಿ ರತ್ನವಿದ್ದಿತು. ಅದನ್ನು ಶ್ರೀಕೃಷ್ಣನು ಕಿತ್ತುಕೊಂಡನು.

**ನಾಮ್ನಾಪ್ಯರಿಷ್ಟ ಉರುಗಾಯ ವಿಲೋಮಚೇಷ್ಟೋ**
**ಗೋಷ್ಠಂ ಜಗಾಮ ವೃಷಭಾಕೃತಿರಪ್ಯ ವಧ್ಯಃ ।**
**ಶಂಭೋ ರ್ವರಾದನುಗತಶ್ಚ ಸದೈವ ಕಂಸಂ**
**ಗಾ ಭೀಷ್ಮಯಂತ ಮಮುಮಾಹ್ವಯದಾಸು ಕೃಷ್ಣಃ ॥೭೮॥**

ಅರಿಷ್ಟನೆಂಬ ದೈತ್ಯನು ವೃಷಭನ ಆಕೃತಿಯಲ್ಲಿ ಗೋಕುಲಕ್ಕೆ ಬಂದಿದ್ದನು. ಅವನಿಗೆ ಶಂಭುವಿನ ವರವಿದ್ದಿತು. ಅವನು ಕಂಸನ ಅನುಯಾಯಿಯಾಗಿ ಶ್ರೀಕಷ್ಣನ ನಾಶಕ್ಕಾಗಿಯೇ ಬಂದಿದ್ದನು. ಆ ಗೂಳಿಯು ಬರುವುದನ್ನು ಕಂಡು ಕೃಷ್ಣನು ಅದರ ಸಮೀಪಕ್ಕೆ ಬಂದನು.

**ಸೋऽಪ್ಯಾಸಸಾದ ಹರಿಮುಗ್ರ ವಿಷಾಣ ಕೋಟಿ –**
**ಮಗ್ರೇ ನಿಧಾಯ ಜಗೃಹೇऽಸ್ಯ ವಿಷಾಣ ಮೀಶಃ ।**
**ಭೂಮೌ ನಿಪಾತ್ಯ ಚ ವೃಷಾಸುರ ಮುಗ್ರವೀರ್ಯಂ**
**ಯಜ್ಞೇ ಯಥಾ ಪಸು ಮಮಾರಯದಗ್ರ್ಯ ಶಕ್ತಿಃ ॥೭೯॥**

ಆ ವೃಷಭನು ತನ್ನ ಚೂಪಾದ ಕೋಡುಗಳನ್ನು ಮುಂದೆ ಮಾಡಿ ಶ್ರೀಹರಿಯತ್ತ ಧಾವಿಸಿದನು. ರಮೇಶನು ವೇಗದಿಂದ ಬಂದು ಅದರ ಕೋಡುಗಳನ್ನು ಗಟ್ಟಿಯಾಗಿ ಹಿಡಿದು ಭೂಮಿಗೆ ಅಪ್ಪಳಿಸಿದನು. ಆ ಪ್ರಬಲವಾದ ವೃಷಭನನ್ನು ಶ್ರೀಕೃಷ್ಣನು ತನ್ನ ಅತ್ಯಗ್ರಶಕ್ತಿಯಿಂದ ಯಜ್ಞ ಪಶುವನ್ನಾಗಿ ಮಾಡಿದನು. ಈ ರೀತಿ ಪಶುಬಲಿಯಾಯಿತು.

ಕೇಶಿ ಸಂಹಾರ

**ಕೇಶೀ ತು ಕಂಸ ವಿಹಿತ ಸ್ತುರಗ ಸ್ವರೂಪೋ**
**ಗಿರ್ಯಾತ್ಮಜಾವರ ಮ ವಾಪ್ಯ ಸದಾ ವಿಮೃತ್ಯುಃ ।**
**ಪಾಪಃ ಸ ಕೇಶವ ಮವಾಪ ಮುಖೇऽಸ್ಯ ಬಾಹುಂ**
**ಪ್ರಾವೇಶಯತ್ಸ ಭಗವಾನ್ಸವೃಧೇऽದೇಹೇ ॥೮೦॥**

ಕಂಸನಿಗೆ ಹಿತಕಾರಿಯಾದವನು ಮತ್ತೊಬ್ಬ ದೈತ್ಯ ಅವನೇ 'ಕೇಶಿ' ಅವನು ಕುದುರೆಯ ರೂಪದಿಂದ ಬಂದನು. ಅವನಿಗೆ ಪಾರ್ವತಿಯ ವರವಿದ್ದಿತು. ಅವನೂ ಮೃತ್ಯುರಹಿತನೇ. ಅವನು ಕೇಶವನನ್ನು ತನ್ನ ದಂತಗಳಿಂದ

ಕತ್ತರಿಸಬೇಕೆಂದು ಬಾಯಿ ತೆರೆದನು. ಕೂಡಲೇ ಕೇಶವನು ತನ್ನ ಬಾಹುವನ್ನು ಅದರಲ್ಲಿಡುತ್ತ, ತಾನೇ ಅದರ ಶರೀರದಲ್ಲಿ ಪ್ರವೇಶಿಸಿ, ಅಲ್ಲಿಯೆ ಬೆಳೆದನು.

ಬಾಹುನಾ ಭೋಗಿನಂ ಕೃತ್ವಾ ಮುಖೇತ್ವಸ್ಯ ಜನಾರ್ದನಃ ।
ಪ್ರವೇಶಯಾಮಾಸ ತದಾ ಕೇಶಿನೋ ದುಷ್ಟವಾಜಿನಃ ।
ತಥಾ ಕೃಷ್ಣಸ್ಯ ವವೃಧೇ ಬಾಹುಃ । (ವಿಷ್ಣು ಪುರಾಣ)

ವಿಷ್ಣುಪುರಾಣದ ಈ ಶ್ಲೋಕವು ಮೇಲಿನ ಘಟನೆಯನ್ನು ಸಮರ್ಥಿಸುತ್ತದೆ.

ತತ್ಖಾದನಾಯ ಕಮತಿಃ ಸ ಕೃತ ಪ್ರಯಾಸಃ
ಶೀರ್ಣಾನ್ಯ ದಂತ ದಶನಚ್ಛದರುದ್ಧ ವಾಯುಃ ।
ದೀರ್ಣಃ ಪಪಾತ ಚ ಮೃತ್ಯೋ ಹರಿರಪ್ಯ ಶೇಷೈಃ
ಬಹ್ಮೇಶ ಶಕ್ರದಿನಕೃತ್ಪ್ರಮು ಖ್ಯೆಃ ಸ್ತುತ್ಯೋಽಭೂತ್ ॥೮೧॥

ಕುಮತಿಯಾದ ಆ ರಕ್ಕಸನು, ಶ್ರೀಕೃಷ್ಣನ ಕೈಯನ್ನು ತಿನ್ನಬೇಕೆಂದು ವ್ಯರ್ಥ ಪ್ರಯತ್ನ ಮಾಡಿದನು. ಅದರಿಂದ ಅವನ ಮುಖವು ಸೀಳಿತು. ಹಲ್ಲುಗಳು ಉದುರಿದವು. ಮುಖವೆಲ್ಲ ರಕ್ತಮಯವಾಯಿತು. ಶ್ರೀಹರಿಯ ಬಾಹು ಗಂಟಲನ್ನು ಆವರಿಸಿದ ಕಾರಣ ಅವನಿಗೆ ಉಸಿರು ಕಟ್ಟಿತು. ನಿರ್ವಿಣ್ಣನಾಗಿ ಧರೆಗೆ ಉರುಳಿದನು. ಮೃತ್ಯುವಿಗೆ ತುತ್ತಾದನು. ಬ್ರಹ್ಮ, ಈಶ, ಶೇಷ, ಶಕ್ರ ಸೂರ್ಯನೇ ಮೊದಲಾದ ಪ್ರಮುಖ ದೇವತೆಗಳು ಶ್ರೀಹರಿಯನ್ನು ಸ್ತುತಿಸಿದರು.

ದ್ವಿಪಾದ ಪ್ರಚ್ಛ ಪೃಷ್ಠಾರ್ಧ ಶ್ರವಣೈಕಾಕ್ಷಿನಾಶಿಕೇ ।
ಕೇಶೀ ನಷ್ಟೆ ದ್ವಿಧಾ ಭೂತೇ ದ್ವೇತ್ವರ್ಧೇ ರೇಜತುಃ ಕ್ಷಿತಾ ।

ವಿಷ್ಣು ಪುರಾಣದ ಈ ಶ್ಲೋಕದಲ್ಲಿ ಆ ತುರಗನ ಅವಯವಗಳು ಹೇಗೆ ನಷ್ಟವಾದವು? ಎಂಬುದನ್ನು ವಿವರಿಸಲಾಗಿದೆ.

'ಹಯವದನನಾದ ಶ್ರೀಹರಿ, ಈ ದುಷ್ಟ ಹಯವನ್ನು ಯಮನಿಗೊಪ್ಪಿಸಿದನು' ಎಂದರೆ ಸತ್ಯಕ್ಕೆ ಅಪಚಾರವಾಗಲಿಕ್ಕಿಲ್ಲ. ಮತ್ತೊಬ್ಬ

ವ್ಯೋಮಶ್ಚ ನಾಮ ಮಯಸೂನು ರಜ ಪ್ರಸಾದಾತ್
ಅಬ್ದಾಮಿತಾಯುರಖಿಲಾನ್ ವಿದಧೇ ಬಿಲೇ ಸಃ ।
ತಂ ಶ್ರೀಪತಿಃ ಸುರಪತಿಃ ಪಶುವದ್ವಿಶಸ್ಯ
ನಿಸ್ಸಾರಿತಾನ್ ಬಿಲಮುಖಾದಖಿಲಾಂಶ್ಚಕಾರ ॥೮೨॥

'ವ್ಯೋಮಾಸು' ಒಬ್ಬ ದೈತ್ಯ. ಅವನು ಮಯನ ಮಗನು. ಅವನು ಬ್ರಹ್ಮನ ವರದಿಂದ ದೀರ್ಘಾಯು ಆಗಿದ್ದನು. ಜೊತೆಯಲ್ಲಿ ಬಲಾಢ್ಯನು ಕೂಡ. ಅವನು ಎಲ್ಲ ಗೋಪಾಲಕರನ್ನು ತಂದು ಒಂದು ಬಿಲದಲ್ಲಿ ಬಂಧನದಲ್ಲಿಟ್ಟಿದ್ದನು. ಸುರಪತಿಯಾದ ಶ್ರೀಕೃಷ್ಣನು ಅವನನ್ನು ಕೊಂದು ಎಲ್ಲ ಗೊಲ್ಲರನ್ನು ಬಿಲಬಂಧನದಿಂದ ಹೊರ ತಂದನು.

ಕುರ್ವತ್ಯ ನನ್ಯ ವಿಷಯಾಣಿ ದುರಂತಶಕ್ತೌ
ಕರ್ಮಾಣಿ ಗೋಕುಲಗತೇಽಖಿಲ ಲೋಕನಾಥೇ ।
ಕಂಸಾಯ ಸರ್ವಮವ ದುತ್ಸರ ಕಾರ್ಯಹೇತೋಃ
ಬ್ರಹ್ಮಾಂ ಕಜೋ ಮುನಿರಕಾರಿ ಯದೀಶ ಪಿತ್ರಾ ॥೮೩॥

ದುರಂತ ಶಕ್ತನಾದ ಇನ್ನು ಅನೇಕ ಕಾರ್ಯಗಳು ಆಗಬೇಕಾಗಿವೆ.

ಅದಕ್ಕಾಗಿಯೇ ಲೋಕನಾಥನಾದ ಶ್ರೀಕೃಷ್ಣನು ಗೋಕುಲಕ್ಕೆ ಬಂದಿದ್ದಾನೆ. ಅವು ಪೂರ್ತಿಯಾಗಲೆಂದೇ ಬ್ರಹ್ಮನ ತೊಡೆಯಿಂದ ಹುಟ್ಟಿದ ನಾರದರು, ಇದುವರೆಗೆ ಆದ ಅನೇಕ ಘಟನೆಗಳ ವಿವರಗಳನ್ನು ಕಂಸನಿಗೆ ವಿವರಿಸಿದರು. ಅದರಿಂದ ಕಂಸನಿಂದ ಇನ್ನೂ ಅನೇಕ ಅಧರ್ಮದ ಕಾರ್ಯಗಳಾಗಲಿ, ದೇವತಾಕಾರ್ಯ ಸಾಧಿಸಲಿ ಎಂಬುದೇ ಮುಖ್ಯ ಉದ್ದೇಶವಾಗಿತ್ತು.

ಶ್ರುತ್ವಾತಿ ಕೋಪರಭಸೋಚ್ಚಲಿ ತಸ್ಸ ಕಂಸೋ
ಬದ್ಧಾ ಸಭಾರ್ಯಮಥ ಶೂರಜ ಮುಗ್ರ ಕರ್ಮಾ ।
ಅಕ್ರೂರಮಾಶ್ವದಿಶನಾನಯನಾಯವಿಷ್ಣೋ
ರಾಮಾನ್ವಿತಸ್ಯ ಸಹ ಗೋಪಗಣೈ ರಥೇನ ॥೮೪॥

ನಾರದರಿಂದ ವಿವರಗಳನ್ನು ಕೇಳಿದ ಕಂಸನು ಕೋಪಾವಿಷ್ಟನಾದನು. ಸಿಟ್ಟಿನ ಭರದಲ್ಲಿ ಅವನ ದೇಹನಡುಗ ಹತ್ತಿತ್ತು. ಕೂಡಲೇ ವಸುದೇವ ದೇವಕಿಯರನ್ನು ಮತ್ತೆ ಬಂಧನದಲ್ಲಿಟ್ಟನು. ಶ್ರೀಕೃಷ್ಣ, ಬಲರಾಮರನ್ನು ಗೋಪಾಲಕರ ಸಹಿತವಾಗಿ ರಥದಲ್ಲಿ ಕರೆತರಲು ಅಕ್ರೂರನಿಗೆ ಆಜ್ಞೆಯಿತ್ತು ಕಳಿಸಿದನು.

ಅಕ್ರೂರನಾರು?

**ಸಂಸೇವನಾಯ ಸ ಹರೇರಭವತ್ಪುರೈವ**
**ನಾಮ್ನಾಕಿಶೋರ ಇತಿ ಯಃ ಸುರಗಾಯಕೋಽಭೂತ್ ।**
**ಸ್ವಾಯಂಭುವಸ್ಯ ಚ ಮನೋಃ ಪರಮಾಂಶಯುಕ್ತ**
**ಆವೇಶಯುಕ್ತ ಮಲಜಸ್ಯ ಬಭೂವ ವಿದ್ವಾನ್ ॥೮೫॥**

ಕಿಶೋರನು ಪೂರ್ವದಲ್ಲಿ ಸುರಗಾಯಕನು. ಇಂದು ಅಕ್ರೂರನಾಗಿದ್ದಾನೆ. ಶ್ರೀಹರಿಯ ಸೇವೆಗಾಗಿಯೇ ಅವನು ಭೂಲೋಕದಲ್ಲಿ ಹುಟ್ಟಿದ್ದಾನೆ. (ಮನೋಭಿಮಾನಿಯಾದ) ಸ್ವಾಯಂಭುವಿನ ಶ್ರೇಷ್ಠ ಅಂಶವುಳ್ಳವನಾಗಿದ್ದಾನೆ. ಬ್ರಹ್ಮನ ಆವೇಶವೂ ಇದೆ. ಒಳ್ಳೆಯ ಜ್ಞಾನಿ ಮತ್ತು ವಿದ್ವಾಂಸನೂ ಅಹುದು.

**ಸೋಽಕ್ರೂರ ಇತ್ಯಭವದುತ್ತಮ ಪೂಜ್ಯ ಕರ್ಮಾ**
**ವೃಷ್ಣಿ ಪ್ವಧಾಸ ಸಹಿ ಭೋಜ ಪತೇಶ್ಚ ಮಂತ್ರೀ ।**
**ಆದಿಷ್ಟ ಏವ ಜಗದೀಶ್ವರ ದೃಷ್ಟಿ ಹೇತೋ –**
**ರಾನಂದ ಪೂರ್ಣ ಸುಮಾನ ಅಭವತ್ ಕೃತಾರ್ಥ ॥೮೬॥**

ಆ ಅಕ್ರೂರನು ಒಳ್ಳೆಯಕರ್ಮಗಳನ್ನು ಆಚರಿಸುತ್ತ ಸಜ್ಜನರಿಗೆ ಪೂಜ್ಯನಾಗಿದ್ದನು. ಭಗವಂತನ ಪ್ರೀತಿಗೆ ಪಾತ್ರನಾಗಿದ್ದನು. ಭೋಜ ಪತಿಯಾದ ಕಂಸನ ಮಂತ್ರಿಯೂ ಅಹುದು. ಇಂತಹ ಅಕ್ರೂರನು ಕಂಸನ ಆಜ್ಞೆಯನ್ನು ಕೇಳಿ, ಜಗದೀಶನ ದರ್ಶನವಾದರೂ ಆಗುವುದಲ್ಲ! ನನ್ನ ಜನ್ಮ ಸಾರ್ಥಕವಾಯಿತು. ನಾನು ಕೃತಾರ್ಥನೇ ಸರಿ ಎಂದು ಮನದಲ್ಲಿ ಆನಂದಿಸಿದನು.

**ಆರುಹ್ಯ ತದ್ರಥ ವರಂ ಭಗವತ್ಪದಾಬ್ಜ**
**ಮಚ್ಛೋದ್ಭವ ಪ್ರಣತಮುಂ ತರಮುಂತರೇಣ ।**
**ಸಂಚಿಂತಯನ್ ಪಥಿ ಜಗಾಮ ಸ ಗೋಷ್ಠಮಾರಾತ್**
**ದೃಷ್ಟ್ವಾ ಪದಾಂಕಿತಭುವಂ ಮುಮುದೇ ಪರಸ್ಯ ॥೮೭॥**

ಅಕ್ರೂರನು ಶ್ರೇಷ್ಠವಾದ ರಥದಲ್ಲಿ ಆರೂಢನಾದನು. ದಾರಿಯುದ್ದಕ್ಕೂ ಪೆಜ್ಜೆ ಪೆಜ್ಜೆಗೂ ಭಗವಂತನ ಪಾದಾರವಿಂದಗಳಿಗೆ ವಂದಿಸುತ್ತ ಚಿಂತಿಸುತ್ತ ನಡೆದನು. ಗೋಕುಲವನ್ನು ಸಮೀಪಿಸಿದಾಗ ಶ್ರೀಕೃಷ್ಣನ ಪಾದಾಂಕಿತಗಳನ್ನು ನೆಲದ ಮೇಲೆ ಕಂಡು ಪರತರ ಆನಂದವನ್ನು ಪಡೆದನು.

ಶ್ರೀಕೃಷ್ಣನ ಚರಣರಜೆಯ ಮಹತ್ವ

**ಸೋಽಚೇಷ್ಟತಾತ್ರ ಜಗದೀಶಿತುರಂಗ ಸಂಗಾತ್**
**ಲಬ್ಧೋಚ್ಚಯೇನ ನಿಖಿಲಾಘ ವಿದಾರಣೇಷು ।**
**ಪಾಂಸುಷ್ವಜೇಶ ಪುರುಹೂತ ಮುಖೋಚ್ಚ ವಿದ್ಯುದ್**
**ಭ್ರಾಜತ್ಕಿರೀಟಮಣಿ ಲೋಚನ ಗೋಚರರೇಷು ॥೮೮॥**

ಕೇವಲ ಜಡದಂತೆ ಕಾಣುವ ಆ ಧೂಳು, ಗೋವುಗಳ ಸಹಿತ ಬಂದ ಶ್ರೀಕೃಷ್ಣನ ಪಾದಸ್ಪರ್ಶದಿಂದ ಶ್ರೇಷ್ಠತೆಯನ್ನು ಪಡೆದಿತ್ತು. ಅನೇಕ ಪಾಪಗಳನ್ನು ನಾಶಮಾಡುವ ಶಕ್ತಿ ಅದಕ್ಕೆ ಉಂಟಾಗಿತ್ತು. ಅಂತಹ ಪವಿತ್ರವಾದ ಧೂಳನ್ನು ಬ್ರಹ್ಮ, ರುದ್ರ, ಇಂದ್ರ ಮೊದಲಾದ ಪ್ರಮುಖ ದೇವತೆಗಳು ತಮ್ಮ ಮಣಿಖಚಿತವಾದ ಕಿರೀಟಗಳಲ್ಲಿ ಧರಿಸುತ್ತಿದ್ದರು. ಕಣ್ಣುಗಳಿಗೆ ಹಚ್ಚಿಕೊಳ್ಳುತ್ತಿದ್ದರು.

**ಸೋಽಪಶ್ಯತಾಥ ಜಗದೇಕಗುರುಂ ಸಮೇತಂ**
**ಅಗ್ರ್ಯೋದ್ಭವೇನ ಭುವಿಗಾ ಅಪಿದೋಹಯುಮತಮ್ ।**
**ಆನಂದ ಸಾಂದ್ರ ತನುಮಕ್ಷಯ ಮೇನ ಮೀಕ್ಷ್ಯ**
**ಹೃಷ್ಟಃ ಪಪಾತ ಪದಯೋಃ ಪುರಷೋತ್ತಮಸ್ಯ ॥೮೯॥**

ಜಗದೇಕ ಗುರುವು, ಬಲರಾಮನ ಸಹಿತವಾಗಿ ಭೂಲೋಕದಲ್ಲಿ ಶ್ರೀಕೃಷ್ಣನಾಗಿ ಅವತರಿಸಿ, ಆನಂದದಿಂದ ಮೈಯುಬ್ಬಿ ಆಕಳ ಹಾಲು

ಕರೆಯುತ್ತಿರುವುದನ್ನು ಅಕ್ರೂರನು ನೋಡಿದನು. ಹೃಷ್ಟನಾದ ಅಕ್ರೂರನು ಪುರುಷೋತ್ತಮನ ಪಾದಗಳ ಮೇಲೆ ಬಿದ್ದನು.

ಶ್ರೀಕೃಷ್ಣನ ಪ್ರತಿಕ್ರಿಯೆ

**ಉತ್ಥಾಪ್ಯ ತಂ ಯದುಪತಿಃ ಸಬಲೋ ಗೃಹಂ ಸ್ವಂ**
**ನೀತ್ವೋಪಚಾರ ಮಖಿಲಂ ಪ್ರವಿಧಾಯ ತಸ್ಮಿನ್ ।**
**ನಿತ್ಯೋದಿ ತಾಕ್ಷಯ ಚಿದಪ್ಯಖಿಲಂ ಸ ತಸ್ಮಾತ್**
**ಶುಶ್ರಾವ ಲೋಕಚಂತಾನು ವಿಡಂಬನೇನ ॥೯೦॥**

ಪಾದದಲ್ಲಿ ಬಿದ್ದ ಅಕ್ರೂರನನ್ನು ಶ್ರೀಕೃಷ್ಣನು ಎಬ್ಬಿಸಿದನು. ಬಲರಾಮನ ಸಹಿತವಾಗಿ ಅಕ್ರೂರನನ್ನು ಮನೆಯಲ್ಲಿ ಕರೆದೊಯ್ದನು. ಅತಿಥಿಗೆ ಸಲ್ಲಬೇಕಾದ ಎಲ್ಲ ಉಪಚಾರಗಳಿಂದ ಸತ್ಕರಿಸಿದನು. ಪರಮಾತ್ಮನು ನಿತ್ಯ ಉದಿತನು, ಅಕ್ಷಯನು, ಚಿದಾನಂದನು, ಸಕಲವನ್ನು ಬಲ್ಲವನು ಆದರೂ ಅಕ್ರೂರನ ಜೊತೆಯಲ್ಲಿ ಲೋಕಾರೂಢಿಯಲ್ಲಿ ಮಾತನಾಡುತ್ತ ಯೋಗಕ್ಷೇಮವನ್ನು ವಿಚಾರಿಸಿದನು. ಕುಶಲ ಪ್ರಶ್ನೆಗಳನ್ನು ಕೇಳಿದನು. ಕೊನೆಯಲ್ಲಿ ಬಂದ ಕಾರಣವನ್ನೂ ಕೇಳಿಯೇ ಬಿಟ್ಟನು.

ಇದೊಂದು ವಿಡಂಬನೆಯೇ ಸೈ.

ಇಲ್ಲಿ ಶ್ರೀಕೃಷ್ಣನು ಅತಿಥಿ ಸತ್ಕಾರದ ಗುಟ್ಟನ್ನು ಜಗತ್ತಿಗೆ ತೋರಿಸಿದ್ದಾನೆ.

**ಶ್ರುತ್ವಾ ಸ ಕಂಸಹೃದಿ ಸಂಸ್ಥಿತ ಮಬ್ಜನಾಭಃ**
**ಪ್ರಾತಸ್ತು ಗೋಪ ಸಹಿತೋ ರಥ ಮಾರುರೋಹ ।**
**ರಾಮಃ ಶ್ವಫಲ್ಕತನಯೋಽಭಿಯುತೋ ಜಗಾಮ**
**ಯಾನೇನ ತೇನ ಯಮುನಾ ತಟಮ ವ್ಯಯಾತ್ಮಾ ॥೯೧॥**

ಕಮಲನಾಭನಾದ ಶ್ರೀಕೃಷ್ಣನು ಕಂಸನ ಮನದ ಇಂಗಿತವನ್ನು ಅರಿತನು. ಬೆಳಗಾಗುತ್ತಲೇ ಎಲ್ಲ ಗೋಪಾಲಕರ ಕೂಡಿಕೊಂಡು ರಥವನ್ನು ಏರಿದನು. ಬಲರಾಮ, ಶ್ವಫಲ್ಕನ ಸುತರು ಕೂಡ ಜೊತೆಯಲ್ಲಿದ್ದರು. ಎಲ್ಲರೂ ಹೊರಟರು. ಅವ್ಯಯಾತ್ಮನಾದ ಶ್ರೀಹರಿಯ ರಥವು ಯಮುನಾ ತಟದ ಹತ್ತಿರ ಬಂದು ನಿಂತಿತು.

ಸಂಸ್ಥಾಪ್ಯ ತೌ ರಥವರೇ ಜಗತಾಭಿವಂದ್ಯೌ
ಶ್ವಾಫಲ್ಕಿ ರಾಷ್ಟವತ್ ತಾರ ಯಮಸ್ವಸಾರಮ್ ।
ಸ್ನಾತ್ವಾ ಸ ತತ್ರ ವಿಧಿನೈವ ಕೃತಾಘಮರ್ಷಃ
ಶೇಷಾಸನಂ ಪರಮಪೂರುಷ ಮತ್ರ ಚೈಕ್ಷತ್ ॥೯೨॥

ಜಗತ್ತಿಗೆ ವಂದ್ಯನಾದ ಶ್ರೀಕೃಷ್ಣನನ್ನು, ಬಲರಾಮನನ್ನು ರಥದಲ್ಲಿಯೇ ಕುಳ್ಳಿರಿಸಿ ಅಕ್ರೂರನು ಯಮನಾ ನದಿಯ ಜಲದಲ್ಲಿ ಇಳಿದನು. ವಿಧಿಪೂರ್ವಕವಾಗಿ ಅಘಮರ್ಷಣ ಸ್ನಾನವನ್ನು ಮಾಡಿದನು.

ಆ ನದಿಯಲ್ಲಿ ಶೇಷಶಾಯಿಯೂ, ಪುರುಷೋತ್ತಮನೂ ಆದ ಶ್ರೀಕೃಷ್ಣನನ್ನು ಅಕ್ರೂರನು ಕಂಡನು.

ನಿತ್ಯಂ ಹಿ ಶೇಷ ಮಭಿಪಶ್ಯತಿ ಸಿದ್ಧಮಂತ್ರೋ
ದಾನೇಶ್ವರಃ ಸತು ತದಾ ದದೃಶೇ ಹರಿಂ ಚ ।
ಅಗ್ರೇ ಹಿ ಬಾಲತನು ಮತ್ರ ಸಮೀಪ್ಯ ಕೃಷ್ಣಃ
ಕಿಂ ನಾಸ್ತಿ ಯಾನ ಇತಿ ಯಾನ ಮುಖೋ ಬಭೂವ ॥೯೩॥

ಅಘಮರ್ಷಣ ಮಂತ್ರದ ಸಿದ್ಧಿಯನ್ನು ಪಡೆದು, ದಾನೇಶ್ವರನಾದ ಅಕ್ರೂರನು ನಿತ್ಯವೂ ಶೇಷನನ್ನು ಮಾತ್ರ ಕಾಣುತ್ತಿದ್ದನು. ಆದರೆ ಇಂದು ಅದರ ಮೇಲ್ಭಾಗದಲ್ಲಿ ಶ್ರೀಹರಿಯನ್ನು ಬಾಲರೂಪದಲ್ಲಿ ಕಂಡನು. ರಥದಲ್ಲಿ ಇಲ್ಲವೇ? ಎಂಬ ಶಂಕೆಯಿಂದ ರಥದ ಕಡೆಗೆ ನೋಡಿದನು.

ತತ್ರಾಪಿ ಕೃಷ್ಣಮಭಿವೀಕ್ಷ್ಯ ಪುನರ್ನಿಮಜ್ಯ
ಶೋಕೋರು ಭೋಗಶಯನಂ ಪರಮಂ ದದರ್ಶ ।
ಬ್ರಹ್ಮೇಶ ಶಕ್ರಮುಖದೇವ ಮುನೀಂದ್ರ ಬೃಂದ –
ಸಂವಂದಿ ತಾಂಘ್ರಿಯುಗಮಿಂದಿರಯಾ ಸಮೇತಮ್ ॥೯೪॥

ಅಲ್ಲಿ ಶ್ರೀಕೃಷ್ಣನನ್ನು ಕಂಡ ನಂತರವೂ ಅಕ್ರೂರನು ಸ್ನಾನಕ್ಕಾಗಿ ಪುನಃ ನೀರಿನಲ್ಲಿ ಮುಳುಗಿದನು. ಆಗ ಅಲ್ಲಿ ಪರಮ ಪುರುಷನಾದ ನಾರಾಯಣನನ್ನು ಶೇಷನ ಮೇಲೆ ಮಲಗಿರುವುದನ್ನು ಕಂಡನು. ಬ್ರಹ್ಮ, ರುದ್ರ, ಇಂದ್ರ, ಮೊದಲಾದ ದೇವತೆಗಳನ್ನು, ಅನೇಕ ಮುನಿವೃಂದವನ್ನು,

ಅವರಿಂದ ವಂದಿತವಾದ ಪಾದಗಳನ್ನು ಲಕ್ಷ್ಮೀದೇವಿಯರು ಸೇವೆ ಮಾಡುತ್ತಿರುವುದನ್ನು ಕಂಡನು.

**ಸ್ತುತ್ವಾ ವರಸ್ತುತಿಭಿರವ್ಯಯ ಮಬ್ಜನಾಭಂ**
**ಸೋಽತರ್ಹಿತೇ ಭಗವತಿ ಸ್ವತಮಾರು ರೋಹ ।**
**ಯಾನಂ ಚ ತೇನ ಸಹಿತೋ ಭಗವಾಞ್ಜಗಾಮ**
**ಸಾಯಂ ಪುರೀಂ ಸಹಬಲೋ ಮಧುರಾಮನಂತಃ ॥೯೫॥**

ಉತ್ತಮ ಸ್ತೋತ್ರಗಳಿಂದ ಕಮಲನಾಭನನ್ನು ಸ್ತುತಿಸಿದನು. ಅಲ್ಲಿ ಆತನು (ಅಂತರ್ಧಾನನಾಗಲು) ಅದೃಶ್ಯನಾಗಲು ಮೇಲೆ ಬಂದು ರಥವನ್ನು ಏರಿದನು. ಬಲರಾಮ ಶ್ರೀಕೃಷ್ಣರ ಸಹಿತನಾಗಿ ಸಾಯಂಕಾಲದ ಹೊತ್ತಿಗೆ ಮಥುರಾ ಪಟ್ಟಣಕ್ಕೆ ಬಂದನು.

ಇಲ್ಲಿ ಅಕ್ರೂರನ ಯೋಗ್ಯತೆ, ಜ್ಞಾನ, ಭಕ್ತಿಗಳನ್ನು ಓದುಗರು ಅರಿಯಬಹುದಾಗಿದೆ.

**ಅಗ್ರೇಽಥ ದಾನಪರಿ–ಮಕ್ಷಯ ಪೌರುಷೋಽಸಾ**
**ವೀರೋ ವಿಸೃಜ್ಯ ಸಬಲಃ ಸಹಿತೋ ವಯಸ್ಯೈಃ ।**
**ದ್ರಷ್ಟುಂ ಪುರಿಮಭಿಜಗಾಮ ನರೇಂದ್ರ ಮಾರ್ಗೇ**
**ಪೌರ್ಯೈಃ ಕುತೂಹಲಯುತ್ಯೈರಭಿ ಪೂಜ್ಯ ಮಾನಃ ॥೯೬॥**

ಮಥುರಾ ಪಟ್ಟಣಕ್ಕೆ ಬಂದ ಕೂಡಲೆ, ಪುರುಷೋತ್ತಮನು, ಮೊದಲು ಅಕ್ರೂರನನ್ನು ಕಳಿಸಿಕೊಟ್ಟನು. ನಂತರ ತಾನು ಅಣ್ಣನಾದ ಬಲರಾಮ ಮತ್ತು ಇತರ ಗೆಳೆಯೊಂದಿಗೆ ಪಟ್ಟಣವನ್ನು ನೋಡಬೇಕೆಂದು ರಾಜಮಾರ್ಗದಲ್ಲಿ ನಡೆದನು. ಮಾರ್ಗದಲ್ಲಿ ಪೌರರು ಕುತೂಹಲರಾಗಿ ಅವರನ್ನು ನೋಡಿದರು. ಆದರದಿಂದ ಪೂಜಿಸಿದದರು.

**ಆಸಾಧ್ಯ ಕುಂಜರಗತಂ ರಜಕಂ ಯಯಾಚೇ**
**ವಸ್ತ್ರಾಣಿ ಕಂಸದಯಿತಂ ಗಿರಿಜಾವರೇಣ ।**
**ಮೃತ್ಯೋಽಕ್ಷಿತಂ ಸಪದಿ ತೇನ ದುರುಕ್ತಿ ವಿದ್ಧಃ**
**ಪಾಪಂ ಕರಾಗ್ರಮೃದಿತಂ ವ್ಯತಯದ್ಯ ಮಾಯ ॥೯೭॥**

ದಾರಿಯಲ್ಲಿ ಆನೆಯ ಮೇಲೆ ಒಬ್ಬ ರಜಕನು ಹೋಗುತ್ತಿದ್ದನು. ಅವನು ಕಂಸನಿಗೆ ಪ್ರಿಯನಾದವನು. ಗಿರಿಜೆಯ ವರದಿಂದ ಅವಧ್ಯನೂ ಕೂಡ. ಕಂಸನ ವಸ್ತ್ರಗಳನ್ನು ಆನೆಯ ಮೇಲೆ ಇಟ್ಟಿದ್ದನು. ಕೃಷ್ಣನು ಆ ರಜಕನಿಗೆ ಆ ವಸ್ತುಗಳನ್ನು ಕೇಳಿದನು. ಆ ರಜಕನು ಕೆಟ್ಟ ಮಾತುಗಳನ್ನಾಡಿದನು. ಕೂಡಲೇ ಕೃಷ್ಣನು ಆ ಪಾಪಿಷ್ಠನನ್ನು ಕೈಯಿಂದಲೇ ಹೊಡೆದು ಯಮಲೋಕಕ್ಕೆ ಕಳಿಸಿದನು.

**ಹತ್ವಾ ತಮಕ್ಷ್ಣ ತಬಲೋ ಭಗವಾನ್ ಪ್ರಗೃಹ್ಯ**
**ವಸ್ತ್ರಾಣಿ ಚಾತ್ಮಸಮಿತಾನಿ ಬಲಸ್ಯ ಚಾದಾತ್ ।**
**ದತ್ವಾ ಪರಾಣಿ ಸಖಿಗೋಪಜನಸ್ಯ ಶಿಷ್ಟಾ –**
**ನ್ಯಾಸ್ತೀರ್ಯ ತತ್ರ ಚ ಪದಂ ಪ್ರಣಿಧಾಯ ಚಾಗಾತ್ ॥೯೮॥**

ಶ್ರೀಕೃಷ್ಣನು ತನ್ನ ಬಲದಿಂದ ಆ ರಜಕನನ್ನು ಕೊಂದು, ಅದರಲ್ಲಿದ್ದ ವಸ್ತ್ರಗಳನ್ನು ಕಸಿದುಕೊಂಡನು. ಅವುಗಳಲ್ಲಿ ಕೆಲವನ್ನು ತಾನು ತೆಗೆದುಕೊಂಡು, ಬಲರಾಮನಿಗೆ ಕೆಲವನ್ನು ಕೊಟ್ಟನು. ಗೋಪಾಲಕರಿಗೂ ಕೆಲವನ್ನಿತ್ತು ಉಳಿದವುಗಳನ್ನು ರಸ್ತೆಯಲ್ಲಿ ಒಗೆದು ಕಾಲುಗಳಿಂದ ಚೆನ್ನಾಗಿ ತುಳಿದನು.

**ಗ್ರಾಹ್ಯಾ ಪಟೇಯುರಹಿತ್ಯೆ ಕಚಿದಾತ್ಮ ಸಾಂದ್ರಾ –**
**ಸ್ವಾನಂದ ಪೂರ್ಣ ವ ಪುರುಷ್ಯಯಶೋಽಪಿ ಹೀನಃ ।**
**ಲೋಕಾನ್ವಿಡಂಬ್ಯ ನರವತ್ಸಮಲಕ್ತ ಕಾದ್ಯೈ**
**ರ್ವಸ್ತ್ರಾ ವಿಭೂಷಿತ ಇವಾ ಭವದ ಪ್ರಮೇಯಃ ॥೯೯॥**

ಸ್ವಾನಂದ ಪೂರ್ಣ ಶರೀರವಾದವನಿಗೆ, ಕ್ಷುಲ್ಲಕ ಈ ವಸ್ತ್ರಗಳನ್ನು ಕಸಿದುಕೊಳ್ಳುವ ಅವಶ್ಯಕತೆಯೇ ಇರಲಿಲ್ಲ. ಲೋಕದಲ್ಲಿ ವಿಡಂಬನೆಯನ್ನು ತೋರಿಸುತ್ತ, ನರನಂತೆ ವರ್ತಿಸಿದ್ದಾನೆ. ಅಪ್ರಮೇಯನಾದ ಶ್ರೀಕೃಷ್ಣನು ಮುಂದೆ ಸಾಚಿಕನನ್ನು ಕಂಡು ಅವನಿಂದ ವಸ್ತ್ರಗಳನ್ನು ಪಾಕಿಸಿಕೊಂಡು ಭೂಷಿತನಾಗಿ ಮುಂದೆ ನಡೆದನು.

ಮಾಲಾಮ ವಾಪ್ಯ ಚ ಸುದಾಮತ ಆತ್ಮ ತಂತ್ರ
ಸ್ತಾವಕ್ಷಯೋಽನುಜಗೃಹೆ ನಿಜಪಾರ್ಷದೌಹಿ
ಪೂರ್ವಂ ವಿಕುಂಠ ಸದಾನಾದ್ಧಂಸೇವನಾಯ
ಪ್ರಾಪ್ತೌ ಭುವಂ ಮೃಜನ ಪುಷ್ಪಕರೌ ಪೂರಾಪಿ ॥೧೦೦॥

ಸರ್ವತಂತ್ರ ಸ್ವತಂತ್ರವನಾದ ಶ್ರೀಕೃಷ್ಣನು ಯಾವಾಗಲೂ ವನಮಾಲೆಯನ್ನು ವಕ್ಷಸ್ಥಲದಲ್ಲಿ, ಧರಿಸಿರುತ್ತಾನೆ. ಆದರೂ ಸುದಾಮನೆಂಬ ಹೂಗಾರನಿಂದ ಮಾಲೆಯನ್ನು ಸ್ವೀಕರಿಸಿ ಅವನಿಗೆ ಅನುಗ್ರಹಿಸಿದನು. ಆ ನಾಪಿಕನು ಮತ್ತು ಈ ಹೂಗಾರನು ವೈಕುಂಠದಲ್ಲಿ ಶ್ರೀಹರಿಯ ಸೇವಕರಾಗಿಯೇ ಇದ್ದರು. ಶ್ರೀಹರಿಯ ಸೇವೆಯು ದೊರೆಯಲೇಂದೇ ಭೂಲೋಕದಲ್ಲಿ ಜನಿಸಿದ್ದರು.
ವಿ.ಪಿ. ವಸ್ತ್ರಗಳನ್ನು ಕಸಿದುಕೊಂಡ ಘಟನೆಯಲ್ಲಿ, ಆ ದುಷ್ಟ ರಜಕನ ಹತ್ಯವೇ ಮುಖ್ಯ ಉದ್ದೇಶ. ಜೊತೆಯಲ್ಲಿ ಕಂಸನ ವಸ್ತ್ರಗಳಿಗೆ ತೋರಿದ ಭಾವನೆ ವ್ಯಕ್ತವಾಗುತ್ತದೆ. ಅದೇ ರೀತಿ ಸೇವಕರ ಸೇವೆಯನ್ನು ಸ್ವೀಕರಿಸಿ, ಅವರನ್ನು ಉದ್ಧರಿಸುವುದೇ ಶ್ರೀಕೃಷ್ಣನ ಗುರಿಯಾಗಿದೆ.

ಸರ್ವೇಷ್ಟ ಪುಷ್ಟಿ ಮಿಹ ತತ್ರ ಸರೂಪತಾಂ ಚ
ಕೃಷ್ಣಸ್ತ ಯೋರ್ವರಮದಾದಥ ರಾಜಮಾರ್ಗೇ ।
ಗಚ್ಛನ್ ದದರ್ಶವನಿತಾಂ ನರದೇವಯೋಗ್ಯ
ಮಾದಾಯ ಗಂಧ ಮಧಿಕಂ ಕುಟಿಲಾಂ ವ್ರಜಂತೀಮ್ ॥೧೦೧॥

ಶ್ರೀಕೃಷ್ಣನು ಆ ಸೇವಕರಿಗೆ ಅವರವರ ಇಷ್ಟಗಳನ್ನು ಪೂರ್ತಿಗೊಳಿಸಿದನು.
ಸಾರೂಪ್ಯ ಪ್ರಾಪ್ತಿ ವರವನ್ನಿತ್ತನು. ರಾಜಮಾರ್ಗದಲ್ಲಿ ಓರ್ವ ಸ್ತ್ರೀಯಳು ಹೋಗುತ್ತಿರುವುದನ್ನು ನೋಡಿದನು. ಆಕೆಯು ರಾಜನಿಗಾಗಿ ಉತ್ತಮವಾದ ಗಂಧವನ್ನು ತೆಗೆದುಕೊಂಡು ಹೋಗುತ್ತಿದ್ದಳು. ಅವಳು ಆಕಾರದಲ್ಲಿ ಬಹಳ ವಕ್ರಳಾಗಿದ್ದಳು.

ತೇನಾರ್ಥಿತಾ ಸಪದಿ ಗಂಧಮದಾ ತ್ರಿವಕ್ರಾ
ತೇನಾಗ್ರಜೇನ ಸಹಿತೋ ಭಗವಾಂಲ್ಲಿ ಲಿಂಪೇ ।
ತಾಂ ಚಾಶ್ವುಜುತ್ವ ಮನ ಯತ್ಸ ತಯಾರ್ಥಿತೋಽಲ
ಮಯಾಮಿ ಕಾಲತ ಇತಿ ಪ್ರಹಸನ್ನ ಮುಂಚತ್ ॥೧೦೨॥

ಶ್ರೀಕೃಷ್ಣನು, ಆ ತ್ರಿವಕ್ರೆಯನ್ನು ಕಂಡು ಗಂಧವನ್ನು ಕೇಳಿದನು. ಕೂಡಲೇ ಭಕ್ತಿಯಿಂದ ಅವಳು ಆ ಗಂಧವನ್ನು ಕೃಷ್ಣನಿಗೂ ಬಲರಾಮನಿಗೂ ಪೂಸಿದಳು. (ಲೇಪಿಸಿದಳು). ಅವಳ ಭಕ್ತಿಗೆ ಮೆಚ್ಚಿ ಶ್ರೀಕೃಷ್ಣನು ಅವಳ ವಕ್ರತೆಯನ್ನು ಸರಿಪಡಿಸಿ ಸುಂದರ ಸ್ತ್ರೀಯನ್ನಾಗಿ ಮಾಡಿದನು. ಅವಳು ತನ್ನ ಮನೆಗೆ ಬರಲು ಪ್ರಾರ್ಥಿಸಿದಳು. 'ಕಾಲಾಂತರದಲ್ಲಿ ಬರುವೆನು' ಎಂದು ಅವಳಿಗೆ ಸಮಾಧಾನ ಪಡಿಸಿ, ನಗುತ್ತ ಮುಂದೆ ನಡೆದನು.

ವಿ.ವಿ. ಜಗತ್ತಿನ ಡೊಂಕನ್ನೇ ತಿದ್ದುವ ಸಾಮರ್ಥ್ಯವುಳ್ಳ ಶ್ರೀಕೃಷ್ಣನು ವ್ಯಕ್ತಿಯ ಡೊಂಕನ್ನು ತಿದ್ದಿ ಸರಿಪಡಿಸಲಾರನೇ?

ಶ್ರೀಮದಾಚಾರ್ಯರಿಗೆ ಶ್ರೀಹರಿಯನ್ನು ಎಷ್ಟು ಸಲ, ಯಾವ ರೀತಿಯಿಂದ ಸ್ತುತಿಸಿದರೂ ತೃಪ್ತಿಯಾಗುತ್ತಿರಲಿಲ್ಲ ಎಂಬುದಕ್ಕೆ ಮುಂದೆ ನೋಡಿ.

**ಪೂರ್ಣೇಂದು ಬೃಂದ ನಿವಹಾಧಿಕಕಾಂತಿ ಕಾಂತ–**
**ಸೂರ್ಯಾಮಿತೋರು ಪರಮದ್ಯುತಿ ಸೌಖ್ಯ ದೇಹಃ ।**
**ಪೀತಾಂಬರಃ ಕನಕ ಭಾಸುರ ಗಂಧಮಾಲ್ಯಃ**
**ಶೃಂಗಾರವಾರಿಧಿರಗಣ್ಯ ಗುಣಾರ್ಣವೋಽಗಾತ್ ॥೧೦೩॥**

ಶ್ರೀಕೃಷ್ಣನು, ಅನೇಕ ಪೂರ್ಣಚಂದ್ರರ ಕಾಂತಿಗೆ ಕಾಂತನಾಗಿದ್ದನು. ಅಂದರೆ ಆ ಕಾಂತಿಯನ್ನು ಮೀರಿಸುವವನಾಗಿದ್ದನು. ಅನೇಕ ಸೂರ್ಯದ್ಯುತಿ (ಪ್ರಕಾಶ)ಗಿಂತಲೂ ಮಿಗಿಲಾಗಿ ಹೊಳೆಯುವ ಸುಂದರ ದೇಹವುಳ್ಳವನಾಗಿದ್ದನು. ಹೊಂಬಣ್ಣದ ಪೀತಾಂಬರಧಾರಿಯಾಗಿದ್ದನು. ಗಂಧವನ್ನು ಲೇಪಿಸಿಕೊಂಡು ಮಾಲೆಗಳಿಂದ ಅಲಂಕೃತನಾಗಿದ್ದನು. ಅವನ ಶರೀರವೇ ಆನಂದಮಯವಾಗಿದ್ದಿತು. ಶೃಂಗಾರಕ್ಕೆ ಸಾಗರನಾಗಿದ್ದರೆ, ಅಗಣ್ಯಗುಣಗಳಿಗೆ ಆಗರನಾಗಿದ್ದನು.

ವಿ.ವಿ. ಶ್ರೀಮದಾಚಾರ್ಯರು, ಸೂರ್ಯ, ಚಂದ್ರ, ದ್ಯುತಿ ಮತ್ತು ಕಾಂತಿ ಪದಗಳನ್ನು ಬಳಸಿ ಸೂರ್ಯಚಂದ್ರರ ಪ್ರಕಾಶಗಳಲ್ಲಿ ಇರುವ ವ್ಯತ್ಯಾಸವನ್ನು ವಿವರಿಸುತ್ತ, ಪರಮಾತ್ಮನ ಗುಣವೈಶಿಷ್ಟ್ಯಗಳನ್ನೂ ವ್ಯಕ್ತಮಾಡಿದ್ದಾರೆ. ಪರಮಾತ್ಮನು ಸಜ್ಜನರಿಗೆ ಶಾಂತನಾಗಿ, ಸೌಮ್ಯನಾಗಿ ಆಹ್ಲಾದಕರನಾಗಿ ಕಂಡರೆ, ದುರ್ಜನರಿಗೆ ಸೂರ್ಯನಂತೆ ಪ್ರಖರನಾಗಿ

ತೀಕ್ಷ್ಣನಾಗಿ, ಉರಿಬಿಸಿಲಿನಂತೆ ಪ್ರಕಾಶಿಸುತ್ತಾನೆ. ಕೋರೈಸುವ ಪ್ರಭೆಯಂತೆ ತ್ರಾಸದಾಯಕನಾಗುತ್ತಾನೆ ಎಂಬ ಭಾವನೆಗಳನ್ನು ಎತ್ತಿ ತೋರಿದ್ದಾರೆ.

**ಪ್ರಾಪ್ಯಾಥ ಚಾಯುಧಗೃಹಂ ಧನುರೀಶದತ್ತಂ**
**ಕೃಷ್ಣಃ ಪ್ರಸಹ್ಯ ಜಗೃಹೇ ಸಕಲೈರಭೇದ್ಯಮ್ ।**
**ಕಾಂಸಂ ಸ ನಿತ್ಯ ಪರಿಪೂರ್ಣಸಮಸ್ತ ಶಕ್ತಿ–**
**ರಾರೋಪ್ಯ ಚೈತದನುಕೃಷ್ಯ ಬಭಂಜ ಮಧ್ಯೇ ॥೧೦೪॥**

ಶ್ರೀಕೃಷ್ಣನು ನೇರವಾಗಿ ಆಯುಧಗಳನ್ನಿಡುವ ಮನೆಗೆ ಬಂದನು. ಅಲ್ಲಿ ಒಂದು 'ಧನು' ಇದ್ದಿತು. ರುದ್ರದೇವರು ಅದನ್ನು ಕಂಸನಿಗೆ ಕೊಟ್ಟಿದ್ದರು. ಅದು ಅಭೇದ್ಯವಾಗಿತ್ತು. ಇದುವರೆಗೆ ಅದನ್ನು ಯಾರೂ ಭೇದಿಸಿರಲಿಲ್ಲ. ನಿತ್ಯನು, ಪರಿಪೂರ್ಣನು, ಸರ್ವಸಮರ್ಥನು ಆದ ಶ್ರೀಕೃಷ್ಣನು ಅದನ್ನು ಹಿಡಿದು ಮಧ್ಯದಲ್ಲಿ ಮುರಿದೇ ಬಿಟ್ಟನು.

**ತಸ್ಮಿನ್ ಸುರಾಸುರಗಣೈರಖಿಲೈ ರಭೇದ್ಯೇ**
**ಭಗ್ನೇ ಬಭೂವ ಜಗದಂಡ ವಿಭೇದ ಭೀಮಃ ।**
**ಶಬ್ದಃ ನ ಯೇನ ನಿಪಪಾತ ಭುವಿ ಪ್ರಭಗ್ನ–**
**ಸಾರೋऽಸುರೋ ಧೃತಿಯುತೋऽಪಿ ತದೈವ ಕಂಸಃ ॥೧೦೫॥**

ಆ 'ಧನು' ಸುರರ ಗುಂಪಿನಿಂದಲೂ, ಅಸುರರ ತಂಡದಿಂದಲೂ ಭೇದಿಸಲು ಅಶಕ್ಯವಾಗಿತ್ತು. ಅಂತಹ ಧನು ಮುರಿದಾಗ ಬ್ರಹ್ಮಾಂಡವೇ ಸೀಳಿದಂತೆ ಭಯಂಕರ ಶಬ್ದವಾಯಿತು. ಆ ಶಬ್ದವನ್ನು ಕೇಳಿದ ಕಂಸನು, ಧೈರ್ಯವುಳ್ಳವನಾದರೂ ಕಂಪಿಸಿ ತನ್ನ ಸಿಂಹಾಸನದಿಂದ ಕೆಳಗೆ ಬಿದ್ದನು. ಅವನಿಗೆ ತನ್ನ ಬಲವೇ ಮುರಿದಂತಾಯಿತು.

**ಆದಿಷ್ಟಮಪ್ಯುರುಬಲಂ ಭಗವಾನ್ ಸ ತೇನ**
**ಸರ್ವಂ ನಿಹತ್ಯ ಸಬಲಃ ಪ್ರಯಯೌ ಪುನಶ್ಚ ।**
**ನಂದಾದಿ ಗೋಪಸಮಿತಂ ಹರಿರತ್ರ ರಾತ್ರೌ**
**ಭುಕ್ತ್ವಾ ಪಯೋऽನ್ವಿತಶುಭಾನ್ನ ಮುವಾಸ ಕಾಮಮ್ ॥೧೦೬॥**

ಆ ಬಿಲ್ಲಿನ ತುಂಡುಗಳಿಂದಲೇ ಶ್ರೀಕೃಷ್ಣನು ಕಂಸನ ಪ್ರಬಲರಾದ ಸೇವಕರನ್ನು ಕೊಂದನು. ಅಲ್ಲಿಂದ ಬಲರಾಮನನ್ನು ಕೂಡಿಕೊಂಡು ನಂದ ಮತ್ತು ಗೋಪಾಲಕರಿರುವ ಸ್ಥಳಕ್ಕೆ ಬಂದನು. ತಾನು ಆಪ್ತಕಾಮನಾದರೂ ನಂದಗೋಪನಿತ್ತ ಕ್ಷೀರಾನ್ನವನ್ನು ಭುಂಜಿಸಿದನು. ಅಂದು ರಾತ್ರಿ ಅಲ್ಲಿಯೇ ಉಳಿದನು.

**ಕಂಸೋಽಪ್ಯತೀವ ಭಯ ಕಂಪಿತ ಹೃತ್ಸರೋಜಃ**
**ಪ್ರಾತರ್ನರೇಂದ್ರ ಗಣ ಮಧ್ಯಗತೋಽಧಿಕೋಚ್ಚಮ್ ।**
**ಮಂಚಂ ವಿವೇಶ ಸಹ ಜಾನಪದೈಶ್ಚ ಪೌರೈ-**
**ರ್ನಾನಾನು ಮಂಚಗತೈರ್ಯುವತೀ ಸಮೇತೈಃ ॥೧೦೭॥**

ಆ ಸಮಾಚಾರನ್ನು ಕೇಳಿ, ಕಂಸನ ಹೃದಯವು ಭಯದಿಂದ ಕಂಪಿತವಾಯಿತು. ಪ್ರಾತಃಕಾಲದಲ್ಲಿ ಕಂಸನು ತನ್ನ ಅಧೀನ ರಾಜರ ಸಮೂಹ ಮಧ್ಯದಲ್ಲಿ ಉನ್ನತ ಸ್ಥಾನದಲ್ಲಿ ಕುಳಿತಿದ್ದನು. ಸುತ್ತಲೂ ಜನಪದಗಳ ಅಧಿಕಾರಿಗಳು, ಪೌರರು ತಮ್ಮ ತಮ್ಮ ನಿಯುಕ್ತವಾದ ಸ್ಥಳಗಳಲ್ಲಿ ಕುಳಿತಿದ್ದರು.

**ಸಂಸ್ಥಾಪ್ಯನಾಗಮುರುರಂಗಮುಖೇ ಕುವಲ್ಯಾ-**
**ಪೀಡಂ ಗಿರೀಂದ್ರ ಸದೃಶಂ ಕರಿಸಾದಿಯುಕ್ತಮ್ ।**
**ಚಾಣೂರ ಮುಷ್ಟಿಕಮುಖಾನಪಿ ಮಲ್ಲವೀರಾನ್**
**ರಂಗೇ ನಿಧಾಯ ಹರಿಸಂಯಮನಂ ಕಿಲೈಚ್ಛತ್ ॥೧೦೮॥**

ಒಂದು ಸುಂದರವಾದ ನಾಗ ರಂಗಸ್ಥಳ ಸಿದ್ಧವಾಗಿತ್ತು. ಅದರ ಮುಂಭಾಗದಲ್ಲಿ ಮಾವುತನಿಂದ ಸಜ್ಜಾದ, ಗಿರಿಗೆ ಸದೃಶವಾದ (ಕುವಲಯಾಪೀಡ) ಎಂಬ ಆನೆಯನ್ನು ನಿಲ್ಲಿಸಲಾಗಿತ್ತು. ಅನತಿ–ದೂರದಲ್ಲಿಯೇ 'ಚಾಣೂರ ಮುಷ್ಟಿಕ' ರೆಂಬ ಮಲ್ಲವೀರರನ್ನು ನಿಲ್ಲಿಸಲಾಗಿತ್ತು. ಈ ಸಿದ್ಧತೆಯಿಂದ ಶ್ರೀಕೃಷ್ಣನನ್ನು ನಿಗ್ರಹಿಸಬಹುದು ಎಂಬ ಇಚ್ಛೆ ಕಂಸನದಾಗಿತ್ತು. ಇದೊಂದು ಅಸಾಧ್ಯ ಸಾಹಸವೇ ಸೈ.

ಕುವಲಯಾಪೀಡ. ಭೂಮಿಯೆಂಬ ಬಳ್ಳಿಗೆ ಪೀಡೆಯನ್ನಿತ್ತು ಅದನ್ನು ಕಿತ್ತೆಸೆಯುವ ಸಾಮರ್ಥ್ಯವುಳ್ಳ ಆನೆ.

**ಅಕ್ಷೌಹಿಣೀ ಗಣಿತಮಸ್ಯ ಬಲಂ ಚ ವಿಂಶ-**
**ದಾಸೀದಸಹ್ಯಮುರುವೀರ್ಯಮನನ್ಯವಧ್ಯಮ್ ।**
**ಶಂಭೋರ್ವರಾದಪಿ ಚ ತಸ್ಯ ಸುನಾನಾಮಾ**
**ಯಃ ಪೂರ್ವಮಾಸ ವೃಕ ಇತ್ಯಸರೋಽನುಜೋಽಭೂತ್ ॥೧೦೯॥**

ಅತಿಶಯ ಬಲದಿಂದ ಕೂಡಿದ ಇಪ್ಪತ್ತು ಅಕ್ಷೋಹಿಣಿ ಸೈನ್ಯ ಅವನ ಹತ್ತಿರ ಇದ್ದತು. ಶಂಭುವಿನ ವರಬಲದಿಂದ ಅದು ಅಸಹ್ಯವೂ ಅವಧ್ಯವೂ ಆಗಿತ್ತು ಅದಕ್ಕೆ ಸುನೀಥನು ಅಧಿಪತಿ. ಅವನು ಪೂರ್ವದಲ್ಲಿ ಹೇಳಲ್ಪಟ್ಟ ವೃಕಾಸುರನ ಅನುಜನಾಗಿದ್ದನು.

**ಸಪ್ತಾನುಜಾ ಅಪಿ ಹಿ ತಸ್ಯ ಪುರಾತನಾಯೇ**
**ಸರ್ವೇಽಪಿ ಕಂಸವೃತಾನಾ ಸಹಿತಾಃ ಸ್ಮ ರಂಗೇ ।**
**ತಸ್ಥು ಸರಾಮಮಭಿಯಾಂತ ಮುದೀಕ್ಷ್ಯ ಕೃಷ್ಣ-**
**ಮಾತ್ತಾಯುಧಾ ಯುಧಿ ವಿಜೇತುಮಪಂ ಸುಪಾಪಾಃ ॥೧೧೦॥**

ಆ ಅಸುರನಿಗೆ ಪೂರ್ವದಲ್ಲಿ ಏಳು ಜನ ತಮ್ಮಂದಿರಿದ್ದರು. ಅವರೆಲ್ಲರೂ ಇಂದು ಪುನಃ ಕಂಸನ ಸಹಾಯಕ್ಕಾಗಿ ರಂಗಸ್ಥಳದಲ್ಲಿ ಬಂದು ನಿಂತಿದ್ದಾರೆ. ಆ ದುಷ್ಟರು, ಯುದ್ಧದಲ್ಲಿ ಬಲರಾಮ ಶ್ರೀಕೃಷ್ಣರನ್ನು ಗೆಲ್ಲುವ ಉದ್ದೇಶದಿಂದಲೇ ಮತ್ತರಾಗಿ ಬಂದಿದ್ದರು.

**ಕೃಷ್ಣೋಽಪಿ ಸೂರ್ಯದಿತೇ ಸಬಲೋ ವಯಸ್ಯೈಃ**
**ಸಾರ್ಧಂ ಜಗಾಮ ವರರಂಗಮುಖಂ ಸುರೇಶ್ಯೈಃ ।**
**ಸಂಸ್ತೂಯಮಾನ ಉರುವಿಕ್ರಮ ಅಸುರಾಣಾಂ**
**ನಿರ್ಮೂಲನಾಯ ಸಕಲಾ ಚರಿತೋರು ಶಕ್ತಿಃ ॥೧೧೧॥**

ಶ್ರೀಕೃಷ್ಣನು ಕೂಡ ಸೂರ್ಯೋದಯವಾಗುತ್ತಿದ್ದಂತಯೇ, ಬಲರಾಮನನ್ನು ಸಖರಾದ ಗೋಪಾಲಕರನ್ನು ಕೂಡಿಕೊಂಡು ಆ ಶ್ರೇಷ್ಟವಾದ ರಂಗದ ಮುಖದಲ್ಲಿ ಬಂದು ನಿಂತನು. ಸಕಲ ಚರಿತ್ರೆಗಳನ್ನು ಮಾಡಲು ಸಮರ್ಥನಾದ ಶ್ರೀಕೃಷ್ಣನು ಪರಾಕ್ರಮಿಗಳಾದ ಅಸುರರ ನಾಶಕ್ಕಾಗಿಯೇ ಬಂದಿರುವುದನ್ನು ಕಂಡು, ದೇವತೆಗಳು ಶ್ರೀಕೃಷ್ಣನನ್ನು ಸ್ತುತಿಸಿದರು.

**ಆಯನ್ ಜಗದ್ಗುರುತಮೋ ವಲಿನಂ ಗಜೇಂದ್ರಂ**
**ರುದ್ರ ಪ್ರಸಾದ ಪರಿರಕ್ಷಿತ ಮಾಶ್ವ ಪಶ್ಯತ್ ।**
**ದೃಷ್ಟೋರುರಂಗಮುಖ ಸಂಸ್ಥಿತಮಿಾಕ್ಷ್ಯ ಚೈಭ್ಯಂ**
**ಪಾಪಾಪಯಾಹಿ ನ ಚಿರಾದಿತಿ ವಾಚಮೂಚೇ ॥೧೧೨॥**

ಆ ರಂಗಮುಖದಲ್ಲಿ ಬಲಯುತವಾದ ಆನೆಯನ್ನು, ರುದ್ರವರಬಲದಿಂದ ರಕ್ಷಿತನಾದ ಮಾವುತನು ನಿಂತಿರುವುದನ್ನು ಜಗದ್ಗುರುವಾದ ಶ್ರೀಕೃಷ್ಣನು ನೋಡಿದನು. ಎಲೋ ಪಾಪಿಯೇ ಇಲ್ಲಿ ನಿಲ್ಲಬೇಡ. ದೂರಸರಿ. ಎಂದು ಶ್ರೀಕೃಷ್ಣನು ಆ ಮಾವುತನಿಗೆ ಹೇಳಿದನು.

ಪಿ.ಪಿ. ಕೆಲವು ಗ್ರಂಥಗಳಲ್ಲಿ 'ದುಷ್ಟೋರರಂಗಮುಖ' ಎಂದು ಪಾಠಾಂತರವಿದೆ. ಅಲ್ಲಿ ದುಷ್ಟಕಂಸನಿಂದ ನಿರ್ಮಿತವಾದ, ಅಥವಾ ದುಷ್ಟರ ಸಮೂಹದಿಂದ ಕೂಡಿದ ರಂಗ, ಎಂದು ಅರ್ಥೈಸಬಹುದು.

**ಕ್ಷಿಪ್ತಃ ಸ ಈಶ್ವರತಮೇನ ಗಿರೀಶಲಬ್ಧಾ**
**ಧೃಷ್ಟೋ ವರಾಜ್ಜಗತಿ- ಸರ್ವಜನೈರವಧ್ಯಃ ।**
**ನಾಗಂ ತ್ವವಧ್ಯಮಭಿಯಾಪಯತೇ ತತೋಽಗ್ರೇ**
**ಪಾಪೋ ದುರಂತಮಹಿಮಂ ಪ್ರತಿವಾಸುದೇವಮ್ ॥೧೧೩॥**

ತತ್‌ಕ್ಷಣದಲ್ಲಿಯೇ ವರಬಲದಿಂದ ಮತ್ತನಾದ ಆ ಮಾವುತನು, ಅವಧ್ಯವಾದ ಆನೆಯನ್ನು, ದುರಂತಮಹಿಮನಾದ ಶ್ರೀವಾಸುದೇವನ ಮೇಲೆ ಎರಗುವಂತೆ ಬಿಟ್ಟನು.

**ವಿಕ್ರೀಡ್ಯ ತೇನ ಕರಿಣಾ ಭಗವಾನ್ ಸ ಕಿಂಚಿ-**
**ದ್ಧಸ್ತೇ ಪ್ರಗೃಹ್ಯ ವಿನಿಕೃಷ್ಯ ನಿಪಾತ್ಯ ಭೂಮೌ ।**
**ಕುಂಭೇ ಪದಂ ಪ್ರತಿನಿಧಾಯ ವಿಷಾಣಯುಕ್ತ**
**ಮುತ್ಕೃಷ್ಯ ಹಸ್ತಿ ಪಮಹನ್ನಿಪಪಾತಸೋಽಪಿ ॥೧೧೪॥**

ಶ್ರೀಕೃಷ್ಣನು ಆನೆಯ ಜೊತೆಯಲ್ಲಿ ಕೆಲವು ಕಾಲ ಆಟ ಆಡಿದನು. ನಂತರ ಅದರ ಸೊಂಡಿಲನ್ನು ಹಿಡಿದು ಎಳೆದು ಅದನ್ನು ಭೂಮಿಯಲ್ಲಿ ಕೆಡಹಿದನು. ಕುಂಭಸ್ಥಳದಲ್ಲಿ ಪಾದಗಳಿಂದ ಚೆನ್ನಾಗಿ ತುಳಿದನು. ಅದರ

ಎರಡೂ ಹಲ್ಲು(ದಂತ)ಗಳನ್ನು ಕಿತ್ತಿದನು. ಅದೇ ದಂತಗಳಿಂದಲೇ ಹೊಡೆದು ಆನೆಯನ್ನೂ ಕೆಡಹಿದನು. ಅದು ಸತ್ತಿತು.

**ನಾಗಂ ಸಸಾದಿ ನಮವಧ್ಯಮಸೌನಿಹತ್ಯ**
**ಸ್ಕಂಧೇ ವಿಷಾಣಮವಸಜ್ಯ ಸಹಾಗ್ರಜೇನ ।**
**ನಾಗೇಂದ್ರಸಾಂದ್ರಮದಬಿಂದು ಭಿರಂಚಿ ತಾಂಗಃ**
**ಪೂರ್ಣಾತ್ಮಶಕ್ತಿ ರಮಲಃ ಪ್ರವಿವೇಶ ರಂಗಮ್ ॥೧೧೫॥**

ಅವಧ್ಯವಾದ ಆನೆಯನ್ನು ಕೊಂದನು. ತನ್ನ ಭುಜದ ಮೇಲೆ ಅದರ ದಂತಗಳನ್ನು ಹೊತ್ತನು. ಆನೆಯ ಮದೋದಕದಿಂದ ಆತನ ಶರೀರವು ಭೂಷಿತವಾಗಿತ್ತು. ಪೂರ್ಣಾತ್ಮನು, ಅಸಮಬಲಶಕ್ತಿಯುತನು, ಪರಮ ಪವಿತ್ರನೂ ಆದ ಶ್ರೀಕೃಷ್ಣನು ಅಣ್ಣನನ್ನು ಕೂಡಿಕೊಂಡು ರಂಗವನ್ನು ಪ್ರವೇಶಿಸಿದನು.

**ವಿಷ್ಣೋ ಜಗದ್ಗುರು ತಮೋ ಬಲವೀರ್ಯಮೂರ್ತೌ**
**ರಂಗಂ ಮುಮೋದ ಚ ಶುಶೋಷ ಜನೋಽಖಿಲೋಽತ್ರ ।**
**ಕಂಜಂ ತಥಾಪಿ ಕುಮುದಂ ಚ ಯಥೈವ ಸೂರ್ಯ**
**ಉದ್ಯತ್ಯಜೇಽನುಭವಿನೋ ವಿಪರೀತಕಾಷ್ಠ ॥೧೧೬॥**

ಜಗದ್ಗುರುವು, ಬಲವೀರ್ಯಗಳ ಮೂರ್ತಿಗಳೂ ಆದ ಶ್ರೀಕೃಷ್ಣ ಬಲರಾಮರು, ರಂಗಪ್ರವೇಶಿಸುವುದನ್ನು ಕಂಡು ಕೆಲವರಿಗೆ ಹರ್ಷವಾದರೆ, ಕೆಲವರಿಗೆ ದುಃಖವೂ ಆಯಿತು. ಸೂರ್ಯನ ಉದಯದಿಂದ ಕಮಲ ಮತ್ತು ಕುಮುದಗಳಲ್ಲಿ ವಿಪರೀತ ಅನುಭವ ಉಂಟಾಗುವುದಲ್ಲವೇ?

ವಿ.ವಿ.: ಸೂರ್ಯನು ಉದಯಿಸಿದಾಗ ಕಮಲವು ಅರಳಿದರೆ, ಕುಮುದವು ಬಾಡುತ್ತದೆ. ಅದೇ ರೀತಿ ಶ್ರೀಕೃಷ್ಣನ ರಂಗಪ್ರವೇಶದಿಂದ ಜ್ಞಾನಿಗಳಿಗೆ, ಸಜ್ಜನರಿಗೆ ಆನಂದವಾಯಿತು. ಅವರ ಮುಖಕಮಲಗಳು ಅರಳಿದವು. ಅಜ್ಞಾನಿಗಳಿಗೆ, ದುಷ್ಟರಿಗೆ, ದೈತ್ಯರಿಗೆ ಭಯವುಂಟಾಗಿ ಅವರ ಮುಖಗಳು ಬಾಡಿದವು.

ಕಾರ್ಯ ಒಂದೇ ಆದರೂ, ಪರಿಣಾಮಗಳು ಮಾತ್ರ ಎರಡು.

ರಂಗಂ ಪ್ರವಿಷ್ಟ ಮಭಿ ವೀಕ್ಷ್ಯ ಜನನ್ನಿವಾಸಮ್ ।
ಕಂಸ ಪ್ರಿಯಾರ್ಥಮಭಿಭಾಷ್ಯ ಜಗನ್ನಿವಾಸಮ್ ।
ಚಾಣೂರ ಇತ್ಯಭಿಹಿತತೋ ಜಗತಾಮಧ್ಯ:
ಶಂಭು ಪ್ರಸಾದತ ಇದಂ ಶೃಣು ಮಾಧವೇತಿ ॥೧೧೭॥

ಶ್ರೀಕೃಷ್ಣನು ರಂಗಪ್ರವೇಶಿಸುವುದನ್ನು ಪ್ರಸಿದ್ಧ ಮಲ್ಲನು ನೋಡಿದನು. ಅವನೇ ಚಾಣೂರನು. ಅವನು ಶಂಭು ವರಪ್ರಸಾದದಿಂದ ಅವಧ್ಯನು. ಅವನು ಕಂಸನ ಪ್ರಿಯಾರ್ಥ ಹೇ ಮಾಧವನೇ 'ಕೇಳು' ಎಂದು ಈ ರೀತಿಯಾಗಿ ಮಾತನಾಡಿದನು.

ರಾಜೈವ ದೈವತಮತಿ ಪ್ರವದಂತಿ ವಿಪ್ರಾ
ರಾಜ್ಞ: ಪ್ರಿಯಂ ಕೃತವತ: ಪರಮಾ ಹಿ ಸಿದ್ಧಿ: ।
ಯೋತ್ಸ್ಯಾವ ತೇನ ನೃಪತಿ ಪ್ರಯಿ ಕಾಮ್ಯಯಾ ವಾಂ
ರಾಮೋಽಭಿಯುಧ್ಯತು ಬಲಿ ಸಹ ಮುಷ್ಟಿಕೇನ ॥೧೧೮॥

'ರಾಜನೇ ದೇವರು' ಎಂದು ವಿಪ್ರರು ಹೇಳುತ್ತಾರೆ. ರಾಜನಿಗೆ ಪ್ರಿಯವಾದ ಕಾರ್ಯ ಮಾಡುವುದೇ ಪರಮಸಿದ್ಧಿಯು. ಕಾರಣ ನಾವಿಬ್ಬರು ರಾಜನ ಪ್ರೀತಿಯ ಮಲ್ಲ ಕಾಮನೆಗಾಗಿ ಯುದ್ಧ ಆಡೋಣ. ಬಲರಾಮನು ಸಹ ಬಲಶಾಲಿಯಾದ ಮುಷ್ಟಿಕನ ಮಲ್ಲ ಜೊತೆಯಲ್ಲಿ ಯುದ್ಧ ಆಡಲಿ..." ಹೀಗೆಂದು ಚಾಣೂರನು ಕೃಷ್ಣನಿಗೆ ಹೇಳಿದನು.

ಇತ್ಯುಕ್ತ ಆಹ ಭಗವಾನ್ ಪರಿಹಸ ಪೂರ್ವ
ಮೇವಂ ಭವತ್ವಿತಿ ಸ ತೇನ ತದಾಭಿಯಾತ: ।
ಸಂದರ್ಶದೈವತಪತಿರ್ಯುಧಿ ಮಲ್ಲ ಲೀಲಾಂ
ಮೌಹೂರ್ತಿಕೀ ಮಥ ಪದೋರ್ಜಗೃಹೇ ಸ್ವಶತ್ರುಮ್ ॥೧೧೯॥

ಇದನ್ನು ಕೇಳಿದ ಭಗವಂತನು ಪರಿಹಾಸಪೂರ್ವಕ ನಗುತ್ತ ಹಾಗೇ ಆಗಲಿ, ನಿನಗೆ ರಾಜನೇ ದೇವರಾಗಲಿ ಎಂದು ಹೇಳಿ ದೇವತೆಗಳೊಡೆಯನಾದ ಶ್ರೀಕೃಷ್ಣನು ಯುದ್ಧಕ್ಕೆ ನಿಂತನು. ಒಂದು ಮುಹೂರ್ತದ(ಕೆಲಕಾಲ)ವರೆಗೆ

ಮಲ್ಲರ ಲೀಲೆಗಳನ್ನು ತೋರಿ ನಂತರ ತನ್ನ ಶತ್ರುವಾದ ಮಲ್ಲನ ಕಾಲುಗಳನ್ನು ಮಧ್ಯದಲ್ಲಿ ಗಟ್ಟಿಯಾಗಿ ಹಿಡಿದುಕೊಂಡನು.

ಉತ್ಕ್ಷಿಪ್ಯ ತಂ ಗಗನಗಂ ಗಿರಿಸನ್ನಿಕಾಶ–
ಮುದ್ ಭ್ರಾಮ್ಯ ಚಾರ್ಥಶತಶಃ ಕುಲಿಶಾಕ್ಷತಾಂಗಮ್ ।
ಆವಿಧ್ಯ ದುರ್ಧರಬಲೋ ಭುವಿನಿಷ್ಪಿಪೇಷ
ಚೂರ್ಣೀಕೃತಃ ಸ ನಿಕ್ಷಪಾತ ಯಥಾ ಗಿರೀಂದ್ರಃ ॥೧೨೦॥

ಅವನನ್ನು ಮೇಲಕ್ಕೆ ಎತ್ತಿದನು. ಪರ್ವತಗಾತ್ರನಾದ ಅವನನ್ನು ಆಕಾಶದಲ್ಲಿ ನೂರಾರು ಸಲ ಗರಗರನೆ ತಿರುಗಿಸಿದನು. ಅವನು ಬಹಳ ಬಲಶಾಲಿಯಾಗಿದ್ದರೂ, ಅವನನ್ನು ಚೆನ್ನಾಗಿ ತುಳಿದನು. ಚೂರ್ಣೀಕೃತನಾಗಿ ಬೆಟ್ಟದಂತೆ ಭೂಮಿಯಲ್ಲಿ ಬಿದ್ದನು.

ಕೃಷ್ಣಂ ಚ ತುಷ್ಟುವುರತೋ ದಿವಿದೇವಸಂಘಾ
ಮರ್ತ್ಯಾ ಭುವಿ ಪ್ರವರ ಮುತ್ತಮಪೂರುಷಾಣಾಮ್ ।
ತದ್ವದ್ಬಲಸ್ಯ ದೃಢಮುಷ್ಟಿನಿವಿಷ್ಟ ಮೂರ್ಧಾ
ಭ್ರಷ್ಟಸ್ತದೈವ ನಿಪಪಾತ ಸ ಮುಷ್ಟಿಕೋಽಪಿ ॥೧೨೧॥

ಕೃಷ್ಣನ ಕಾರ್ಯಕ್ಕೆ ಸಂತುಷ್ಟನಾಗಿ ದೇವಲೋಕದಲ್ಲಿ ದೇವತೆಗಳು ಆತನನ್ನು ಸ್ತುತಿಸಿದರು. ಭೂಲೋಕದಲ್ಲಿ ಬ್ರಾಹ್ಮಣರು ರಾಜರು ಕೊಂಡಾಡಿದರು. ಬಲರಾಮನ ಸದೃಢವಾದ ಮುಷ್ಟಿಪೆಟ್ಟನ್ನು ತಾಳಲಾರದೆ ಆ ಭ್ರಷ್ಟನಾದ ಮುಷ್ಟಿಕನು ಕೂಡ ನೆಲಕಚ್ಚಿದನು.

ಕೂಟಶ್ಚ ಕೋಸಲ ಉತಚ್ಛಲನಾಮಧೇಯೌ
ದ್ವೌ ತತ್ರ ಕೃಷ್ಣ ನಿಹತಾವಪರೋ ಬಲೇನ ।
ಕಂಸಸ್ಯ ಯೇ ತ್ವವರಜಾಶ್ಚ ಸುನೀಥ ಮುಖಾಃ
ಸರ್ವೇ ಬಲೇನ ನಿಹತಾಃ ಪರಿಘೇಣ ಧೀರಾಃ ॥೧೨೨॥

ಕೋಸಲದ ಕೂಟದಲ್ಲಿಯ ಉತ ಮತ್ತು ಛಲ ಎಂಬ ಇಬ್ಬರನ್ನು ಶ್ರೀಕೃಷ್ಣನು ಕೊಂದನು. ಕಂಸನ ತಮ್ಮನಾದ ಸುನೀಥರೇ ಮೊದಲಾದ ಅನೇಕ ವೀರರನ್ನು ಬಲರಾಮನು ತನ್ನ ಗದೆಯಿಂದಲೇ ಕೊಂದು ಹಾಕಿದನು.

ತಾಭ್ಯಾಂ ಹತಾನಸಮೀಕ್ಷ್ಯ ನಿಜಾನ್ ಸಮಸ್ತಾನ್
ಕೌಂಸೇ ದಿದೇಶ ಬಲಮಕ್ಷಯ ಮುಗ್ರವೀರ್ಯಮ್ ।
ರುದ್ರ ಪ್ರಸಾದ ಕೃತಕ್ಷಮವಧ್ಯಮೇತೌ
ನಿಸ್ಸಾರ್ಯ ದಂಡ ಮಧಿಕಂ ಕುರುತೇऽತಿ ಪಾಪಃ ॥೧೨೩॥

ತನ್ನ ಸಮಸ್ತ ಸ್ವಜನರೆಲ್ಲ ಹತರಾಗಿರುವುದನ್ನು ಆ ಕಂಸನು ನೋಡಿದನು. ಪ್ರಬಲವಾದ, ಉಗ್ರವೀರ್ಯ ಮತ್ತು ರುದ್ರಪ್ರಸಾದದಿಂದ ಅವಧ್ಯವಾದ ತನ್ನ ಅಕ್ಷಯ ಸೈನ್ಯಕ್ಕೆ ಶ್ರೀಕೃಷ್ಣ ಬಲರಾಮರಿಗೆ ಸರಿಯಾಗಿ ದಂಡಿಸಲು, ಆ ಪಾಪಿಯಾದ ಕಂಸನು ಆಜ್ಞೆಯಿತ್ತನು.

ಶ್ರು ತ್ವೈವ ರಾಜವಚನಂ ಬಲಮಕ್ಷಯಂ
ತದ ಪೌಹಿಣೀ ದಶತಯುಗ್ಮ ಮನಂತವೀರ್ಯಮ್ ।
ಕೃಷ್ಣಂ ಚಕಾರ ವಿವಿಧಾಸ್ತ್ರ ಧರಂ ಸ್ವಕೋಷ್ಠೇ
ಸಿಂಹಂ ಯಥಾ ಖಿಲ ಸ್ಗಾಲ ಬಲಂ ಸಮೇತಮ್ ॥೧೨೪॥

ರಾಜನ ಆಜ್ಞೆಯನ್ನು ಕೇಳಿದ ಕೂಡಲೇ, ಅಕ್ಷಯ ಬಲಯುಕ್ತ ವಿವಿಧಾಸ್ತ್ರಗಳಿಂದ ಸಜ್ಜಾದ ಕಂಸನ ಇಪ್ಪತ್ತು ಅಕ್ಷೋಹಿಣಿ ಸೈನ್ಯವು ಶ್ರೀಕೃಷ್ಣನನ್ನು ಮುತ್ತಿತು. ಅದು ನರಿಗಳ ದೊಡ್ಡ ಸಮೂಹ ಸಿಂಹಕ್ಕೆ ಮುತ್ತಿಗೆ ಹಾಕಿದಂತೆ ಕಾಣುತ್ತಿತ್ತು.

ಜಾನನ್ನಪೀಶ್ವರಮನಂತ ಬಲಂ ಮಹೇಂದ್ರಃ
ಕೃಷ್ಣಂ ನಿಜಂ ರಥಮಯೋತಯದಾಯುದಾಢ್ಯಮ್ ।
ಶುಶ್ರೂಷಣಾಯ ಪರಮಸ್ಯ ಯಥಾ ಸಮುದ್ರ-
ಮರ್ಘ್ಯೇಣ ಪೂರಯತಿ ಪೂರ್ಣಜಲಂ ಜನೋऽಯಮ್ ॥೧೨೫॥

ಶ್ರೀಕೃಷ್ಣನು ಅನಂತಬಲವುಳ್ಳವನು, ಎಂದು ಇಂದ್ರನು ಅರಿತಿದ್ದರೂ ಕೂಡ, ತನ್ನ ಸ್ವಂತರಥವನ್ನು ಅನಂತ ಆಯುಧ ಮತ್ತು ಶಸ್ತ್ರಾಸ್ತ್ರಗಳಿಂದ ಸಜ್ಜುಗೊಂಡ, ಸಾರಥಿಯಿಂದ ಯುಕ್ತವಾದ ಶ್ರೀಕೃಷ್ಣನ ಸೇವೆಗಾಗಿ ತನ್ನ ಕರ್ತವ್ಯವೆಂದು ಕಳಿಸಿಕೊಟ್ಟನು.

ಇದು ಸಮುದ್ರದ ನೀರನ್ನು ತೆಗೆದುಕೊಂಡು ಸಮುದ್ರಕ್ಕೆ ಅರ್ಘ್ಯವಿತ್ತು 'ಸಮುದ್ರಃ ತೃಪ್ಯತು' ಎಂದು ಹೇಳಿದ ಹಾಗಾಗಿತ್ತು.

ಸ್ವಂ ಸ್ಯಂದನಂ ತು ಭಗವಾನ್ ಸಮಹೇಂದ್ರದತ್ತ
ಮಾರುಹ್ಯ ಸೂತವರ ಮಾತಲಿ ಸಂಗೃಹೀ ತಮ್ ।
ನಾನಾ ಯುಧೋಗ್ರಕಿರಣ ಸ್ತರಣಿರ್ಯಥೈವ
ಧ್ವಾಂತಂ ವಿನಾಶಯದ ಶೇಷತ ಆಶು ಸೈನ್ಯಮ್ ॥೧೨೬॥

ಶ್ರೀಕೃಷ್ಣನು ಸ್ವಸಮರ್ಥನಾದಾಗ್ಯೂ, ಇಂದ್ರನು ಭಕ್ತಿ–ಪೂರ್ವಕ ಸೂತವರ ಮಾತಲಿಯೊಂದಿಗೆ ಕಳುಹಿಸಿದ ರಥವನ್ನು ಸ್ವೀಕರಿಸಿ ಆರೂಢನಾದನು. ಅದರಲ್ಲಿಯ ಆಯುಧಗಳನ್ನು ಬಳಸಿ ಕಂಸನ ಸೈನ್ಯವನ್ನು ನಾಶಮಾಡಿದರು. ಅನಂತ ಕಿರಣಗಳಿಂದ ಉದಯಿಸಿದ ಸೂರ್ಯನನ್ನು ಕಂಡು ದಟ್ಟವಾದ ಕಗ್ಗತ್ತಲೆ ಓಡಿಹೋದಂತೆ ಭಾಸವಾಗುತ್ತಿತ್ತು.

ನಿಶ್ಶೇಷತೋ ವಿನಿಹತೇ ಸ್ವಬಲೇ ಸ ಕಂಸ
ಶ್ಚರ್ಮಾಸಿ ಪಾಣಿ ರಭಯಾತುಮಿಯೇಷ ಕೃಷ್ಣಮ್ ।
ತಾವತ್ತಮೇವ ಭಗವಂತಮಭಿ ಪ್ರಯಾಂತ
ಮುತ್ತುಂಗ ಮಂಚ ಶಿರಸಿ ಪ್ರದದರ್ಶ ವೀರಮ್ ॥೧೨೭॥

ತನ್ನ ಸೈನ್ಯವು ಸಂಪೂರ್ಣ ನಾಶವಾದ ಮೇಲೆ ತನ್ನ ಬಲದಿಂದಲೇ ಕಂಸನು ಡಾಲು ಮತ್ತು ಖಡ್ಗಗಳನ್ನು ಕರದಲ್ಲಿ ಧರಿಸಿ ಕೃಷ್ಣನಿಗೆ ಎದುರಾಗಿ ಬಂದನು. ಅಷ್ಟರಲ್ಲಿ ಶ್ರೀ ಕೃಷ್ಣನು ಉತ್ತುಂಗಮಂಚಿಕೆಯಲ್ಲಿ ನಿಂತುದುದನ್ನು ಆ ವೀರನು ಚೆನ್ನಾಗಿ ನೋಡಿದನು.

ತಂ ಶ್ಯೇನವೇಗಮಭಿತಃ ಪ್ರತಿಸಂಚರಂತಂ
ನಿಶ್ಛಿದ್ರ ಮಾಸು ಜಗೃಹೇ ಭಗವಾನ್ ಪ್ರಗೃಹ್ಯ ।

**ಕೇಶೇಷು ಜೈನಮಭಿಮೃಶ್ಯ ಶರೇಣ ವಾಮಮೇ**
**ನೋದ್ಧೃತ್ಯ ದಕ್ಷಿಣಕರೇಣ ಜಘಾನ ಕೇSಸ್ಯ ॥೧೨೮॥**

ತನ್ನೆಡೆಗೆ ಬರುತ್ತಿರುವ ಕಂಸನನ್ನು ಕಂಡು, ಶ್ರೀ ಕೃಷ್ಣನು ಗಿಡುಗ (ಶ್ಯೇನ)ನ ವೇಗದಿಂದ ಹಾರಿ ಅವನನ್ನು ಬಲವಾಗಿ ಹಿಡಿದು ತನ್ನತ್ತ ಎಳೆದು ಎಡಗೈಯಲ್ಲಿ ಅವನ ಕೇಶಗಳನ್ನು ಮುಷ್ಠಿಯಲ್ಲಿ ಗಟ್ಟಿಯಾಗಿ ಹಿಡಿದುಕೊಂಡನು. ಬಲಗೈಯಿಂದ ತಲೆಗೆ ಬಲವಾಗಿ ಹೊಡೆದನು.

**ಸಂಚಾಲಿತೇನ ಮುಕುಟೇನ ವಿಕುಂಡಲೇನ**
**ಕರ್ಣದ್ವಯೇನ ವಿಗತಾಭರಣೋರಸಾ ಚ ।**
**ಸ್ರಸ್ತಾಂಬರೇಣ ಜಘನೇನ ಸುಶೋಚ್ಯರೂಪಃ**
**ಕಂಸೋ ಬಭೂವ ನರಸಿಂಹ ಕರಾಗ್ರ ಸಂಸ್ಥಃ ॥೧೨೯॥**

ಶ್ರೀಕೃಷ್ಣನ ಹೊಡೆತದಿಂದ, ಕಂಸನ ತಲೆಯ ಮೇಲಿನ ಕಿರೀಟ ಕೆಳಗೆ ಬಿದ್ದಿತು. ಎರಡು ಕಿವಿಗಳಲ್ಲಿಯ ಕುಂಡಲಗಳು ಕಳಚಿ ಬಿದ್ದವು. ಅನೇಕ ಆಭರಣಗಳು ಚೆಲ್ಲಾಪಿಲ್ಲಿಯಾಗಿ ಅಲ್ಲಲ್ಲಿ ಚೆಲ್ಲಿದ್ದವು. ಕಟಿಯ ಮೇಲಿನ ವಸ್ತ್ರಗಳು ಸಡಿಲವಾದವು. ಇಂತಹ ಶೋಚನೀಯ ಸ್ಥಿತಿ ಕಂಸನದಾಗಿತ್ತು. ಅದನ್ನು ನೋಡಿದಾಗ ನರಸಿಂಹ ರೂಪನಾದ ಸ್ವಾಮಿಯ ಕೈಯಲ್ಲಿ ಹಿರಣ್ಯಕಶಿಪು ಸಿಕ್ಕಿದ ದೃಶ್ಯ ಕಣ್ಣಿಗೆ ಕಟ್ಟುವಂತೆ ಆಗಿತ್ತು.

ವಿ.ವಿ.: ಮೇಲಿನ ಶ್ಲೋಕದಲ್ಲಿ ವಿವರಿಸಿದ ವರ್ಣನೆಯಂತೆ ಒಬ್ಬ ಚಿತ್ರಕಾರನು, ತನ್ನ ಕುಂಚವನ್ನು ಆಡಿಸುತ್ತ ಹೋದರೆ, ಅದೊಂದು ಅಪರೂಪದ ಸುಂದರ ಚಿತ್ರವಾಗಬಹುದು. ಈ ಶ್ಲೋಕವನ್ನು ಶಬ್ದಚಿತ್ರ ಎಂದು ಕರೆದರೆ ಸತ್ಯಕ್ಕೆ ದೂರವಾಗಲಾರದು. ಇದು ಆಚಾರ್ಯರ ಶೈಲಿಯ ವೈಶಿಷ್ಟ್ಯ.

**ಉತ್ಕೃಷ್ಯ ತಂಸ ಸುರಪತಿಃ ಪರಮೋಚ್ಚಮಂಚಾ–**
**ದನ್ಯೈ ರಜೇಯಮತಿ ವೀರ್ಯಬಲೋಪ ಪನ್ನಮ್ ।**
**ಅಬ್ಜೋದ್ಭವೇಶ ವರಗುಪ್ತ ಮನಂತಶಕ್ತಿಃ**
**ಭೂಮೌ ನಿಪಾತ್ಯ ಸ ದದೌಪ್ರದಯೋಃ ಪ್ರಹಾರಮ್ ॥೧೩೦॥**

ಸುರಪತಿಯಾದ ಶ್ರೀಕೃಷ್ಣನು ಆ ಕಂಸನನ್ನು ಬಹು ಎತ್ತರವಾದ ಮಂಚಿಕೆಯಿಂದ ಕೆಳಗೆ ಒಗೆದನು. ಭೂಮಿಯ ಮೇಲೆ ಬಿದ್ದ ಕಂಸನನ್ನು ತನ್ನ ಪಾದಗಳಿಂದ ಚೆನ್ನಾಗಿ ಪ್ರಹಾರ ಮಾಡಿದನು.

ಕಂಸನಿಗೆ ದೊರೆತ ವರಬಲ, ಅಜೇಯತ್ವ, ಅವಧ್ಯತ್ವ ಮತ್ತು ಪರಾಕ್ರಮ ಎಲ್ಲವೂ ಕಮಲೋದ್ಭವನ ಪಿತನಾದ ಶ್ರೀಕೃಷ್ಣನ ಅವಯಕ್ತ, ಅನಂತ ಶಕ್ತಿಗಳ ಮುಂದೆ ತೃಣಪ್ರಾಯವಾದವು.

ಕಂಸನ ಮರಣದ ಸ್ವರೂಪ.

**ದೇಹೇ ತು ಯೋಽಭವದ ಮುಷ್ಯ ರಮೇಶ ಬಂಧು**
**ರ್ವಾಯುಃ ಸ ಕೃಷ್ಣತನುಮಾಶ್ರಯದನ್ಯ ಪಾಪಮ್ ।**
**ದೈತ್ಯಂ ಚಕರ್ಷ ಹರಿರತ್ರ ಶರೀರಸಂಸ್ಥಂ:**
**ಪಶ್ಯತ್ಸು ಕಂಜಜ ಮುಖೇಷು ಸುರೇಷ್ವನಂತ: ॥೧೩೧॥**

ರಮೇಶನ ಬಂಧು (ಭಕ್ತ)ವಾದ ವಾಯು ಕಂಸನ ದೇಹವನ್ನು ಬಿಟ್ಟು ಶ್ರೀಕೃಷ್ಣನ ದೇಹವನ್ನು ಆಶ್ರಯ ಪಡೆದನು. ಪಾಪಿಯಾದ ಕಾಲನೇಮಿಯು ತಮಸ್ಸಿಗೆ ಪೋದನೆಂದು ಬೇರೆ ಹೇಳಬೇಕೆ? ಇದನ್ನೆಲ್ಲ ಕಮಲಭವ ಮತ್ತು ಇತರ ದೇವತೆಗಳು ಕಂಡು ಸಂತೋಷಿಸಿದರು.

ಇಲ್ಲಿ 'ಜೀವದ್ವಯ ಸಿದ್ಧಾಂತ'ವನ್ನು ನಾವು ಕಾಣುತ್ತೇವೆ.

ರಮೇಶಬಂಧು – ಭೃಗುಋಷಿಗಳು + ವಾಯುದೇವರು

–(ಶ್ರೀ ಶ್ರೀ ವಾದಿರಾಜರ ಅಭಿಪ್ರಾಯ)

**ದ್ವೇಷಾತ್ಸ ಸರ್ವಜಗದೇತಗುರೋಃ ಸ್ವಕೀಯೈಃ**
**ಪೂರ್ವಂ ಪ್ರಮಾಪಿತಜನೈಃ ಸಹಿತಃ ಸಮಸ್ತೈಃ ।**
**ಧಾತ್ರ್ಯಾಗಿಭಿಃ ಪ್ರತಿಯಯೌ ಕುಮತಿಸ್ತ ಮೋಽಂಧ**
**ಮನ್ಯೇಽಪಿ ಚೈವ ಮುಪಯಾಂತಿ ಹರಾವಭಕ್ತಾಃ ॥೧೩೨॥**

ಸಕಲ ಜಗತ್ತಿಗೆ ಗುರುವಾದ ಶ್ರೀಕೃಷ್ಣನಲ್ಲಿ ದ್ವೇಷ ಮಾಡಿದ ಪ್ರಯುಕ್ತ ಕಂಸನು ಅಂಧಂತಮಸ್ಸು ಹೊಂದಿದನು. ಅವನನ್ನು ಅನುಸರಿಸಿ

ಅನುಯಾಯಿಗಳಾದ ಇತರರೆಲ್ಲರು ಅವನನ್ನೇ ಹಿಂಬಾಲಿಸಿದರು. ಅನ್ಯರು ಕೂಡ ದುರ್ಬುದ್ಧಿಯಿಂದ ಹರಿಯನ್ನು ದ್ವೇಷಿಸಿದರೆ ಅವರಿಗೂ ಇದೇ ಗತಿ ನಿಶ್ಚಿತ.

**ನಿತ್ಯಾತಿ ದು:ಖಮನಿವೃತ್ತಿ ಸುಖವ್ಯಪೇತ-**
**ಮಂಧಂತಮೋ ನಿಯತಮೇತಿ ಹರಾವಭಕ್ತ: ।**
**ಭಕ್ತೋಽಪಿ ಕಂಜಜ ಗಿರೀಶ ಮುಖೇಷು ಸರ್ವ**
**ಧರ್ಮಾರ್ಣವೋಽಪಿ ನಿಖಿಲಾಗಮನಿರ್ಣಯೋನ ॥೧೩೩॥**

ಕಮಲಭವ ಮತ್ತು ಗಿರೀಶರಲ್ಲಿ ಭಕ್ತಿಯುಳ್ಳವರಾಗಿ, ಸರ್ವಧರ್ಮಗಳನ್ನು ಆಚರಿಸಿಯೂ ಶ್ರೀಹರಿಯಲ್ಲಿ ದ್ವೇಷವನ್ನು ಮಾಡಿದರೆ ಅವನಿಗೆ ದುಃಖದಿಂದ ನಿವೃತ್ತಿಯಿಲ್ಲ. ನಿತ್ಯಾನಂದ ಸುಖ ದೊರೆಯದು. ಪರಿಣಾಮ ಅವರಿಗೆ ಅಂಧಂತಮಸ್ಸೇ ನಿಶ್ಚಯ. ಇದು ಸಚ್ಛಾಸ್ತ್ರಗಳ ನಿರ್ಣಯ.

**ಯೋ ವೇತ್ತಿ ನಿಶ್ಚಿತಮತಿರ್ಹರಿಮಬ್ಜಜೇಶ-**
**ಪೂರ್ವಾಖಿಲಸ್ಯ ಜಗತ: ಸಕಲೇಽಪಿ ಕಾಲೇ ।**
**ಸೃಷ್ಟಿ ಸ್ಥಿತಿ-ಪ್ರಲಯಮೋಕ್ಷದಮಾತ್ಮತಂತ್ರಂ**
**ಲಕ್ಷ್ಮ್ಯಾ ಅಪೀಶಮತಿಭಕ್ತಿಯುತ: ಸ ಮುಚ್ಯೇತ್ ॥೧೩೪॥**

ಸೃಷ್ಟಿ-ಸ್ಥಿತಿ-ಲಯ ಕರ್ತೃಗಳಿಗೆ ಪ್ರೇರಕಳಾಗಿ ಶಕ್ತಿದಾತಳಾಗಿ ಸರ್ವತಂತ್ರ ಸ್ವತಂತ್ರಳಾಗಿ ಇರುವವಳು ಲಕ್ಷ್ಮೀದೇವಿ. ಅಂತಹ ಲಕ್ಷ್ಮೀದೇವಿಯರನ್ನು ನಿಯಮಿಸತಕ್ಕಂಥ ಶ್ರೀಹರಿಯನ್ನು ಆತನ ಮಹಿಮೆಯನ್ನು ನಿಶ್ಚಿತಜ್ಞಾನದಿಂದ ಯಾವ ಭಕ್ತನು ಅರಿಯುವನೋ ಅವನೇ ಮುಕ್ತಿ ಪಡೆಯುತ್ತಾನೆ.

ವಿ.ವಿ. ಪ್ರತಿಯೊಬ್ಬ ದೇವತೆಯ ಇತಿಮಿತಿಗಳನ್ನು ಅರಿತು ಸರ್ವೋತ್ತಮನಲ್ಲಿ ಭಕ್ತಿ ಮಾಡುವುದೇ ಶ್ರೇಯಸ್ಕರ. ಅದುವೇ ಮುಕ್ತಿಗೆ ದಾರಿ. ಅದನ್ನೇ 'ತಾರತಮ್ಯ' ಎಂದು ಕರೆದರು.

**ತಸ್ಮಾದನಂತಗುಣಪೂರ್ಣಮಮುಂ ರಮೇಶಂ**
**ನಿಶ್ಚಿತ್ಯ ದೋಷರಹಿತಂ ಪರಯೈವ ಭಕ್ತ್ಯಾ ।**

**ವಿಜ್ಞಾಯ ದೈವತಗಣಾಂಶ್ಚ ಯಥಾಕ್ರಮೇಣ**
**ಭಕ್ತ್ಯಾ ಹರೇರಿತಿ ಸದೈವ ಭಜೇತ ಧೀರ: ॥೧೩೫॥**

ಅದಕ್ಕಾಗಿ ಅನಂತಗುಣಪೂರ್ಣನು, ರಮೆಯ ಅರಸನು, ದೋಷರಹಿತನು, ಪರಮಶ್ರೇಷ್ಠನು ಆದ ಶ್ರೀಹರಿಯನ್ನೇ ಸರ್ವೋತ್ತಮನೆಂದು ನಿಶ್ಚಯಿಸಿ ಯಾವನು ಭಕ್ತಿ ಮಾಡುವನೋ ಅವನೇ ಧೀರನು. ಇತರ ದೇವತೆಗಳಲ್ಲೂ ಅವರವರ ಕ್ರಮಗಳನ್ನು ಅನುಸರಿಸಿ, ಅವರ ಅಂತರ್ಗತನಾದ ಶ್ರೀಹರಿಯನ್ನೇ ಭಜಿಸಬೇಕು.

ವಿ.ವಿ. ಈ ತಾರತಮ್ಯ ಮುಕ್ತಿಯಲ್ಲೂ ತಪ್ಪಿದ್ದಲ್ಲ.

**ನಿಹತ್ಯ ಕಂಸ ಮೋಜನಾ ವಿಧಾತೃ ಶಂಭು ಪೂರ್ವಕೈ: ।**
**ಸ್ತುತ: ಪ್ರಸೂನ ವರ್ಷಭಿರ್ಮುಮೋದ**
**ಕೇಶವೋಽಧಿತಮ್ ॥೧೩೬॥**

ಕಂಸನ ನಿಹತ್ಯದ ನಂತರ, ಬ್ರಹ್ಮರುದ್ರಾದಿ ದೇವತೆಗಳು ಆನಂದದಿಂದ ಸ್ತುತಿಸಿದರು. ಇತರ ದೇವತೆಗಳು ಹರ್ಷಗೊಂಡು ಕುಸುಮಗಳ ವರ್ಷವನ್ನೇಗೈದರು. ಶ್ರೀಕೃಷ್ಣನಿಗೂ ಆನಂದವಾಯಿತು.

**ಸದೈವ ಮೋದರೂಪಿಣೋ ಮುದೋಕ್ತಿರಸ್ಯ ಲೌಕಿಕೀ ।**
**ಯಥೋದಯೋರವೇರ್ಭವೇತ್ಸದೋದಿ ತಸ್ಯ ಲೋಕತ: ॥೧೩೭॥**

ಮೇಲಿನ ಶ್ಲೋಕದಲ್ಲಿ ಶ್ರೀಕೃಷ್ಣನಿಗೂ ಆನಂದವಾಯಿತು ಎಂದು ಹೇಳಲಾಗಿದೆ. ಏಕೆ? ಸದಾ ಆನಂದ ಪರಿಪೂರ್ಣನಾದವನಿಗೆ ಅಧಿಕ ಆನಂದ ಎಂದರೆ ಏನರ್ಥ? ಎಂಬ ಶಂಕೆಗೆ 'ಲೌಕಿಕ' ಎಂಬ ಶಬ್ದದಿಂದ ಸಂಶಯ ಪರಿಹಾರ ಮಾಡಿದ್ದಾರೆ. 'ಲೌಕಿಕ ದೃಷ್ಟಿಯಿಂದ ಮಾತ್ರ' ಎಂದು ಮುಂದೆ ಉದಾಹರಣೆಯಿತ್ತು ಸೂರ್ಯನು ಸದಾಕಾಲದಲ್ಲಿದ್ದರೂ ಲೋಕದ ಕಣ್ಣಿಗೆ ಬಿದ್ದಾಗ ಮಾತ್ರ ಉದಯಿಸಿದನು ಎಂದು ಭಾವಿಸುವುದಿಲ್ಲವೇ. ದುಷ್ಟರ ನಾಶದಿಂದ ತನ್ನ ಕಾರ್ಯ ಪೂರ್ಣವಾಯಿತು ಎಂದು ಆನಂದಿಸಿದನು ಎಂದು ಹೇಳಬಹುದು.

**ಅನಂತ ಚಿತ್ಸುಖಾರ್ಣವ: ಸದೋದಿತೈಕ ರೂಪಕ: ।**
**ಸಮಸ್ತ ದೋಷವರ್ಜಿತೋ ಹರಿರ್ಗುಣಾತ್ಮಕ: ಸದಾ ॥೧೩೮॥**

ಅನಂತ ಚಿತ್ಸುಖಗಳಿಗೆ ಸಾಗರನು, ಸದಾವ್ಯಕ್ತನಾಗುವವನು, ಸಕಲ ದೋಷಗಳಿಂದ ವರ್ಜಿತನು, ಗುಣಪೂರ್ಣನಾದ ಆತ್ಮನು ಇಂತಹ ಶ್ರೀಹರಿಯನ್ನು ನಿಶ್ಚಿತಜ್ಞಾನ ಮತ್ತು ಅನನ್ಯ ಭಕ್ತಿಯಿಂದ ಸ್ಮರಿಸಬೇಕು.

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯೇ ಕಂಸವಧೋ ನಾಮ ತ್ರಯೋದಶೋಽಧ್ಯಾಯ: ।**

ಇಲ್ಲಿಗೆ ಶ್ರೀಮದಾನಂದತೀರ್ಥರಿಂದ ರಚಿತವಾದ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದಲ್ಲಿ 'ಕಂಸವಧೆ' ಎನ್ನುವ ಹದಿಮೂರನೆಯ ಅಧ್ಯಾಯ ಮುಗಿಯಿತು. ಇದನ್ನು ಶ್ರೀಕೃಷ್ಣನು ಸ್ವೀಕರಿಸಿ ಸಂತೃಪ್ತನಾಗಲಿ. ಕೃಷ್ಣಾರ್ಪಣಮಸ್ತು.

**ಮಧ್ವೇಶಾರ್ಪಣ ಮಸ್ತು.**

---0---

# ಹದಿಮೂರನೆಯ ಅಧ್ಯಾಯದ ಚಿಂತನೆ

ಶ್ರೀಮದಾಚಾರ್ಯರು ಹಿಂದಿನ ಅಧ್ಯಾಯದಲ್ಲಿ ಶ್ರೀಕೃಷ್ಣನ ಶೈಶವ ಮತ್ತು ಬಾಲ್ಯಾವಸ್ಥೆಗಳ ಲೀಲೆಗಳನ್ನು ಬಣ್ಣಿಸಿದ್ದಾರೆ. ಪ್ರತಿಯೊಂದು ಲೀಲೆಯಲ್ಲೂ ಅದು ಕೇವಲ ಲೀಲೆಯಲ್ಲ. ಅದರ ಹಿನ್ನೆಲೆಯಲ್ಲಿ ಒಂದು ಉದ್ದೇಶ ಮತ್ತು ತತ್ತ್ವ ಅಡಗಿದೆಯೆಂಬುದನ್ನು ನಾವು ಮರೆಯಬಾರದು. ಇಂದು ಈ ಅಧ್ಯಾಯದಲ್ಲಿ ಅದನ್ನೇ ಮುಂದುವರಿಸುತ್ತ ಶ್ರೀಕೃಷ್ಣನ ಕಿಶೋರಾವಸ್ಥೆಯ ಲೀಲೆಗಳನ್ನು ವಿವರಿಸಿದ್ದಾರೆ. ಅದರ ಹಿನ್ನೆಲೆಗಳನ್ನು ಕುರಿತು ಚಿಂತನೆ ಮಾಡೋಣ. (ಲೇಖಕ)

ಗರ್ಗಾಚಾರ್ಯರು ಬಂದು ಶ್ರೀಕೃಷ್ಣನಿಗೆ ನಾಮಕರಣ – ಸಂಸ್ಕಾರ ಮಾಡಿದರು. ಕ್ಷತ್ರಿಯರಿಗೆ ಯೋಗ್ಯ ರೀತಿಯಲ್ಲಿ ಸಂಸ್ಕಾರವಾಗಬೇಕಾಗಿದೆ. ನಂದ ಮತ್ತು ಯಶೋದೆಯರು ಕ್ಷತ್ರಿಯರಲ್ಲ. ಆದರೆ ಬೆಳೆದದ್ದು ಮಾತ್ರ ಇಲ್ಲಿ. ಅದಕ್ಕಾಗಿ ಆಚಾರ್ಯರು ನಂದಕಂದ ಅಥವಾ ಯಶೋದನಂದನ ಎಂದು ಹೇಳಿಲ್ಲ. ರೋಹಿಣಿಸುತನೆಂದೇ ಪ್ರತಿಪಾದಿಸಿದ್ದಾರೆ. ವರ್ಣಾಶ್ರಮಧರ್ಮಗಳ ಕಡೆಗೆ ಪೂರ್ಣ ಗಮನವಿತ್ತಿದ್ದಾರೆ. ಗರ್ಗಾಚಾರ್ಯರು ನಂದನನ್ನು ಕುರಿತು ಈ ಮಗುವಿನಲ್ಲಿ (ಶ್ರೀಕೃಷ್ಣ) ನಾರಾಯಣನ ಎಲ್ಲ ಲಕ್ಷಣಗಳಿವೆ ಎಂದು ಸೂಚಿಸಿದ್ದಾರೆ. 'ಅವತಾರಗಳಲ್ಲಿ ಭೇದವಿಲ್ಲ' ಎಂಬ ತತ್ತ್ವವನ್ನು ಸೂಚಿಸಿ ಶ್ರೀಕೃಷ್ಣನು ತಮ್ಮ ಮಗನೆಂದು ನಂಬಿದ ತಂದೆತಾಯಿಗಳ ಭ್ರಮೆಯನ್ನೂ ಕಳೆದಿದ್ದಾರೆ.

ಶ್ರೀಕೃಷ್ಣನು ಮೃತ್ತಿಕೆಯನ್ನು ತಿಂದಂತೆ ನಟಿಸಿ ತಾಯಿಗೆ ಬಾಯಿಯಲ್ಲಿ ಬ್ರಹ್ಮಾಂಡ, ಮಹತ್ತತ್ತ್ವ ಅವುಗಳ ವಿಕೃತ ರೂಪ ಅಲ್ಲದೆ ಸಮಸ್ತ ಲೋಕಗಳನ್ನೂ ಚೇತನಾಚೇತನಾ ಪದಾರ್ಥಗಳನ್ನೂ ತೋರಿಸಿ ತಾನು ಸಾಮಾನ್ಯ ಮಗುವಲ್ಲ ಎಂಬುದನ್ನು ತಾಯಿಗೆ ಮನವರಿಕೆ ಮಾಡಿಕೊಟ್ಟಿದ್ದಾನೆ. ಅದನ್ನು ತಿಳಿಯುವ ಯೋಗ್ಯತೆ ತಾಯಿಯಲ್ಲಿರಲಿಲ್ಲ. ಕಾರಣ ಆಕೆ ಮರೆತು ಬಿಟ್ಟಳು. ಮಗನೆಂದೇ ಭಾವಿಸಿದಳು.

ಹಾಲು ಉಕ್ಕಿಸಿ ತೋರಿಸಿದ ಘಟನೆಯಿಂದ ಶ್ರೀಕೃಷ್ಣನಿಗಿಂತಲೂ ಆಕೆಗೆ ಹಾಲಿನ ಮೇಲೆಯೇ ಅಧಿಕ ಪ್ರೀತಿಯಿದ್ದಿತು ಎಂಬುದನ್ನು ತೋರಿದ್ದಾನೆ. 'ಎಲ್ಲ ವಸ್ತುಗಳಿಗಿಂತಲೂ ಅಧಿಕ ಪ್ರೇಮ ಭಗವಂತನಲ್ಲಿ ತೋರಿದಾಗ

ಮಾತ್ರ ಆತನು ಲಭ್ಯ' ಎಂಬ ಭಾವನೆಯನ್ನು ಈ ಘಟನೆಯಿಂದ ವ್ಯಕ್ತಪಡಿಸಿದ್ದಾನೆ.

ಗೊಲ್ಲರ ಧರ್ಮದ ನಡೆನುಡಿಗಳನ್ನು ಆಚರಿಸಿ, ಅದಕ್ಕೆ ತಕ್ಕಂತೆ ಆಟಪಾಟಗಳನ್ನಾಡಿ ಸ್ವಧರ್ಮವು ಶ್ರೇಷ್ಠವಾದದ್ದು ಪರಧರ್ಮವು ಆಚರಣೆಗೆ ಸರಿಯಲ್ಲ ಎಂಬುದನ್ನು ತೋರಿದ್ದಾನೆ. ಜೊತೆಯಲ್ಲಿ ತಾನು ಭೂಲೋಕದಲ್ಲಿ ಅವತರಿಸಿದ ಕಾರಣ 'ಮರ್ತ್ಯಸ್ಯ ಮರ್ತ್ಯ ಶಿಕ್ಷಣಂ' ಎಂಬುದನ್ನು ತನ್ನ ದಿನನಿತ್ಯದ ಜೀವನದಿಂದ ತೋರಿದ್ದಾನೆ.

ತಾಯಿಯು ಮಗನನ್ನು ಬಂಧಿಸಲು ಯತ್ನಿಸುತ್ತಾಳೆ. ನಾನು ಬಂಧನದಿಂದ ಮುಕ್ತ. ನನ್ನನ್ನು ಯಾರೂ ಬಂಧಿಸುವಂತಿಲ್ಲ ಎಂಬುದನ್ನು ತೋರಿದ್ದಾನೆ. ತಾಯಿಯು ಓಡುತ್ತ ಬಂದ ಶ್ರಮವನ್ನರಿತು ಭಕ್ತವತ್ಸಲನಾಗಿ ಆಕೆಯ ಕೈಗೆ ಸಿಕ್ಕಿದ್ದಾನೆ. ಪ್ರೇಮ ಮತ್ತು ಭಕ್ತಿಯ ಪಾಶದಿಂದ ಮಾತ್ರ ಬಂಧಿಸಲು ಸಾಧ್ಯವೆಂಬುದನ್ನು ತೋರಿದ್ದಾನೆ.

ಮೊದಲು ಮನೆಯಲ್ಲಿಯ ಎಲ್ಲ ಹಗ್ಗಗಳನ್ನು ಕೂಡಿಸಿದರೂ ಕಟ್ಟಲು ಸಾಕಾಗಲಿಲ್ಲ. 'ವಿಶ್ವಂಭರನಾದ ಶ್ರೀಹರಿ ಬಂಧನಕ್ಕೆ ಯೋಗ್ಯನಲ್ಲ' ಎಂಬುದನ್ನು ತೋರಿ, ಕೊನೆಗೆ ತಾಯಿಗೆ ಅನುಗ್ರಹಿಸಿ, ಕೇವಲ ಕರುವಿನ ಒಂದು ಹಗ್ಗದಿಂದ ಕಟ್ಟಿಸಿಕೊಂಡಿದ್ದಾನೆ. ಇಲ್ಲಿ ಪರಮಾತ್ಮನು 'ಅಣು' ಮತ್ತು 'ಮಹತ್' ಎರಡು ಶಕ್ತಿಗಳುಳ್ಳವನು ಎಂದು ನಿದರ್ಶಿಸಿದ್ದಾನೆ.

ಮರಗಳನ್ನು ಆಶ್ರಯಿಸಿದ ಧುನಿ ಮತ್ತು ಚಮೂ ದೈತ್ಯರ ಶಾಪ - ನಳ - ಕೂಬರರಿಗೆ ಮಣಿಗ್ರೀವ ಶಾಪವಿಮೋಚನೆ. ಇದರ ಹಿನ್ನೆಲೆ ಹಿರಿಯರಿಗೆ ಅವಮಾನ ಮಾಡಬಾರದು. ದೊಡ್ಡವರ ಮಾತೇ ಶಾಪವಾಗಿ ಪರಿಣಮಿಸುತ್ತದೆ.

ಗೋಕುಲದಿಂದ ವೃಂದಾವನಕ್ಕೆ ಸ್ಥಳಾಂತರ. ಜನರಿಗೆ, ಸಮಾಜಕ್ಕೆ ತೊಂದರೆಯಾಗದಿರಲಿ ಎಂಬುದೇ ಉದ್ದೇಶ.

ವತ್ಸಾಸುರ - ಬಕಾಸುರನ ಅಂತ್ಯ.

ಗೋಪಾಲಕನಾಗಿ ಊರ ಹೊರಗೆ ಸಂಚರಿಸುವುದು. ಆಗ ಶ್ರೀಕೃಷ್ಣನಿಗೆ ಕೇವಲ ಆರುವರ್ಷ ಮಾತ್ರ. ಯಮುನಾ ನದಿಯಲ್ಲಿ ಕಾಳಿಂಗನ ವಧೆ, ಜಲಮಾಲಿನ್ಯ ಸರಿಪಡಿಸಿ, ನೀರನ್ನು ವಿಷದಿಂದ ದೂರೀಕರಿಸಿ, ಸಮಾಜಕ್ಕೂ ದನಕರುಗಳಿಗೂ ಮಾಡಿದ ಉಪಕಾರ. ನಾಗಪತ್ನಿಯರಿಂದ ಪ್ರಾರ್ಥಿತನಾಗಿ

ನಾಗನಿಗೆ ಜೀವದಾನ. ನಾಗನ ಫಣೆಯಲ್ಲಿ ಶ್ರೀಕೃಷ್ಣನ ನೃತ್ಯ. ಈ ನೃತ್ಯ ಕೇವಲ ನೃತ್ಯವಾಗಿರಲಿಲ್ಲ. ಭೃತ್ಯನಾದ ನಾಗನಿಗೆ ಗರುಡನ ಭಯದಿಂದ ಮುಕ್ತಿ ದೊರೆಯಿತು. ಕಾಡ್ಗಿಚ್ಚನ್ನು ನಾಶಮಾಡಿ ಗೋಕುಲದ ಜನರನ್ನು ರಕ್ಷಿಸಿದ್ದಾನೆ. ಅಗ್ನಿಯೇ ಪರಮಾತ್ಮನ ಮುಖದಿಂದ ಉದ್ಭವಪಾದದ್ದು. ಅಗ್ನಿಯನ್ನು ಪರಮಾತ್ಮನು ಪಾನ ಮಾಡುವುದು ಅಚ್ಚರಿಯೆ?

ಉಗ್ರಾಸುರನ ಹತ್ಯೆ. ವಿಷಾರಿಯಾದ ಗಿಡರೂಪದಿಂದ ಬೆಳೆದಿದ 'ಇಂದಿನ ಪಾರ್ಥೇನಿಯಂ'ನಂತೆ ಅದರ ಗಾಳಿಯಿಂದಲೇ ಜನರು ಸಾವಿಗೀಡಾಗುತ್ತಿದ್ದರು. ಶ್ರೀಕೃಷ್ಣನು ಆ ಗಿಡಗಳನ್ನೇ ನಾಶಮಾಡಿ ಅರ್ಥಾತ್ ಅದರಲ್ಲಡಗಿಸಿದ ದೈತ್ಯನನ್ನು ಕೊಂದು ಸಮಾಜಕ್ಕೆ ಆರೋಗ್ಯವಿತ್ತು ಕಾಪಾಡಿದನು. ದೈತ್ಯನ ಭಯದಿಂದ ಮುಕ್ತರನ್ನಾಗಿ ಮಾಡಿದನು.

ನೀಲಾದೇವಿಯ ನೆಪದಿಂದ ಗೂಳಿಗಳನ್ನು ಕೊಂದು ಅಂತರ್ಗತ ದೈತ್ಯರನ್ನು ನಾಶಮಾಡಿದ್ದು, ನೀಲಾದೇವಿಯನ್ನು ವರಿಸಿದ್ದು, ಆಕೆಯ ತಪಫಲಪ್ರದ ಗೂಳಿಗಳನ್ನು ಒಂದೇ ಹಗ್ಗದಿಂದ ಕಟ್ಟುವುದು, ಬಲಪ್ರದಪವಾದ ಆಟ ಆಗಿದ್ದರೂ ಅದರ ಮುಖ್ಯ ಉದ್ದೇಶ ದೈತ್ಯರ ನಾಶ ಮತ್ತು ನೀಲಾದೇವಿಗೆ ಅನುಗ್ರಹ.

'ಪ್ರಲಂಬ' ದೈತ್ಯನನ್ನು ಗೊಲ್ಲನ ರೂಪದಲ್ಲಿ ತಮ್ಮ ಗುಂಪಿಗೆ ಸೇರಿಸಿಕೊಂಡು ಆಟದ ನಿಮಿತ್ತ ಮಾಡಿ ಬಲರಾಮನಿಂದ ಅವನ ವಧೆ.

ವಿಪ್ರರ ಯಜ್ಞಪ್ರಸಂಗದಿಂದ ಜ್ಞಾನವಿಲ್ಲದ ಆಚರಣೆ ಮೂಢನಂಬಿಕೆಯಾಗಬಹುದು. ವಿಪ್ರರು ಶಾಸ್ತ್ರಗಳನ್ನು ಸಾಕಷ್ಟು ಅಭ್ಯಾಸ ಮಾಡಿದ್ದರೂ, ಭಗವಂತನ ಬಗೆಗೆ ನಿಜವಾದ ಜ್ಞಾನ ಇರಲಿಲ್ಲ.

ವಿಪ್ರಪತ್ನಿಯರು ಓದಿದವರಲ್ಲದಿದ್ದರೂ, ಭಗವಂತನಲ್ಲಿ ನಿಶ್ಚಲ ಭಕ್ತಿ ಮಾಡಿ ಆತನ ಅನುಗ್ರಹಕ್ಕೆ ಪಾತ್ರರಾದರು. ವಿಪ್ರರಿಗೆ ನಂತರ ಪಶ್ಚಾತ್ತಾಪ. ಆದರೆ ಉಪಯೋಗವಾಗಲಿಲ್ಲ. ಸಮಯ ಮೀರಿತ್ತು.

ಇಂದ್ರನ ಗರ್ವಭಂಗ, ಇಂದ್ರನು ಅಜ್ಞಾನಕ್ಕೊಳಗಾಗಿ, ಆವೇಶದಿಂದ ಆವರಿಸಿ ಕೃಷ್ಣನನ್ನು ಮಾನವ, ಗೊಲ್ಲನೆಂದೇ ಬಗೆದಿದ್ದನು. ತಾನು ಸುರಲೋಕದ ಒಡೆಯನೆಂದು ಗರ್ವಿಸಿದ್ದನು. ಕೃಷ್ಣನು ಅವನಿಗೆ ಪಾಠ ಕಲಿಸಲು ಅವನ ಪೂಜೆ ನಿಲ್ಲಿಸಿದನು.

'ಕಾಣದ ಇಂದ್ರನಿಗೆ ಏಕೆ ಪೂಜೆ?' ಕಣ್ಣಿಗೆ ಕಾಣುವ ಗುಡ್ಡ, ಜನ, ದನಗಳಿಗೆ ಅನ್ನ ನೀರುಗಳನ್ನು ಕೊಡುವ ಗುಡ್ಡ ಅದಕ್ಕೆ ನಾವು ಪೂಜಿಸೋಣ. ಇದು ಅಪಾತತಃ. ಮೇಲುನೋಟಕ್ಕೆ ನಾಸ್ತಿಕವಾದದಂತೆ ಕಂಡರೂ, ಆಂತರ್ಯದಲ್ಲಿ ನದ, ನದಿಗಳಲ್ಲಿ ದಿನ್ನೆ-ಬೆಟ್ಟಗಳಲ್ಲಿ ಪರಮಾತ್ಮನ ಅಂಶವಿದೆ. ಅಲ್ಲಲ್ಲಿ ತತ್ವಾಭಿಮಾನಿಗಳಾದ ದೇವತೆಗಳು ವಾಸಿಸಿರುತ್ತಾರೆ ಎಂಬ ನಿತ್ಯಸತ್ಯವನ್ನು ಕೃಷ್ಣ ಜಗತ್ತಿಗೆ ತೋರಿದ್ದಾನೆ.

ಇಂದ್ರನ ಆಜ್ಞೆಯಿಂದ ಮೋಡಗಳು ಭಯಂಕರವಾದ ಮಳೆಯನ್ನು ಸುರಿಸಿದಾಗ ಗುಡ್ಡವನ್ನೇ ಎತ್ತಿ ಅಘಟನಾಶಕ್ತಿಯನ್ನು ಪ್ರದರ್ಶಿಸಿ ಗೋಪಾಲಕರನ್ನು, ಗೋವುಗಳನ್ನು, ಗೋಕುಲವನ್ನು ರಕ್ಷಿಸಿದ್ದಾನೆ. ಜೊತೆಗೆ ಗೋವಿಂದನೆಂಬ ಹೆಸರಿನಿಂದ ಕೀರ್ತಿಯನ್ನೂ ಪಡೆದಿದ್ದಾನೆ.

ಇಂದ್ರನು ಪಶ್ಚಾತ್ತಾಪದಿಂದ ಕ್ಷಮೆಯನ್ನು ಯಾಚಿಸಿದ್ದಾನೆ. ಕೃಷ್ಣನ ಕ್ಷಮೆ ಮತ್ತು ಅನುಗ್ರಹಕ್ಕೆ ಪಾತ್ರನಾಗಿದ್ದಾನೆ.

ಪರಮಾತ್ಮನನ್ನು ಸೋಲಿಸಲು ಯಾರಿಂದಲೂ, ಯಾವ ರೀತಿಯಿಂದಲೂ ಸಾಧ್ಯವಿಲ್ಲ. ಅಂತೆಯೇ ಅತನು ಸರ್ವೋತ್ತಮನು.

ಕಾತ್ಯಾಯನೀ ವ್ರತದಲ್ಲಿ ಶ್ರೀಕೃಷ್ಣನು ಅವರ ಭಕ್ತಿಯನ್ನು ಪರೀಕ್ಷಿಸಿದ್ದಾನೆ. ನಗ್ನ ಸ್ನಾನ ನಿಷಿದ್ಧ, ವ್ರತಗಳಿಗಂತೂ ಉಪಯೋಗವಿಲ್ಲ ಎಂಬುದನ್ನು ತೋರಿಸಿದ್ದಾನೆ. ಜೊತೆಯಲ್ಲಿ 'ದೇಹಾಭಿಮಾನ ಬಿಟ್ಟಲ್ಲದೆ ಭಗವಂತನ ಅನುಗ್ರಹವಾಗಲಿ, ದರ್ಶನವಾಗಲಿ ಅಶಕ್ಯ' ಎಂಬ ಶ್ರೇಷ್ಠ ತತ್ವವನ್ನು ವ್ಯಕ್ತ ಮಾಡಿದ್ದಾನೆ.

ಗೋಪಿಕೆಯರನ್ನು ಅಪಹರಿಸಲು ಬಂದ 'ಶಂಖಚೂಡ' ಎಂಬ ದೈತ್ಯನ ನಾಶ. ಸ್ತ್ರೀಯರನ್ನು ರಕ್ಷಿಸುವುದೇ ಭಾರತೀಯರ ಶ್ರೇಷ್ಠ ಸಂಸ್ಕೃತಿ. ಅದನ್ನೇ ಅಂದು ಕೃಷ್ಣನು ಆಟದಲ್ಲಿ ಪ್ರಕಟ ಮಾಡಿದ್ದಾನೆ. ಅರಿಷ್ಟ ಗೂಳಿರೂಪದಿಂದ ಬಂದು ನಾಶಹೊಂದಿದನು. ಕೇಶಿಯೆಂಬುವನು ಕುದುರೆ ರೂಪದಿಂದ ಬಂದು ಸತ್ತನು. ವ್ಯೋಮಾಸುರನ ಸಂಹಾರ.

ಹೀಗೆ ಶ್ರೀಕೃಷ್ಣನು ಅನೇಕ ರಾಕ್ಷಸರನ್ನು ಆಟಗಳನ್ನು ಆಡುತ್ತಲೇ ಕೊಂದಿದ್ದಾನೆ. ದೈತ್ಯರ ಸಂಹಾರವೆಂದರೆ ಪರಮಾತ್ಮನಿಗೆ ಒಂದು ಲೀಲೆಯೇ ಸೈ. ಅದಕ್ಕೆ ಪ್ರಯತ್ನ ಪಡಬೇಕಾಗಿಲ್ಲ. ಆಯಾಸವಂತೂ ಇಲ್ಲ ಎಂದು ತೋರಿಸಿಕೊಟ್ಟಿದ್ದಾನೆ.

ಪರಮಾತ್ಮನ ಕಾರ್ಯ ಪೂರ್ತಿಯಾಗಲೇಂದೇ ನಾರದರು ಶ್ರೀಕೃಷ್ಣ, ವಸುದೇವ-ದೇವಕಿಯರ ವಿರುದ್ಧ ದ್ವೇಷಭಾವನೆಗಳು ಹುಟ್ಟುವಂತೆ ಕಂಸನಿಗೆ ಬೋಧಿಸಿದರು. ಇದನ್ನು ನಂಬಿದ ಕಂಸನು, ಶ್ರೀಕೃಷ್ಣ ಬಲರಾಮರನ್ನು ಬಿಲ್ಲುಹಬ್ಬಕ್ಕಾಗಿ ಮಥುರಾಪಟ್ಟಣಕ್ಕೆ ಕರೆಸಿದನು. ಅವರನ್ನು ಕೊಲ್ಲುವುದೇ ಅವನ ಉದ್ದೇಶವಾಗಿತ್ತು. ಅದಕ್ಕಾಗಿ ರಥದಲ್ಲಿ ಕರೆತರಲು ಅಕ್ರೂರನಿಗೆ ಕೊಟ್ಟು ಕಳಿಸಿದನು.

ಅಕ್ರೂರನ ಭಕ್ತಿ, ಕೃಷ್ಣನ ಪ್ರೀತಿ ಇವುಗಳನ್ನು ಇಲ್ಲಿ ಬಹು ಚೆನ್ನಾಗಿ ವರ್ಣಿಸಲಾಗಿದೆ. ಅಘಮರ್ಷಣ ಮಂತ್ರದ ಮಹತ್ವವೂ ತಿಳಿಸಲಾಗಿದೆ. ನದಿಯ ಜಲದಲ್ಲಿಯೇ ಪರಮಾತ್ಮನ ದರ್ಶನ ಯಾರಿಗೂ ಸಾಧ್ಯವಿಲ್ಲ. ಅಕ್ರೂರನು ಮಾತ್ರ ಪಡೆದಿದ್ದಾನೆ.

ಮಥುರಾಪಟ್ಟಣಕ್ಕೆ ಬಂದಾಗಲೂ ದುಷ್ಟರನ್ನು ಶಿಕ್ಷಿಸಿದ್ದಾನೆ. ಶಿಷ್ಟರಿಗೆ ಅನುಗ್ರಹಿಸಿದ್ದಾನೆ.

ಶ್ರೀಕೃಷ್ಣನನ್ನು ಸ್ತುತಿಸುವಲ್ಲಿ ಶ್ರೀಮದಾಚಾರ್ಯರು ಪಾಂಡಿತ್ಯ ಪೂರ್ಣವಾಗಿ ಭಕ್ತಿಯ ಪರಾಕಾಷ್ಠತೆಯನ್ನು ವ್ಯಕ್ತ ಮಾಡಿದ್ದಾರೆ.

ಶ್ರೀಕೃಷ್ಣನು ಮಥುರೆಗೆ ಬಂದವನೇ ಕಂಸನ ಆಯುಧಾಗಾರದಲ್ಲಿದ್ದ ಬಿಲ್ಲನ್ನು ಮುರಿದು ಹಾಕಿದನು. ಅದರಿಂದ ಕಂಸನ ಬಲವೇ ಮುರಿದಂತಾಗಿತ್ತು. ಅದೇ ಬಿಲ್ಲಿನ ತುಂಡುಗಳಿಂದಲೇ ಅನೇಕ ದುಷ್ಟರ ವಧೆಯಾಯಿತು.

ಮುಂದೆ ನಾಗರಂಗಸ್ಥಳದ ರಚನೆ, 'ಕುವಲಯಾಪೀಡ' ಆನೆಯನ್ನು ದ್ವಾರದಲ್ಲಿ ನಿಲ್ಲಿಸುವುದು, ಚಾಣೂರ - ಮುಷ್ಟಿಕ ಮಲ್ಲರ ಸಿದ್ಧತೆ, ಎಲ್ಲವೂ ವ್ಯವಸ್ಥಿಗೊಂಡಿದ್ದವು. ಶ್ರೀಕೃಷ್ಣನು ಎಲ್ಲರನ್ನು ದಾರಿಯಲ್ಲಿಯೇ ನಾಶಮಾಡಿ, ರಂಗಕ್ಕೆ ಬಂದು ನಿಂತಿದ್ದಾನೆ.

ಶ್ರೀಕೃಷ್ಣನ ದರ್ಶನದಿಂದ ಕೆಲವರಿಗೆ ಆನಂದವಾದರೆ, ಕೆಲವರಿಗೆ ದುಃಖ. ಶ್ರೀಮದಾಚಾರ್ಯರು ಇದಕ್ಕೆ ಕಮಲ, ಕುಮುದ ಮತ್ತು ಸೂರ್ಯ ಇವುಗಳನ್ನು ಬಳಸಿ ಸುಂದರವಾದ ಉಪಮೆಯನ್ನಿತ್ತಿದ್ದಾರೆ. ಇದು ಪೂರ್ಣೋಪಮೆ ಎಂದರೆ ತಪ್ಪಾಗಲಿಕ್ಕಿಲ್ಲ. ಆಚಾರ್ಯರ ಲೇಖನಿಗೆ ಇದು ಸಹಜವೇ ಸೈ.

ಸಭೆಯ ಮಧ್ಯದಲ್ಲಿ ಇಂದ್ರನ ರಥದ ಆಗಮನ. ಅದನ್ನು ಸ್ವೀಕರಿಸಿ, ಶ್ರೀಕೃಷ್ಣನು ಕಂಸನೊಡನೆ ಹೋರಾಡುತ್ತಾನೆ. ಅವನ ಅನೇಕ ಬಂಧುಗಳು ಬಡಳಷ್ಟು ಸೈನ್ಯವು ನಾಶವಾಗುತ್ತದೆ. ಕೊನೆಗೆ ಕಂಸನೇ ಎದುರಾಗುತ್ತಾನೆ. ಶ್ರೀಕೃಷ್ಣನು ಕಂಸನನ್ನು ಲೀಲಾಜಾಲವಾಗಿ ಕೊಂದು ಈ ಅಧ್ಯಾಯವನ್ನು ಮುಗಿಸುತ್ತಾನೆ.

ಕಂಸನ ಮರಣದಿಂದ ಕಾಲನೇಮಿಯು ತಮಸ್ಸಿಗೆ ಹೋದರೆ, ಅಂತರ್ಗತನಾದ ವಾಯು ಮೂಲರೂಪವನ್ನು ಸೇರಿದನು. 'ಜೀವದ್ವಯಸಿದ್ಧಾಂತ ದೃಢಪಟ್ಟಿತು'.

ಈ ಅಧ್ಯಾಯವನ್ನು ಓದಿದಾಗ, ಓದುಗರಿಂದ ನಮಗೆ ಕೆಲವು ಪ್ರಶ್ನೆಗಳು ಎದುರಾಗುತ್ತದೆ.

ಶ್ರೀರಾಮ ಮತ್ತು ಶ್ರೀಕೃಷ್ಣ ಇಬ್ಬರೂ ನಾರಾಯಣನ ಅವತಾರಗಳೇ. ಇಬ್ಬರೂ ಮಾನವರಾಗಿಯೇ ಅವತರಿಸಿದರು. ನಮಗೆ ಸಮೀಪದವರಾಗಿ, ಮಾರ್ಗದರ್ಶನವಿತ್ತರು. ಮಾನವರಂತೆ ಅವರೂ ಸುಖದುಃಖಗಳನ್ನು ಅನುಭವಿಸಿ, ನಟಿಸಿ ತೋರಿಸಿದರು. ವರ್ಣಾಶ್ರಮಧರ್ಮಗಳನ್ನು ಪಾಲಿಸಿದರು. ಶಾರೀರಿಕ ಅವಸ್ಥೆಗಳನ್ನು ಅನುಭವಿಸಿದರು. ತಮ್ಮ ತಮ್ಮ ಕಾರ್ಯಗಳನ್ನು ಪೂರೈಸಿ ಅವತಾರಕಾರ್ಯವನ್ನು ಮುಗಿಸಿದರು.

ಶ್ರೀರಾಮನು ದಶರಥನ ಮನೆಯಲ್ಲಿ ಹುಟ್ಟಿ ಬೆಳೆದನು. ಶ್ರೀಕೃಷ್ಣನು ಗೋಕುಲದಲ್ಲಿ ಬೆಳೆದನು. ಇಬ್ಬರಿಗೂ ಬಾಲ್ಯಾವಸ್ಥೆಗಳಿವೆ. ಆದರೆ ವಾಲ್ಮೀಕಿ ಋಷಿಗಳು ಶ್ರೀರಾಮನ ಬಾಲ್ಯದ ಘಟನೆಗಳನ್ನಾಗಲಿ, ಬಾಲಲೀಲೆಗಳನ್ನಾಗಲಿ ಬಣ್ಣಿಸಿಲ್ಲ. ಏಕೆ?

ಶ್ರೀಕೃಷ್ಣನ ಬಾಲಲೀಲೆಗಳಾದರೂ ಸಾವಿರಾರು ಪುಟಗಳಾಗುವಷ್ಟು ಬೆಳೆದು ಬಂದಿವೆ. ಇದಕ್ಕೆ ಕಾರಣವೇನು?

ಈ ವಿಚಾರಗಳು ಸಹಜವಾದವುಗಳೇ. ಶ್ರೀಮದಾಚಾರ್ಯರು ಈ ಶಂಕೆಗಳಿಗೆ ತಮ್ಮ ಮೇರುಕೃತಿಯಾದ ಮಹಾಭಾರತ ತಾತ್ಪರ್ಯ ನಿರ್ಣಯದ ಪ್ರಾರಂಭದಲ್ಲಿಯೇ ಸೈದ್ಧಾಂತಿಕ ಪ್ರಕರಣದಲ್ಲಿ ಪರಿಹಾರ ನೀಡಿದ್ದಾರೆ.

ಕಲ್ಪ, ಕಲ್ಪಗಳಲ್ಲಿ ವೃತ್ತಾಂತವಾಗುವುದು ಸಹಜ. ಅದೇ ರೀತಿಯಾಗಿ ಯುಗಯುಗಗಳಲ್ಲಿ ಧರ್ಮ, ರೀತಿ, ನೀತಿ, ತತ್ವ ಇವುಗಳು

ಬದಲಾಗುವುದು ಸಹಜ. ಅದನ್ನೇ ಅವರು ಯುಗಧರ್ಮ ಪರಿವರ್ತನೆ ಎಂದು ಕರೆದರು.

ಶ್ರೀರಾಮನ ಕಾಲಕ್ಕೆ ಕಪಟ, ಮೋಸ, ವಂಚನೆ, ದ್ವೇಷ ಇತ್ಯಾದಿಗಳು ಪ್ರಬಲವಾಗಿರಲಿಲ್ಲ. ಬಹಳಷ್ಟು ಜನರು ಸಾತ್ವಿಕರಾಗಿಯೇ ಇದ್ದರು. ರಾಕ್ಷಸರಿದ್ದರೂ ಶೂರರಾಗಿದ್ದರು. ನೇರವಾಗಿ ಹೋರಾಡುತ್ತಿದ್ದರು. ರಾಮಾಯಣದಲ್ಲಿ ಕಪಟತನದಿಂದ ವೇಷ ಮರೆಸಿಕೊಂಡಿದ್ದು ಒಂದೆರಡು ಕಡೆಗೆ ಕಾಣುತ್ತೇವೆ. ೧) ರಾವಣನು ಸನ್ಯಾಸಿಯಾಗಿ ಬಂದಿದ್ದು, ೨) ಮಾರೀಚನು ಜಿಂಕೆಯಾಗಿ ಬಂದದ್ದು, ೩) ಶೂರ್ಪನಖಿ ಸುಂದರಿಯಾಗಿ ಬಂದದ್ದು. ಕೊನೆಯ ಭಾಗದಲ್ಲಿ ರಾವಣ ಮತ್ತು ಇಂದ್ರಜಿತು ಇವರು ಯುದ್ಧಕಾಲದಲ್ಲಿ ಮಾಯೆಯಿಂದ ಕೆಲವು ಪದಾರ್ಥಗಳನ್ನು ಸೃಷ್ಟಿಸಿ ವಂಚಿಸಲು ಪ್ರಯತ್ನಿಸಿದ್ದಾರೆ. ಕಾರಣ ಶ್ರೀರಾಮನ ಬಾಲಲೀಲೆಗಳ ಕಾಲದಲ್ಲಿ ಹೆಚ್ಚಿನ ಘಟನೆಗಳಿಗೆ ಅವಕಾಶ ಒದಗಿಲ್ಲ. ಆದರೂ ಶ್ರೀರಾಮಚಂದ್ರನು ತನ್ನ ಬಾಲಲೀಲೆಯಲ್ಲಿ ಆಧ್ಯಾತ್ಮದ ಒಂದು ಮಹತ್ತರ ಸಂದೇಶವನ್ನು ಇತ್ತಿದ್ದಾನೆ.

ಬಾಲಕನಾಗಿದ್ದಾಗ, ಚಂದ್ರನನ್ನು ನೋಡಿ ಹಟ ಮಾಡಿದ. ಪಡೆಯಲು ಪ್ರಯತ್ನಿಸಿದ. ಕನ್ನಡಿಯಲ್ಲಿ ಪ್ರತಿಬಿಂಬವನ್ನು ಪಡೆದು ಸಂತುಷ್ಟನಾದ. ಮಾನವನು ಕೂಡ ಹೃದಯವೆಂಬ ಕನ್ನಡಿಯಲ್ಲಿ ಪರಮಾತ್ಮನ ಪ್ರತಿಬಿಂಬ ಕಾಣಲು ಪ್ರಯತ್ನಿಸಬೇಕು. ಪ್ರತಿಬಿಂಬ ಕಂಡಾಗ ಆನಂದ ನಿಶ್ಚಯ. ಅದಕ್ಕಾಗಿ ಮನದರ್ಪಣ ಸ್ವಚ್ಛವಾಗಿರುವುದು ಅವಶ್ಯಕ. 'ಬಾಲಕನ ಮುಗ್ಧಮನದಂತೆ' ಇತ್ಯಾದಿ.

ಕೃಷ್ಣನ ಕಾಲಕ್ಕೆ ಹಾಗಿರಲಿಲ್ಲ. ಹುಟ್ಟಿದ ಕೂಡಲೇ 'ಪೂತನಿಯ ಕಾಟ'. ಶ್ರೀಕೃಷ್ಣನ ಬಾಲ್ಯದಲ್ಲಿ ಹೆಜ್ಜೆ ಹೆಜ್ಜೆಗೆ ರಾಕ್ಷಸರ ಕಾಟ. ಅದೂ ಮಾಯಾರೂಪದಿಂದ ಶ್ರೀಕೃಷ್ಣನಿಗೆ. ಅವರೆಲ್ಲರನ್ನೂ ಸಂಹರಿಸುವುದು ಆವಶ್ಯಕವಾಗಿತ್ತು. ಅಂತೆಯೇ ಹೆಜ್ಜೆ ಹೆಜ್ಜೆಗೆ ಲೀಲೆಗಳನ್ನು ತೋರಿಸಿ ದುಷ್ಟರ ನಾಶವನ್ನು ಮಾಡಿದ್ದಾನೆ.

ಶ್ರೀಕೃಷ್ಣನು ಕೂಡ ತನ್ನ ಬಾಲಲೀಲೆಗಳಿಂದ ಅನೇಕ ಆಧ್ಯಾತ್ಮದ ತತ್ವಗಳನ್ನು ಬಿತ್ತರಿಸಿದ್ದಾನೆ. ಅವುಗಳ ಬಗೆಗೆ ಈಗಾಗಲೇ ವಿವರಿಸಿ ಆಗಿದೆ.

ಮಾನವ ಸಮಾಜದಲ್ಲೂ ಬಹಳಷ್ಟು ವ್ಯತ್ಯಾಸಗಳಾಗಿದ್ದವು. ಶ್ರೀರಾಮನ ಕಾಲದಲ್ಲಿ ಮಾನವರು ಪರಮಾತ್ಮನಲ್ಲಿ ಪೂರ್ಣ ನಂಬಿಕೆಯಿಟ್ಟಿದ್ದರು. ಆತನ ಮಹಿಮೆಯನ್ನು ತಿಳಿದಿದ್ದರು. ಶ್ರೀ ಕೃಷ್ಣನ ಕಾಲದಲ್ಲಿ ಅದು ಉಳಿದಿರಲಿಲ್ಲ. ಕಾರಣ ಮೇಲಿಂದ ಮೇಲೆ ವಿಶ್ವರೂಪ ತೋರಿಸಿಯೇ ಅಘಟಿತ ಘಟನೆಗಳನ್ನು ಮಾಡಿಯೇ ಜನರಲ್ಲಿ ಪರಮಾತ್ಮನ ಬಗೆಗೆ ನಂಬಿಕೆ ಹುಟ್ಟಿಸಬೇಕಾಯಿತು. ಇನ್ನು ಹೆಚ್ಚಿನ ವಿಷಯಗಳನ್ನು ಕುರಿತು ವಿಚಾರಿಸುವುದು ಓದುಗರಿಗೆ ಬಿಡಲಾಗಿದೆ.

---0---

ಶ್ರೀ ಗುರುಭ್ಯೋ ನಮಃ

# ಅಧ್ಯಾಯ ಹದಿನಾಲ್ಕು

ಹಿಂದಿನ ಅಧ್ಯಾಯದಲ್ಲಿ ಶ್ರೀಮದಾಚಾರ್ಯರು ಶ್ರೀಕೃಷ್ಣನ ಬಾಲಲೀಲೆಗಳನ್ನು ವಿವರಿಸುತ್ತ, ಆಟಗಳಲ್ಲಿ ಅಡಕವಾಗಿರುವ ತತ್ವಗಳನ್ನು ಸೂಚಿಸುತ್ತ, ಜೊತೆಯಲ್ಲಿ ದುಷ್ಟರ ಸಂಹಾರ ಶಿಷ್ಟರ ರಕ್ಷಣೆಯಾದುದನ್ನು ತೋರಿಸಿ ಕೊಟ್ಟಿದ್ದಾರೆ. ಶ್ರೀಕೃಷ್ಣನ ಜೊತೆಯಲ್ಲಿಯೇ ಕೌರವ ಪಾಂಡವರ ಬೆಳವಣಿಗೆ, ಅವರವರ ಸ್ವಭಾವ ಮತ್ತು ಘಟನೆಗಳನ್ನಿತ್ತು ಸಜ್ಜನರಿಗೆ ಮಾರ್ಗದರ್ಶನ ನೀಡಿದ್ದಾರೆ.

ಈ ಅಧ್ಯಾಯದಲ್ಲಿ ಕಂಸನ ವಧೆಯ ನಂತರ ಆದ ಬೆಳವಣಿಗೆಯನ್ನು, ಶ್ರೀಕೃಷ್ಣನ ಕೀರ್ತಿಯನ್ನು ಜೊತೆಯಲ್ಲಿ ಕೌರವ ಪಾಂಡವರ ಚರಿತ್ರೆಯನ್ನು ಕೂಡಿಸಿ ಜೇನುತುಪ್ಪವನ್ನು ಸೇರಿಸಿ ಪುಷ್ಟಿಕರವಾದ ಪಾನೀಯವನ್ನು ಭಕ್ತರಿಗೆ ಇತ್ತಿದ್ದಾರೆ. ಸಜ್ಜನರಿಗೆ ಜ್ಞಾನದೃಷ್ಟಿಯನ್ನು ಅನುಗ್ರಹಿಸಿದ್ದಾರೆ.

ಹರಿಃ ಓಂ॥ ಕೃಷ್ಣೋ ವಿಮೋಚ್ಯ ಪಿತರಾವಭಿವಂದ್ಯೋಽಸರ್ವ–
ವಂದ್ಯೋऽಪಿ ರಾಮಸಹಿತಃ ಪ್ರತಿಪಾಲನಾಯ।
ಧರ್ಮಸ್ಯ ರಾಜ್ಯಪದವೀಂ ಪ್ರಣಿಧಾಯ ಚೋಗ್ರ–
ಸೇನೇ ದ್ವಿಜತ್ವಮುಪಗಮ್ಯ ಮುಮೋಚನಂದಮ್ ॥ ೧ ॥

ಕಂಸನ ವಧೆಯ ನಂತರ ಶ್ರೀಕೃಷ್ಣನು ತಂದೆ ತಾಯಿಗಳಾದ ವಸುದೇವ, ದೇವಕಿಯರನ್ನು ಬಂಧನದಿಂದ ಮುಕ್ತರನ್ನಾಗಿ ಮಾಡಿದನು. ತಾನು ಸರ್ವರಿಂದ ವಂದ್ಯನಾದರೂ ಬಲರಾಮನ ಸಹಿತನಾಗಿ ತಂದೆತಾಯಿಗಳಿಗೆ ವಂದಿಸಿದನು. ಉಗ್ರಸೇನನಿಗೆ ರಾಜ್ಯದ ಪಟ್ಟವನ್ನು ಕಟ್ಟಿದನು. ನಂತರ ಧರ್ಮದ ಪರಿಪಾಲನೆಗಾಗಿ ಉಪನಯನವನ್ನು ಮಾಡಿಕೊಂಡನು. ನಂದಗೋಪನಿಗೆ ಸಮಾಧಾನ ಹೇಳಿ ವೃಂದಾವನಕ್ಕೆ ಕಳಿಸಿದನು.

ವಿ.ವಿ.: ಧರ್ಮಪಾಲನೆ: ೧) ತಾನು ಎಷ್ಟು ದೊಡ್ಡವನಾದರೂ ತಂದೆ–ತಾಯಿಗಳಿಗೆ ವಂದಿಸುವುದು ಮಗನ ಮೊದಲ ಧರ್ಮ.

೨) ಅವರ ವಸ್ತುವನ್ನು ಅವರಿಗೆ ಮುಟ್ಟಿಸುವುದು ಧರ್ಮ.

೩) ವಿದ್ಯಾಭ್ಯಾಸ ಪೂರ್ವದಲ್ಲಿ ಉಪನಯನ ಸಂಸ್ಕಾರ ಶ್ರೇಷ್ಠಧರ್ಮ.
ಶ್ರೀಕೃಷ್ಣನು ಇಲ್ಲಿ ಮೂರೂ ಧರ್ಮಗಳನ್ನು ಪಾಲಿಸಿದ್ದಾನೆ.

**ನಂದೋಽಪಿ ಸಾಂತ್ವವಚನೈರಮನೀಯ ಮುಕ್ತ:**
**ಕೃಷ್ಣೇನ ತಚ್ಚರಣ ಪಂತಜಮಾತ್ಮ ಸಂಸ್ಥಮ್।**
**ಕೃತ್ವಾ ಜಗಾಮ ಸಹ ಗೋಪಗಣೇನ ಕೃಚ್ಛ್ರಾ-**
**ದ್ಧ್ಯಾಯನ್ ಜನಾರ್ದನಮುವಾಸ ವನೇ ಸಭಾರ್ಯ: ॥ ೨ ॥**

ನಂದಗೋಪನು ಕಂಡ ಶ್ರೀಕೃಷ್ಣನ ಸಾಂತ್ವನದಿಂದ ಸಮಾಧಾನ ಹೊಂದಿದನು. ಶ್ರೀಕೃಷ್ಣನ ಚರಣಕಮಲಗಳನ್ನು ತನ್ನ ಹೃದಯ ಕಮಲದಲ್ಲಿ ನೆಲೆಗೊಳಿಸಿ, ಇತರ ಗೋಪಾಲಕರನ್ನು ಕೂಡಿಕೊಂಡು ವೃಂದಾವನಕ್ಕೆ ಬಂದನು. ಸದಾ ಶ್ರೀಕೃಷ್ಣನನ್ನು ಭಕ್ತಿಯಿಂದ ಧ್ಯಾನಿಸುತ್ತ, ಪತ್ನಿಯೊಡಗೂಡಿ ವೃಂದಾವನದಲ್ಲಿ ಇದ್ದನು.

ಶ್ರೀ ಕೃಷ್ಣನ ವಿದ್ಯಾಭ್ಯಾಸ.

**ಕೃಷ್ಣೋಽಪ್ಯವಂತಿ-ಪುರವಾಸಿನ ಮೇತ್ಯ ವಿಪ್ರಂ**
**ಸಾಂದೀಪಿನಂ ಸಹ ಬಲೇನ ತತೋಽಧ್ಯ ಗೀಷ್ಮ।**
**ವೇದಾನ್ ಸಕೃನ್ನಿಗದಿತಾನ್ನಿಖಿಲಾಶ್ಚ ವಿದ್ಯಾ:**
**ಸಂಪೂರ್ಣ ಸಂವಿದಪಿ ದೈವತ ಶಿಕ್ಷಣಾಯ ॥ ೩ ॥**

ಶ್ರೀಕೃಷ್ಣನು ಕೂಡ ಬಲರಾಮನ ಸಹಿತನಾಗಿ, ಅವಂತಿ (ಉಜ್ಜೈನಿ) ನಗರದಲ್ಲಿ ವಾಸಿಸಿದ್ದ 'ಸಾಂದೀಪಿ' ಎಂಬ ಬ್ರಾಹ್ಮಣನ ಹತ್ತಿರ ಅಧ್ಯಯನಕ್ಕಾಗಿ ಬಂದನು. ತಾನು ಸಂಪೂರ್ಣ ವಿದ್ಯೆಗಳನ್ನು ಬಲ್ಲ ಸರ್ವಜ್ಞನಾಗಿದ್ದರೂ ಗುರುಗಳ ಹತ್ತಿರ ಸಕಲ ವೇದಗಳನ್ನು ಸಂಪೂರ್ಣ ಶಾಸ್ತ್ರಗಳ ಅಭ್ಯಾಸವನ್ನು ಮಾಡಿದನು. ಇದು ಕೇವಲ ಮಾನವರಿಗೆ ಅಷ್ಟೇ ಅಲ್ಲ, ದೇವತೆಗಳಿಗೂ ಶಿಕ್ಷಣವಾಗಿತ್ತು. ಮಾರ್ಗದರ್ಶನವಾಗಿತ್ತು.

ದೇವತೆಗಳಿಗೆ ಶಿಕ್ಷಣ ಏಕೆ?

**ಧರ್ಮೋಽಪಿ ಸರ್ವವಿದುಷಾಮಪಿ ದೈವತಾನಾಂ**
**ಪ್ರಾಪ್ತೇ ನರೇಷು ಜನನೇ ನರವತ್ ಪ್ರವೃತ್ತಿ:।**

**ಜ್ಞಾನಾದಿ ಗೋಪನಮುತಾಧ್ಯಯನಾದಿರತ್ರ**
**ತಜ್ಞಾಪನಾರ್ಥಮದ ಸದ್ಭಗವಾನ್ ಗುರೌಚ ॥ ೪ ॥**

"ದೇವತೆಗಳು ಎಲ್ಲವನ್ನು ಬಲ್ಲವರಾದರೂ, ನರಜನ್ಮ ಪ್ರಾಪ್ತವಾದಾಗ ಅವರು ನರರಂತೆಯೇ ನಡೆಯತಕ್ಕದ್ದು" ಇದು ಧರ್ಮ. ಇವನ್ನು ದೇವತೆಗಳಿಗೆ ತಿಳಿಸುವುದಕ್ಕಾಗಿಯೇ ಶ್ರೀಕೃಷ್ಣನು ಗುರುಗಳ ಅಧೀನವಲ್ಲಿದ್ದು ಎಲ್ಲ ವಿದ್ಯೆಗಳನ್ನು ಕಲಿತನು.

ವೇದಗಳ ಜ್ಞಾನ ಅಪರಿಮಿತವಾದದ್ದು. ಕಾರಣ ಅದರ ಅಧ್ಯಯನವು ಯಾವ ಕಾಲಕ್ಕೂ ಯಾರಿಗೂ ತಪ್ಪಿದ್ದಲ್ಲ ಎಂಬುದನ್ನು ತೋರಿಸಿದನು.

ನಾವು ದೇವತೆಗಳು, ಮಾನವರಲ್ಲಿ ವಿದ್ಯೆಯನ್ನು ಏಕೆ ಕಲಿಯಬೇಕು? ನಮಗೆ ವೇದಾಧ್ಯಯನವಾಗಿದೆ. ಮತ್ತೆ ಅದರ ಅವಶ್ಯಕತೆ ನಮಗಿಲ್ಲ ಇತ್ಯಾದಿ ಅಹಂಕಾರದ ಮನೋಭಾವ ಅವರಲ್ಲಿ ಬೆಳೆಯಬಾರದು ಎಂಬುದೇ ಶ್ರೀಕೃಷ್ಣನ ಉದ್ದೇಶವಾಗಿತ್ತು.

ವಿ.ವಿ.: ಗುರುಗಳು ಶ್ರೀಕೃಷ್ಣನಿಗೆ ವಿದ್ಯೆಗಳನ್ನು ಕಲಿಸಿದರೆ? ಗುರೂಪದೇಶ ಮಾಡಿದರೆ? ಅವರಿಗೆ ಆ ಯೋಗ್ಯತೆ ಇದ್ದಿತೇ? ಇತ್ಯಾದಿ ವಿಚಾರಗಳು ಬರುವುದು ಸಹಜ. ಅವುಗಳಿಗೆ ಸಮಾಧಾನ.

ಗುರುಗಳು ತಾವು ತಮ್ಮ ಗುರುಗಳಲ್ಲಿ ಕಲಿತ ವಿದ್ಯೆಯನ್ನು ಲೋಕಗುರುವಾದ ಶ್ರೀಕೃಷ್ಣನಿಗೆ ಒಪ್ಪಿಸಿ ಕೃತಾರ್ಥರಾದರು ಎಂದೇ ಭಾವಿಸಬೇಕು.

**ಗುರ್ವರ್ಥಮೇಷ ಮೃತಪುತ್ರಮದಾತ್ ಪುನಶ್ಚ**
**ರಾಮೇಣ ಸಾರ್ಥಮಗಮನ್ಮಧುರಾಂ ರಮೇಶಃ।**
**ಪೌರೈಃ ಸಜಾನಪದ ಮಂಧು ಜನೈರಜಸ್ರ-**
**ಮಭ್ಯರ್ಚಿತೋ ನೃಪಸದಿಷ್ವಕೃದಾತ್ಮ ಪಿತ್ರೋಃ ॥ ೫ ॥**

ಶ್ರೀಕೃಷ್ಣನು ಗುರುದಕ್ಷಿಣೆಯಾಗಿ ಮರಣ ಹೊಂದಿದ ಮಗನನ್ನೇ ತಂದುಕೊಟ್ಟನು. ಪುನಃ ರಮೇಶನು ಬಲರಾಮನನ್ನು ಕೂಡಿಕೊಂಡು ಮಧುರಾಪುರಿಗೆ ಬಂದನು. ಪುರಜನರು, ಬಂಧುಬಾಂಧವರು

ಸಂತಸಗೊಂಡು ಅವರನ್ನು ಗೌರವದಿಂದ ಕಾಣುತ್ತಿದ್ದರು. ತನ್ನ ತಂದೆತಾಯಿಗಳ ಇಷ್ಟಗಳನ್ನು ಸಲಿಸುತ್ತ ಶ್ರೀಕೃಷ್ಣನು ಅಲ್ಲಿ ವಾಸವಾಗಿದ್ದನು.

ವಿ.ವಿ.: ಗುರುಭಕ್ತಿ, ಗುರುಸೇವೆ ಮತ್ತು ಗುರುಮುಖದಿಂದ ಬಂದ ವಿದ್ಯೆಯೇ ಫಲಕಾರಿ. ಅದು ಕೂಡ ಗುರುದಕ್ಷಿಣೆ ಕೊಟ್ಟಾಗಲೇ ಪೂರ್ಣ ಫಲ ದೊರೆಯುತ್ತದೆ ಎಂಬುದೇ ಮೇಲಿನ ಶ್ಲೋಕಗಳ ಮಥಿತಾರ್ಥ.

**ಸರ್ವೇಽಪಿ ತೇ ಪತಿಮವಾಪ್ಯ ಹರಿಂ ಪುರಾ ಹಿ**
**ತಪ್ತಾಹಿ ಭೋಜಪತಿನಾಮು ಮುದುರ್ನಿತಾಂ ತಮ್।**
**ಕಿಂ ವಾಚ್ಯಮತ್ರ ಸುತಮಾಪ್ಯ ಹರಿಂ ಸ್ವಪಿತ್ರೋ–**
**ರ್ಯತ್ರಾಖಿಲಸ್ಯ ಸುಜನಸ್ಯ ಬಭೂವ ಮೋದಃ ॥ ೬ ॥**

ಹಿಂದೆ ಸರ್ವಜನರು ಕಂಸನ ಬಾಧೆಗಳಿಂದ ನೊಂದಿದ್ದರು. ಇಂದು ಮುಕ್ತರಾಗಿದ್ದಾರೆ. ಶ್ರೀಹರಿ ತಮ್ಮ ಮಧ್ಯದಲ್ಲಿರುವುದನ್ನು ಕಂಡು ಹರ್ಷಿತರಾಗಿದ್ದಾರೆ. ಸಕಲ ಸುಜನರೂ ಸಂತೋಷಿಸಿದ್ದಾರೆ ಎಂದು ಹೇಳಿದಾಗ ಶ್ರೀಹರಿಯನ್ನೇ ಮಗನನ್ನಾಗಿ ಪಡೆದ ತಂದೆ–ತಾಯಿಗಳು ಸಂತೋಷಿಸಿದರೆಂದು ಬೇರೆ ಹೇಳಬೇಕೆ?

**ಕೃಷ್ಣಾಶ್ರಯೋ ವಸತಿ–ಯತ್ರ ಜನೋಽಪಿ ತತ್ರ**
**ವೃದ್ಧಿರ್ಭವೇತ್ ಕಿಮು ರಮಾಧಿಪತೇರ್ನಿವಾಸೇ।**
**ವೃಂದಾವನಂ ಯದಧಿವಾಸತ ಆಸಸದ್ಧ್ಯ ಓಲ್**
**ಮಾಹೇಂದ್ರ ಪದ್ಮ ಸದೃಶಂ ಕಿಮು ತತ್ರ ಪ್ರರ್ಯೂಣಮ್ ॥ ೭ ॥**

ಶ್ರೀಕೃಷ್ಣನ ಆಶ್ರಯದಲ್ಲಿದ್ದ ಜನರಿಗೆ ಅಭಿವೃದ್ಧಿಯಾಗುವುದು ನಿಶ್ಚಯ. ಲಕ್ಷ್ಮೀಪತಿಯಾದ ಶ್ರೀಹರಿಯೇ ವೃಂದಾವನದಲ್ಲಿ ವಾಸಿಸಿದ ಮೇಲೆ, ಅದು ಸಂಪತ್ಭರಿತವಾಯಿತು ಎಂದು ಏಕೆ ಹೇಳಬೇಕು? ಅದು ಮಹೇಂದ್ರನ ಅರಮನೆಗೆ ಸಮವಾಯಿತು. ಅಂದಾಗ ಅಲ್ಲಿ ಏನು ತಾನೆ ಪೂರ್ತಿಯಾಗಲಿಕ್ಕಿಲ್ಲ?

**ಯೇನಾಧಿವಾಸ ಮೃಷಭೋ ಜಗತಾಂ ವಿಧತ್ತೇ**
**ವಿಷ್ಣುಸ್ತತೋ ಹಿ ವರತಾ ಸದನೇ ವಿಧಾತುಃ।**

**ತಸ್ಮಾತ್ಪ್ರಭೋ ರ್ನಿವಸನಾನ್ಮಧುರಾಪುರೀ ಸಾ**

**ಶಶ್ವತ್ಸಮೃದ್ಧ ಜನಸಂಕುಲಿತಾ ಬಭೂವ ॥ ೮ ॥**

ಬ್ರಹ್ಮನ ಸತ್ಯ ಲೋಕಕ್ಕೂ ಕೂಡ ಶ್ರೀಹರಿ ವಾಸ್ತವ್ಯ ಮತ್ತು ಅನುಗ್ರಹದಿಂದಲೇ ಆ ಮಹತ್ವ ಬಂದದ್ದು. ಅದರಂತೆ ಇಂದು ಈ ಮಧುರಾಪುರಿಯಲ್ಲಿ ಪ್ರಭುವಾದ ಶ್ರೀಕೃಷ್ಣನೇ ವಾಸಿಸಿದ್ದಾನೆ. ಕಾರಣ ಅದು ಸದಾಸಮೃದ್ಧಿಯನ್ನು ಪಡೆದು ಸತ್ಯಲೋಕಕ್ಕೂ ಮಿಗಿಲಾಗಿದೆ. ಇಂದು ಆ ನಗರ ನಿಬಿಡವಾದ ಜನರಿಂದ ಹರ್ಷಗೊಂಡಿದೆ.

**ರಕ್ಷತ್ಯಜೇ ತ್ರಿಜನತಾಂ ಪರಿರಕ್ಷತೇಽಸ್ಮಿನ್**

**ಸರ್ವಾನ್ ಯದೂನ್ ಮಗಧರಾಜಸುತೇಸ್ವಭರ್ತುಃ।**

**ಕೃಷ್ಣಾನ್ಮೃತಿಂ ಪಿತುರವಾಪ್ಯ ಸಮೀಪಮಸ್ತಿ–**

**ಪ್ರಾಪ್ತೀ ಶಶಂಸತುರತೀವಚ ದುಃಖಿತೇಽಸ್ಮೈ ॥ ೯ ॥**

ಮೂರು ಲೋಕಗಳ ರಕ್ಷಕನಾದ ಶ್ರೀಹರಿಯೇ ಇಂದು ಸಮಸ್ತ ಯಾದವರಿಗೆ ರಕ್ಷಕನಾಗಿದ್ದಾನೆ. ಮಗಧರಾಜನ ಇಬ್ಬರು ಮಕ್ಕಳು ಅಸ್ತಿ, ಪ್ರಾಸ್ತಿಯೆಂಬವರು ಶ್ರೀಕೃಷ್ಣನಿಂದಲೇ ತಮ್ಮ ಪತಿಯ ಹತವಾಯಿತೆಂದು, ಅತೀವ ದುಃಖಿತರಾಗಿ ತಂದೆಯಾದ ಜರಾಸಂಧನಿಗೆ ಹೇಳಿದರು. ಅವರೇ ಕಂಸನ ಪತ್ನಿಯರು.

**ಶ್ರುತ್ವೈವ ತನ್ಮಗಧರಾಜ ಉರುಪ್ರರೂಢ–**

**ರ್ಬಾಹ್ವೋರ್ಬಲೇನ ನ ಜಿತೋಯುಧಿ ಸರ್ವಲೋಕೈಃ।**

**ಬ್ರಹ್ಮೇಶ ಚಂಡಮುನಿದತ್ತವರೈರಜೇಯೋ**

**ಮೃತ್ಯೋರ್ಜ್ಝಿತಶ್ಚ ವಿಜಯೀ ಜಗತಶ್ಚುಕೋಪ ॥ ೧೦ ॥**

ಮಕ್ಕಳ ಮಾತುಗಳನ್ನು ಕೇಳಿದ ಮಗಧರಾಜನು ಕುಪಿತನಾದನು. ಅವನು ಬಾಹುಬಲದಲ್ಲಿ ಬಹು ಪರಾಕ್ರಮಿಯಾಗಿದ್ದನು. ಸರ್ವಲೋಕಗಳಲ್ಲೂ ಅವನನ್ನು ಗೆದ್ದವರು ಯಾರೂ ಇರಲಿಲ್ಲ. ಅವನಿಗೆ ಬ್ರಹ್ಮ ರುದ್ರ ಅಲ್ಲದೆ ಪ್ರಚಂಡ ಮುನಿಗಳಾದ ದುರ್ವಾಸರ ವರಗಳಿದ್ದವು. ವರಗಳ ಬಲದಿಂದ

ಅವನು ಮೃತ್ಯುವನ್ನೂ ಗೆದ್ದಿದ್ದನು. ಅಂತಹ ಜರಾಸಂಧನು ಇಂದು ಕುಪಿತನಾಗಿದ್ದಾನೆ.

**ಅಥ ಶಕ್ಷೀವತಃ ಪುತ್ರಂ ಗೌತಮಸ್ಯ ಮಹಾತ್ಮನಃ ।**
**ಶುಶ್ರುವ ತಪಸಿ ಶ್ರೇಷ್ಠಂ ಉದಾರಂ ಚಂಡಕೌಶಿಕಮ್ ॥**

(ಸಭಾಪರ್ವ)

ಈ ಶ್ಲೋಕದಿಂದ ಜರಾಸಂಧನಿಗೆ ದೂರ್ವಾಸರ ಅನುಗ್ರಹವಿದ್ದಿತು ಎಂಬುದು ಸ್ಪಷ್ಟವಾಗುತ್ತದೆ.

**ಕ್ಷುಬ್ಧೋಽತಿಕೋಪವಶತಃ ಸ್ವಗದಾಮಮೋಘಾಂ**
**ದತ್ತಾಂ ಶಿವೇನ ಜಗೃಹೇ ಶಿವಭಕ್ತವಂದ್ಯಃ ।**
**ಶೈವಾಗಮಾಖಿಲವಿದತ್ರ ಚ ಸುಸ್ಥಿರೋಽಸೇ**
**ಚಿಕ್ಷೇಪ ಯೋಜನಶತಂ ಸತು ತಾಂ ಪರಸ್ಮೈ ॥ ೧೧ ॥**

ಆ ಜರಾಸಂಧನು ಕೋಪಕ್ಕೆ ವಶನಾಗಿ ಬಹು ಕ್ಷುಬ್ಧನಾದನು. ಕೋಪದಿಂದ ಮೈಯಲ್ಲಿ ನಡುಕವುಂಟಾಯಿತು. ಕಣ್ಣು ಕೆಂಪಾದವು. ಅವನ ಹತ್ತಿರ ಶಿವನಿಂದ ದತ್ತವಾದ ಒಂದು ಶ್ರೇಷ್ಠವಾದ ಗದೆಯಿದ್ದಿತು. ಶೈವಾಗಮಗಳನ್ನು ಚೆನ್ನಾಗಿ ಬಲ್ಲವನಾಗಿದ್ದನು. ಶಿವಭಕ್ತರಿಂದ ವಂದ್ಯನಾಗಿದ್ದನು. ಅವನು ತನ್ನಲ್ಲಿದ್ದ ಗದೆಯನ್ನು ನೂರುಯೋಜನ ಅಂತರದ ಲಕ್ಷ್ಯವಾಕಿ ಒಗೆದನು.

ವಿ.ವಿ.: ಆ ಗದೆಯನ್ನು ಎಷ್ಟು ದೂರ ಬೇಕಾದರೂ ಒಗೆದು ಅಲ್ಲಿಯ ನಗರ ಮತ್ತು ಜನರನ್ನು ನಾಶ ಮಾಡಬಹುದಾಗಿದ್ದಿತು. ಆ ಶಕ್ತಿ ಅದಕ್ಕಿದ್ದಿತು. ಈಗ ಅವನು ಕೃಷ್ಣನನ್ನು ಅತನೆ ನಗರವನ್ನು ನಾಶಮಾಡಬೇಕೆಂದು ನೂರು ಯೋಜನ ಸಾಕೆಂದು ಲಕ್ಷ್ಯ ಹಾಕಿದ್ದಾನೆ. ಆದರೆ,

**ಅವಾರ್ಶ್ವಪಾತ ಚ ಗದಾ ಮಥುರಾ ಪ್ರದೇಶಾತ್**
**ಸಾ ಯೋಜನೇನ ಯದಿಮಂ ಪ್ರಜಗಾದ ಪೃಷ್ಟಃ ।**
**ಏಕೋತ್ತರಾಮಪಿಪತಾಚ್ಚ್ಯುತ ಯೋಜನೇತಿ**
**ದೇವರ್ಷಿರತ್ರ ಮಥುರಾಂ ಭಗವತ್ಪ್ರಿಯಾರ್ಥೇ ॥ ೧೨ ॥**

ಆ ಗದೆಯು ಜರಾಸಂಧನ ಗುರಿಯಂತೆ ನೂರು ಯೋಜನ ದೂರದಲ್ಲಿ ಬಿದ್ದಿತು. ಅಲ್ಲಿಗೆ ಮಧುರಾಪಟ್ಟಣವು ಇನ್ನೂ ಒಂದು ಯೋಜನ ದೂರದಲ್ಲಿತ್ತು.

ಹಾಗೇಕಾಯಿತು? ಮಧುರಾಪಟ್ಟಣವು ಇಲ್ಲಿಂದ ಎಷ್ಟು ದೂರದಲ್ಲಿದೆ? ಎಂದು ಜರಾಸಂಧನು ನಾರದನನ್ನು ಕೇಳಿದನು. ಆಗ ನಾರದರು ಅಲ್ಲಿಂದು ಮಧುರಾಪಟ್ಟಣವು ೧೦೧ ಯೋಜನ ಎಂದು ಗೊತ್ತಿದ್ದೂ ಭಗವಂತನ ಪ್ರೀತಿಗಾಗಿ ೧೦೦ ಯೋಜನ ಎಂದೇ ಹೇಳಿದರು. ಕಾರಣ ಜರಾಸಂಧನು ೧೦೦ ಯೋಜನೆಗೆ ಗುರಿಯಿಟ್ಟನು.

ಗದೆಯಿಂದ ಶ್ರೀಕೃಷ್ಣನಿಗೆ ನಷ್ಟವಾಗುವ ಭಯದಿಂದ ನಾರದರು ಹಾಗೆ ಹೇಳಿದರೆ? ಅದಕ್ಕೆ ಉತ್ತರ –

> ಶಕ್ತಸ್ಯ ಚಾಪಿ ಹಿ ಗದಾ ಪ್ರತಿ–ಘಾತನೇತು
> ಶುಶ್ರೂಷಣಂ ಮದುಚಿತಂ ತ್ವಿತಿ ಚಿಂತಯಾನ: ।
> ವಿಷ್ಣೋರ್ಮುನಿ: ಸ ನಿಜಗಾದ ಹಿ ಯೋಜನಂ
> ಮಾರ್ಗಂ ಪುರೋಭಗವತೋ ಮಗಧೇಶ ಪೃಷ್ಟ: ॥ ೧೩ ॥

ಆ ಗದೆಯ ಶಕ್ತಿಯನ್ನು ತಡೆಯುವ ಶಕ್ತಿ ಶ್ರೀಕೃಷ್ಣನಿಗೆ ಇದ್ದಿತು. ಇದನ್ನು ನಾರದರು ಬಲ್ಲವರಾಗಿದ್ದರು. ಆದರೂ 'ಗದಾಪ್ರಹಾರ' ತಪ್ಪಿಸುವ ಸೇವೆಯಾದರೂ ತಮಗೆ ಲಭಿಸಲಿ ಎಂದೇ ನಾರದರು ಶ್ರೀಕೃಷ್ಣನ ಪಟ್ಟಣದ ದೂರವನ್ನು ಒಂದು ಯೋಜನ ಕಡಿಮೆಯಾಗಿ ಹೇಳಿದ್ದರು.

ಅಲ್ಲದೆ ಶ್ಲೋಕ ೧೨ರಲ್ಲಿಯೇ 'ಭಗವತ್ಪ್ರಿಯಾರ್ಥೀ' ಎಂದು ಸ್ಪಷ್ಟ ಪಡಿಸಿದ್ದಾರೆ.

ಅಂದರೆ ಇಲ್ಲಿ ನಾರದರು ಸುಳ್ಳು ಹೇಳಿದರೆ? ಇಲ್ಲ.

ಭಾಗವತದಲ್ಲಿ ಇದರ ವಿವರಣೆ ಬಹಳಷ್ಟು ಬಂದಿದೆ. ಇಲ್ಲಿ ಸಂಕ್ಷೇಪವಾಗಿ ಹೀಗೆ ಹೇಳಬಹುದು. ಯಾವ ವಾಕ್ಯದಿಂದ ಸಜ್ಜನರಿಗೆ ಮತ್ತು ಪುರಜನರಿಗೆ ಹಿತವಾಗುವುದೋ ಆ ವಾಕ್ಯವು ಆಪಾತತಃ (ತೋರಿಕೆಗೆ) ಸುಳ್ಳಾಗಿ ಕಂಡರೂ ಅದು ಸತ್ಯವೇ. ಅದು ಧರ್ಮವೇ. ಆ ದೃಷ್ಟಿಯಿಂದ ನಾರದರ ವಾಕ್ಯದಿಂದ ಶ್ರೀಕೃಷ್ಣನಿಗೂ, ಶ್ರೀಕೃಷ್ಣನ ಪುರಜನರಿಗೂ ಹಿತವಾಗಿದೆ.

ಅಂದ ಮೇಲೆ ಅದು ಭಾಗವತ ಧರ್ಮದಿಂದ ಸುಳ್ಳಲ್ಲ, ಶ್ರೇಷ್ಠವಾದ ಸತ್ಯವೆಂದೇ ಹೇಳಬಹುದು.

**ಷೆಪ್ತಾ ತು ಸಾ ಭಗವತೋಽಥ ಗದಾ ಜರಾಖ್ಯಾಂ**
**ತತ್ಸಂಧಿನೀ ಮಸುಭಿರಾಶು ವಿಯೋಜ್ಯ ಪಾಪಾಮ್ ।**
**ಮರ್ತ್ಯಾ ಶನೀಂ ಭಗವತಃ ಪುನರಾಜ್ಞಯೈವ**
**ಯಾತಾಗಿರೀಶಸದನಂ ಮಗಧಂ ವಿಸೃಜ್ಯ ॥ ೧೪ ॥**

ಭಗವಂತನ ಮೇಲೆ ಎಸೆದ ಆ ಗದೆಯು ಅಲ್ಲಿಯೇ ಓಡಾಡುತ್ತಿದ್ದ 'ಜರಾ' ಎಂಬ ರಾಕ್ಷಸಿಯ ಮೇಲೆ ಬಿದ್ದು ಅವಳನ್ನು ಕೊಂದಿತು. ಆ ಪಾಪಿಷ್ಠೆಯು ನರರನ್ನು ಭಕ್ಷಿಸುತ್ತ ಅಲ್ಲಿಯೇ ಇದ್ದಳು. ಭಗವಂತನ ಆಜ್ಞೆಯನ್ನು ಪಡೆದು ಆ ಗದೆಯು ಮಗಧೆಯನ್ನು ಬಿಟ್ಟು ಶಿವನ ಸದನವನ್ನು ಸೇರಿತು.

'ಜರೆ' ಯಾರು? ಜರಾಸಂಧನ ತಾಯಿ. ಎರಡು ತುಂಡುಗಳನ್ನು ಕೂಡಿಸಿದ ದೇಹವುಳ್ಳವಳು.

**ರಾಜಾ ಸ್ವಮಾತೃತ ಉತೋಗದಯಾ ಚ ಹೀನಃ**
**ಕ್ರೋಧಾತ್ ಸಮಸ್ತ ನೃಪತೀನಭಾ ಸನ್ನಿಪಾತ್ಯ ।**
**ಅಕ್ಷೌಹಿಣೀತ್ರ್ಯಧಿಕ ವಿಂಶಯುತೋಽತಿ ವೇಲಂ**
**ದರ್ಪೋದ್ಧತಃ ಸಪದಿ ಕೃಷ್ಣಪುರೀಂ ಜಗಾಮ ॥ ೧೫ ॥**

ರಾಜನಾದ ಜರಾಸಂಧನಿಗೆ ಇತ್ತ ತಾಯಿಯು ಮೃತಳಾದಳು. ಅತ್ತ ಗದೆಯು ಇಲ್ಲದಾಯಿತು. ಅದರಿಂದ ಅವನ ಕ್ರೋಧ ಇನ್ನಷ್ಟು ಹೆಚ್ಚಾಯಿತು. ಎಲ್ಲ ರಾಜರನ್ನು ಒಂದೆಡೆ ಸೇರಿಸಿ, ಆಲೋಚಿಸಿ, ತನ್ನ ಇಪ್ಪತ್ತು ಮೂರು ಅಕ್ಷೌಹಿಣಿ ಸೈನ್ಯ ಸಮೇತನಾಗಿ ಬಹು ದರ್ಪದಿಂದ ಕೂಡಲೆ ಶ್ರೀಕೃಷ್ಣನ ಪಟ್ಟಣದ ಕಡೆಗೆ ನಡೆದನು.

**ಸರ್ವಾಂ ಪುರೀಂ ಪ್ರತಿನಿರುಧ್ಯ ದಿದೇಶ ವಿಂದ–**
**ವಿಂದಾನುಜೌ ಭಗವತಃ ಕುಮತಿಃ ಸ ದೂತೌ ।**
**ತಾ ಊಚತುರ್ಭಗವತೇಽಸ್ಯ ವಚೋಽತಿ ದರ್ಪ–**
**ಪೂರ್ಣಂ ತಥಾ ಭಗವತೋಽಪ್ಯುಪಹಾಸಯುಕ್ತಮ್ ॥ ೧೬ ॥**

ಎಲ್ಲರೂ ಸೇರಿ ಮಧುರಾ ಪಟ್ಟಣವನ್ನು ಸುತ್ತುವರಿದು ಮುತ್ತಿದರು. ನಂತರ ದುಷ್ಟರಾದ ಜರಾಸಂಧನು ವಿಂದ, ಅನುವಿಂದ ಎಂಬ ಇಬ್ಬರು ಮೂರ್ಖ ಸಹೋದರರನ್ನು ದೂತರನ್ನಾಗಿ ಶ್ರೀಕೃಷ್ಣನಲ್ಲಿಗೆ ಕಳಿಸಿದನು. ಅವರು ಮಹಾಗರ್ವಿಷ್ಠರಾಗಿ ಶ್ರೀಕೃಷ್ಣನಿಗೆ ಹೀಗೆ ಹೇಳಿದರು.

ಜರಾಸಂಧನ ಅಪಹಾಸ್ಯದ ಮಾತುಗಳು.

**ಲೋಕೇ ಪ್ರಿತೀತಬಲಪೌರುಷಸಾರರೂಪ**

**ಸ್ತ್ವಂ ಹ್ಯೇಕ ಏಷ್ಯ ಭವತೋ ಬಲವೀರ್ಯಸಾರಮ್ ।**

**ಜ್ಞಾತ್ವಾ ಸುತೇ ನ ತು ಮಯಾ ಪ್ರತಿಪಾದಿತೇ ಹಿ**

**ಕಂಸಸ್ಯ ವೀರ್ಯ ಹಿತೇನ ಹತಸ್ತ್ವಯಾ ಸಃ ॥ ೧೭ ॥**

ಜಗತ್ತಿನಲ್ಲಿಯೇ ನೀನೊಬ್ಬನೇ ಬಲವೀರ್ಯ ಮತ್ತು ಪೌರುಷ ಉಳ್ಳವನು ಎಂದು ನನಗೆ ಈಗ ಗೊತ್ತಾಯಿತು. ನಿನ್ನ ಬಲಸಾರವನ್ನು ಅರಿಯದೆ, ನನ್ನ ಮಕ್ಕಳನ್ನು ಆ ಕಂಸನಿಗೆ ಕೊಟ್ಟೆನು. (ನಿನ್ನ ಈ ಬಲವನ್ನು ತಿಳಿದಿದ್ದರೆ ಆ ಕಂಸನಿಗೆ ನನ್ನ ಮಕ್ಕಳನ್ನು ಕೊಡುತ್ತಿರಲಿಲ್ಲ ವೀರ್ಯರಹಿತನಾದ ಅವನು ನಿನ್ನಿಂದ ಹತನಾಗಿದ್ದಾನೆ)

ವಿ.ವಿ.: ಕಂಸನು ವ್ಯಂಗ್ಯವಾಗಿ ಅಥವಾ ಹಾಸ್ಯಕ್ಕಾಗಿ ಮೇಲಿನ ಮಾತುಗಳನ್ನು ಆಡಿದ್ದರೂ (ತತ್ವಶಃ) ತಾತ್ವಿಕವಾಗಿ ಸತ್ಯವಾದವುಗಳೇ. ಏಕೆಂದರೆ ಪರಮಾತ್ಮನಿಗಿಂತ ಅಧಿಕ ಬಲಶಾಲಿ ಯಾವನಿದ್ದಾನೆ?

**ಸೋಽಹಂ ಹಿ ದುರ್ಬಲ ತಮೋ ಬಲಿನಾಂ ವರಿಷ್ಟಂ**

**ಕೃತ್ವೈವ ದೃಷ್ಟಿ ವಿಷಯಂ ವಿಗತಪ್ರತಾಪಃ ।**

**ಯಾಸ್ಯೇ ತಪೋವನಮಥೋ ಸಹಿತಸ್ಸುತಾಭ್ಯಾಂ**

**ಕ್ಷಿಪ್ರಂ ಮಮಾಧ್ಯ ವಿಷಯೋ ಭವಚಕ್ಷುಷೋಽತಃ ॥ ೧೮ ॥**

ಈಗ ನಾನು ಅತ್ಯಂತ ಬಲಹೀನನು. ನೀನು ಬಲಿಷ್ಠರಲ್ಲಿ ವರಿಷ್ಠ ಎಂಬುದು ಜಗತ್ತಿಗೆ ಕೃತಿಯಿಂದ ತೋರಿಸಿಕೊಡಬೇಕಾಗಿದೆ. ಒಂದಿನ ಪ್ರತಾಪದಿಂದ ಏನು ಪ್ರಯೋಜನ. ಈಗ ನಿನ್ನೊಡನೆ ಹೋರಾಡಿ ನಂತರ ಇಬ್ಬರು ಮಕ್ಕಳನ್ನು ಕೂಡಿಕೊಂಡು ತಪೋವನಕ್ಕೆ ಹೋಗುತ್ತೇನೆ. ಕಾರಣ

ನೀನು ಕೂಡಲೇ ಹೊರಬಂದು ಯುದ್ಧಕ್ಕೆ ಸಿದ್ಧನಾಗು ಎಂದು ವ್ಯಂಗ್ಯವಾಗಿ ಹೇಳಿದನು.

**ಸಾಪೇಕ್ಷ ಮೀರಿತಮಿದಂ ಬಲದರ್ಪಪೂರ್ಣ–**
**ಮಾತ್ಮಾಪಹಾಸ ಸಹಿತಂ ಭಗವಾನಿಶಮ್ಯ ।**
**ಸತ್ಯಂ ತದಿತ್ಯುರುವಚೋऽರ್ಥವದಭ್ಯುದೀರ್ಯ**
**ಮಂದಂ ಪ್ರಹಸ್ಯ ನಿರಗಾತ್ಸಹಿತೋ ಬಲೇನ ॥ ೧೯ ॥**

ಶ್ರೀಕೃಷ್ಣನ ವಿಷಯದಲ್ಲಿ ವ್ಯಂಗ್ಯ ಮತ್ತು ಕಟುಕ್ತಿಗಳಿಂದ ಕೂಡಿದ ಜರಾಸಂಧನ ಗರ್ವದ ಮಾತುಗಳನ್ನು ಕೇಳಿಯೂ ಕೇಳದವನಂತೆ ನಟಿಸಿ, 'ನೀನು ಹೇಳಿದ್ದು ಸತ್ಯ, ಸಾರ್ಥಕ, ಉಚಿತ ಮತ್ತು ಶ್ರೇಷ್ಠವೂ ಆಗಿದೆ' ಎಂದು ಹೇಳಿ, ಶ್ರೀಕೃಷ್ಣ ಬಲರಾಮನ ಸಹಿತನಾಗಿ ಮಂದವಾಗಿ ನಗುತ್ತ ಮುಂದೆ ಸಾಗಿದನು.

ವಿ.ವಿ.: ಇಲ್ಲಿ ಆಚಾರ್ಯರು 'ಸತ್ಯಂ, ತತ್' ಎರಡು ಪದಗಳನ್ನು ಬಳಸಿ, ಜರಾಸಂಧನು ವಿಡಂಬನೆಗಾಗಿ ಹಾಸ್ಯಕ್ಕಾಗಿ ವ್ಯಂಗ್ಯವಾಗಿ ಹೇಳಿದ ಮಾತುಗಳೆಲ್ಲ ಶ್ರೀಕೃಷ್ಣನ ವಿಷಯದಲ್ಲಿ ಯಥಾರ್ಥವೇ ಆಗಿವೆ ಎಂಬುದನ್ನು ಸೂಚಿಸಿದ್ದಾರೆ.

ಶ್ರೀಕೃಷ್ಣನು ಮಾಡಿದ ಸೈನ್ಯದ ಯೋಜನೆ –

**ದ್ವಾರೇಷು ಸಾತ್ಯಕಿ ಪುರಸ್ಸರ ಮಾತ್ಮಸೈನ್ಯಂ**
**ತ್ರಿಷ್ವಭ್ಯುದೀರ್ಯ ಭಗವಾನ್ ಸ್ವಯಮುತ್ತರೇಣ ।**
**ರಾಮದ್ವಿತೀಯ ಉದಗಾನ್ಮಗದಾದಿ ರಾಜಂ**
**ಯೋದ್ಧುಂ ನೃಪೇಂದ್ರ ಕಟಕೇನ ಯುತಂ ಪರೇಶಃ ॥ ೨೦ ॥**

ಸಾತ್ಯಕಿಯು ಮುಂದಾಳ್ತನದಲ್ಲಿದ್ದ ತನ್ನ ಸೈನ್ಯವನ್ನು ಪುರದ ಮೂರುದ್ವಾರಗಳಲ್ಲಿ ನಿಲ್ಲಿಸಿದನು. ಅನೇಕ ಬಲಶಾಲಿಗಳಾದ ರಾಜರ ಸೈನ್ಯದೊಡನೆ ಯುದ್ಧಕ್ಕಾಗಿ ಬಂದು ಉತ್ತರ ದ್ವಾರದಲ್ಲಿ ನಿಂತ ಜರಾಸಂಧನನ್ನು ಎದುರಿಸಲು ಶ್ರೀಕೃಷ್ಣನು ಬಲರಾಮನೊಂದಿಗೆ ಬಂದು ತಾನೇ ಸ್ವಯಂ ಉತ್ತರದ್ವಾರದಲ್ಲಿ ನಿಂತನು.

**ತಸ್ಯೇಚ್ಛಯೈವ ಪೃಥಿವೀಮವ ತೇರುರಾಶು**
**ತಸ್ಯಾಯುಧಾನಿ ಸಬಲಸ್ಯ ಸುಭಾಸ್ವರಾಣಿ ।**
**ಶಾರ್ಙ್ಗಾಸಿ ಚಕ್ರದರ ತೂಣಗದಾ: ಸ್ವಕೀಯಾ**
**ಜಗ್ರಾಹ ದಾರುಕ ಗೃಹೀತರಥೇ ಸ್ಥಿತಸ್ಸ: ॥ ೨೧ ॥**

ಶ್ರೀಕೃಷ್ಣನ ಇಚ್ಛೆಯಿಂದಲೇ ಸೈನ್ಯಕ್ಕೆ ಯೋಗ್ಯ ಉತ್ತಮ ಆಯುಧಗಳು, ರಥಗಳು, ಭೂಮಿಗಿಳಿದು ಬಂದವು. ಸೈನ್ಯವು ಸಜ್ಜಾಯಿತು. ಶ್ರೀಕೃಷ್ಣನು ಸ್ವತಃ ತನ್ನ ಶಾರ್ಙ್ಗ, ಧನು, ಚಕ್ರ, ಶಂಖ, ಗದೆ, ಖಡ್ಗ, ಬತ್ತಳಿಕೆ ಮೊದಲಾದವುಗಳಿಂದ ಸಜ್ಜಿತನಾಗಿ ದಾರುಕನು ತಂದ ರಥವನ್ನೇರಿ ಎದುರಾದನು.

**ಆರುಹ್ಯ ಭೂಮಯರಥಂ ಪ್ರತಿಯುಕ್ತ ಮಶ್ವೈ**
**ರ್ವೇದಾತ್ಮಕೈರ್ಧನುರಧೀಜ್ಯ ಮಥ ಪ್ರಗೃಹ್ಯ ।**
**ಶಾರ್ಙ್ಗಂ ಶರಾಂಶ್ಚ ನಿಶಿತಾನ್ಮಗಧಾಧಿರಾಜ–**
**ಮುಗ್ರಂ ನೃಪೇಂದ್ರ ಸಹಿತಂ ಪ್ರಯಯೌ ಜವೇನ ॥ ೨೨ ॥**

ಭೂಮಿಯನ್ನೇ ರಥವನ್ನಾಗಿ ಮಾಡಿ, ಅದಕ್ಕೆ ನಾಲ್ಕು ವೇದಗಳನ್ನೇ ಕುದುರೆಗಳನ್ನಾಗಿ ಜೋಡಿಸಿ ರಥದಲ್ಲಿ ಶಾರ್ಙ್ಗ ಮೊದಲಾದ ಧನುರ್ಬಾಣಗಳಿಂದ ಸಜ್ಜಾಗಿ ಬಂದ ಶ್ರೀಕೃಷ್ಣನನ್ನು ನೋಡಿ ಪ್ರತಾಪಿಯಾದ ಜರಾಸಂಧನು ಕೂಡ ತನ್ನ ರಾಜರಿಂದ ಸಹಿತನಾಗಿ ವೇಗದಿಂದ ಎದುರಾದನು.

**ರಾಮ: ಪ್ರಗೃಹ್ಯ ಮುಸಲಂ ಸಹಲಂ ಚ**
**ಯಾನಮಾಸ್ಥಾಯ ಸಾಯಕ ಶರಾಸನ ತೂಣಯುಕ್ತ: ।**
**ಸೈನ್ಯಂ ಜರಾಸುತ ಸುರಕ್ಷಿತ ಮಭ್ಯಧಾವ–**
**ದ್ದರ್ಪಾನ್ನದನ್ನುರು ಬಲೋಽರಿಬಲೈರಧೃಷ್ಯ: ॥ ೨೩ ॥**

ಬಲರಾಮನು ಮುಸಲ (ಒನಕೆ) ಮತ್ತು ಹಲ (ನೇಗಿಲು) ಇವುಗಳನ್ನು ಹಿಡಿದು ಇತರ ಬಾಣಬತ್ತಳಿಕೆಗಳಿಂದ ಯುಕ್ತನಾಗಿ, ರಥದಲ್ಲಿ ಕುಳಿತು

ಜರಾಸುತನಿಂದ ರಕ್ಷಿತವಾದ ಸೈನ್ಯಕ್ಕೆ ಎದುರಾಗಿ, ಅರಿಬಲವನ್ನು ತನ್ನ ಬಾಹುಬಲಗಳಿಂದ ಗೆಲ್ಲಲು ಸಿದ್ಧನಾಗಿ ಬಂದನು.

ಉದ್ವೀಕ್ಷ್ಯ ಕೃಷ್ಣಮಭಿಯಾಂತಮನಂತಶಕ್ತಿಂ
ರಾಜೇಂದ್ರ ಬೃಂದಸಹಿತೋ ಮಗಧಾಧಿರಾಜಃ ।
ಉದ್ವೇಲಸಾಗರವದಾಶ್ವಭಿಯಾಯ ಕೋಪಾ-
ನ್ನಾನಾವಿಧಾಯುಧವರೈರಭಿವರ್ಷಮಾಣಃ ॥ ೨೪ ॥

ಅನಂತ ಶಕ್ತಿಯುಳ್ಳ ಶ್ರೀಕೃಷ್ಣನು ರಥದೊಂದಿಗೆ ತನ್ನ ಸಮ್ಮುಖದಲ್ಲಿರುವ ಮಗಧ ರಾಜನನ್ನು ನೋಡಿದನು. ರಾಜರ ಬೃಂದದಿಂದೊಡಗೂಡಿದ, ಜರಾಸಂಧನು ಕೋಪಾವಿಷ್ಟನಾಗಿ, ಸಾಗರೋಪಮವಾದ ತನ್ನ ಸೈನ್ಯದಿಂದ ನಾನಾ ವಿಧವಾದ ಆಯುಧ ಮತ್ತು ಬಾಣಗಳ ಮಳೆಯನ್ನೇ ಎದುರಾಳಿಯ ಮೇಲೆ ಸುರಿಸಿದನು.

ತಂ ವೈ ಚುಕೋಪಯಿಷುರಗ್ರತ ಉಗ್ರಸೇನಂ
ಕೃಷ್ಣೋ ನಿಧಾಯ ಸಮಗಾತ್ಸ್ವಯಮಸ್ಯ ಪಶ್ಚಾತ್ ।
ದೃಷ್ಟ್ವಾಗತೋ ಮಗಧರಾಟ್ ಸ್ಥಿತ ಮುಗ್ರಸೇನಂ
ಕೋಪಾಜ್ಜ್ವಲತ್ತ ನುರಿದಂ ವಚನಂ ಬಭಾಷೇ ॥ ೨೫ ॥

ಆ ಜರಾಸಂಧನಿಗೆ ಇನ್ನಷ್ಟು ಕೋಪವನ್ನು ತರಿಸಬೇಕೆಂದು, ಶ್ರೀಕೃಷ್ಣನು ಉಗ್ರಸೇನನನ್ನು ಜರಾಸಂಧನ ಎದುರಿನಲ್ಲಿ ನಿಲ್ಲಿಸಿ, ತಾನು ಅವನ ಹಿಂದೆ ನಿಂತನು. ಮುಂದೆ ನಿಂತ ಉಗ್ರಸೇನನನ್ನು ಜರಾಸಂಧನು ನೋಡಿದನು. ಅವನ ಕೋಪ ಮತ್ತಷ್ಟು ಹೆಚ್ಚಾಯಿತು. ಮೈ ಕಂಪಿಸ ಹತ್ತಿತು. ಸಿಟ್ಟಿನಿಂದ ಹೀಗೆಂದನು:

ಜರಾಸಂಧನು ಉಗ್ರಸೇನನಿಗೆ ಆಡಿದ ಮಾತು –

ಪಾಪಾಪಯಾಹಿ ಪುರತೋ ಮಮ ರಾಜ್ಯಕಾಮ
ನಿರ್ಲಜ್ಜ ಪುತ್ರವಧಕಾರಣ ಶತ್ರುಪಕ್ಷ ।
ತ್ವಂ ಜೀರ್ಣಬಸ್ತಸದೃಶೋ ನ ಮಹಯೋಹವದ್ಯ
ಸಿಂಹೋ ಹಿ ಸಿಂಹ ಮಭಿಯಾತಿ ನ ವೈ ಸೃಗಾಲಮ್ ॥ ೨೬ ॥

"ಎಲೋ ಪಾಪಿಷ್ಠನೇ, ನೀನು ನನ್ನ ಎದುರಿನಲ್ಲಿ ನಿಲ್ಲಬೇಡ. ದೂರಸರಿ. ರಾಜ್ಯದ ಆಶೆಯಿಂದ ಪುತ್ರವಧೆಗೆ ಕಾರಣನಾದಿ, ನಿರ್ಲಜ್ಯ. ಶತ್ರುಪಕ್ಷವನ್ನು ಸೇರಿದವನೇ. ನನ್ನಿಂದ ನೀನು ಕೊಲ್ಲಲು ಕೂಡ ಅರ್ಹನಲ್ಲ. ಜೀರ್ಣಿಸಿದ ವಸ್ತುವಿನಂತೆ ಇದ್ದೀಯೆ. ಸಿಂಹಕ್ಕೆ ಸಿಂಹದೊಂದಿಗೆ ಹೋರಾಡಿದರೆ ಕೀರ್ತಿ, ನರಿಯೊಡನೆ ಅಲ್ಲ".

**ಆಕ್ಷಿಪ್ತ ಇತ್ಥಮ ಮುನಾರ್ಥ ಸ ಭೋಜರಾಜ-**
**ಸ್ತೂಣಾತ್ಪ್ರಗೃಹ್ಯ ನಿಶಿತಂ ಶರಮಾಶು ತೇನ ।**
**ಭಿತ್ವಾ ಜರಾಸುತಧನುರ್ಬಲವಾನ್ನನಾದ**
**ವಿವ್ಯಾಧ ಸಾಯಕಗಣ್ಯೆಶ್ಚ ಪುನಸ್ತ ಮುಗ್ರೈಃ ॥ ೨೭ ॥**

ಈ ಬಗೆಯ ನಿಂದೆಯನ್ನು ಕೇಳಿದ ಉಗ್ರಸೇನನು ತನ್ನ ಬತ್ತಳಿಕೆಯಿಂದ ನಿಶಿತವಾದ ಬಾಣಗಳನ್ನು ತೆಗೆದು ಜರಾಸಂಧನ ಮೇಲೆ ಪ್ರಯೋಗಿಸಿದನು. ಆದರಿಂದ ಅವನ ಕೈಯಲ್ಲಿದ್ದ ಬಲವಾದ ಬಿಲ್ಲು ತುಂಡರಿಸಿತು. ನಂತರ ಅವನ ಸಹಾಯಕ್ಕಾಗಿ ಬಂದ ಪ್ರಬಲರಾಜರನ್ನೂ ಅವರ ಸೈನ್ಯವನ್ನೂ ಛೇದಿಸಿದನು.

**ಅನ್ಯಚ್ಚರಾಸನವರಂ ಪ್ರತಿಗೃಹ್ಯ ಕೋಪಾತ್**
**ಸಂರಕ್ತನೇತ್ರ ಮಭಿಯಾತಮುದೀಕ್ಷ್ಯ ಕೃಷ್ಣಃ ।**
**ಭೋಜಾಧಿರಾಜವಧ ಕಾಂಕ್ಷಿಣ ಮುಗ್ರ ವೇಗಂ**
**ಬಾರ್ಹದ್ರಥಂ ಪ್ರತಿಯಯೌ ಪರಮೋ ರಥೇನ ॥ ೨೮ ॥**

ಕೋಪೋದ್ರಿಕ್ತನಾದ ಜರಾಸಂಧನು, ಕೆಂಗಣ್ಣನಾಗಿ, ತನ್ನಲ್ಲಿಯ ಅನ್ಯ ತೀಕ್ಷ್ಣ ಬಾಣಗಳನ್ನು ಹಿಡಿದು ಉಗ್ರಸೇನನ್ನು ಕೊಲ್ಲಲು ಉದ್ಯುಕ್ತನಾಗಿ ಬರುತ್ತಿರುವುದನ್ನು ಶ್ರೀಕೃಷ್ಣನು ಕಂಡನು. ಕೂಡಲೆ ತನ್ನ ರಥವನ್ನು ತೆಗೆದುಕೊಂಡು ಬಂದು ಅವನ ಮುಂದೆ ನಿಂತನು.

**ಆಯಾಂತಮೀಕ್ಷ್ಯ ಭಗವಂತಮನಂತವೀರ್ಯಂ**
**ಚೇದೀಶ ಪೌಂಡ್ರಮುಖರಾಜಗಣ್ಯೆಃ ಸಮೇತಃ ।**

**ನಾನಾವಿಧಾಸ್ತ್ರ ವರಶಸ್ತ್ರ ಗಣೈರ್ ವವರ್ಷ**
**ಮೇರುಂ ಯಥಾಘನ ಉದೀರ್ಣರವೋ ಜಲೌಘ್ಯೈ: ॥ ೨೯ ॥**

ಅನಂತ ಬಲವೀರ್ಯಗಳುಳ್ಳ ಭಗವಂತನು ಬಂದದ್ದನ್ನು ಕಂಡು ಜರಾಸಂಧನು, ಶಿಶುಪಾಲ, ಪೌಂಡ್ರಕ (ಪ್ರಮುಖರಾದ ರಾಜರನ್ನು) ಕೂಡಿಕೊಂಡು ನಾನಾವಿಧ ಅಸ್ತ್ರಗಳಿಂದ ಸಜ್ಜಿತನಾಗಿ ಬಾಣಗಳ ವರ್ಷವನ್ನೇ ಸುರಿಸಿದನು. ಅದು ಘನಘೋರ ಕಾರ್ಮೋಡ, ಗುಡುಗು, ಮಿಂಚಿನಿಂದ ಮೇರು ಪರ್ವತದ ಮೇಲೆ ಮಳೆಗರೆದಂತೆ ಆಯಿತು.

ವಿ.ವಿ.: ಈ ಉಪಮೆಯಲ್ಲಿಯೂ ಶ್ರೇಷ್ಠವಾದ ಹೋಲಿಕೆಯಿದೆ. ಆ ಮಳೆಯಿಂದ ಪರ್ವತಕ್ಕೆ ಏನಾಗಬೇಕಾಗಿದೆ?

**ಶಸ್ತ್ರಾಸ್ತ್ರ ವೃಷ್ಟಿಮಭಿತೋ ಭಗವಾನ್ನಿವೃಶ್ಯ**
**ಶಾರ್ಙ್ಗಾರ್ಲೋತ್ಥ ಸಾಯಕಗಣೈರ್ವಿರಥಾಶ್ಚ ಸೂತಮ್ ।**
**ಚಕ್ರೇ ನಿರಾಯುಧಮಸೌ ಮಗಧೇಂದ್ರಮಾಶು**
**ಛಿನ್ನಾತಪತ್ರವರ ಕೇತು ಮಚಿಂತ್ಯ ಶಕ್ತಿ: ॥ ೩೦ ॥**

ಶಸ್ತ್ರಗಳು ಮಳೆಗರೆವುದನ್ನು ಭಗವಂತನು ನೋಡಿದನು. ಕೂಡಲೇ ಶಾರ್ಙ್ಗಪಾಣಿಯಾಗಿ ಸಹಾಯಕರಾಗಿ ಬಂದ ರಾಜರ ರಥಗಳನ್ನು ಮುರಿದನು. ಸಾರಥಿಗಳನ್ನು ಕೊಂದನು. ತನ್ನ ಚಕ್ರದಿಂದ ಮಗಧರಾಜನನ್ನು ನಿರಾಯುಧನನ್ನಾಗಿ ಮಾಡಿದನು. ಛತ್ರ ಚಾಮರಗಳನ್ನು ಧ್ವಜ ಪತಾಕೆಗಳನ್ನು ಛಿನ್ನ ಭಿನ್ನವಾಗಿ ಮಾಡಿದನು. ಅಚಿಂತ್ಯ ಶಕ್ತನಿಗೆ ಇದು ಸಹಜವೇ ಸೈ.

**ನೈನಂ ಜಘಾನ ಭಗವಾನ್ ಸುಶಕಂ ಚ ಭೀಮೇ**
**ಭಕ್ತಿಂ ನಿಜಾಂ ಪ್ರಥಯಿತುಂ ಯಶ ಉಚ್ಚ್ರಧರ್ಮಮ್ ।**
**ಚೇದೀಶಪೌಂಡ್ರಕಸಕೀಚಕ ಮದ್ರರಾಜ**
**ಸಾಲ್ವೈಕಲವ್ಯಮುಖಾನ್ವಿರಥಾಂಶ್ಚಕಾರ ॥ ೩೧ ॥**

ಶ್ರೀಕೃಷ್ಣನು ಜರಾಸಂಧನನ್ನು ಕೊಲ್ಲಲು ಸಮರ್ಥನಾದಾಗ್ಯೂ, ಭೀಮನ ನಿಜವಾದ ಭಕ್ತಿ ಮತ್ತು ಆತನ ಯಶಸ್ಸು ಜಗತ್ತಿಗೆ ತೋರಿಸುವ

ಶ್ರೇಷ್ಠಧರ್ಮವನ್ನು ಪಾಲಿಸಲು ಜರಾಸಂಧನನ್ನು ಕೊಲ್ಲಲಿಲ್ಲ. ಜರಾಸಂಧನಿಗೆ ಸಹಾಯಕರಾದ ಚೇದೀಶ, ಪೌಂಡ್ರಿಕ, ಕೀಚಕ, ಸಾಲ್ವ, ಏಕಲವ್ಯ ಮೊದಲಾದ ರಾಜರ ರಥಗಳನ್ನು ಮುರಿದು ಅವರನ್ನು ವಿರಥರನ್ನಾಗಿ ಮಾಡಿದನು. ಅಲ್ಲದೆ,

**ಯೇ ಚಾಪಿ ಹಂಸಡಿಭಿಕದ್ರುಮರುಕ್ಮಿ ಮುಖ್ಯಾ:**
**ಬಾಹ್ಲೀಕ ಭೌಮಸುತಮೈಂದ ಪುರಸ್ಸರಾಶ್ಚ ।**
**ಸರ್ವೇ ಪ್ರದುದ್ರುಪುರಜಸ್ಯ ಶರೈರ್ವಿಭಿನ್ನಾ**
**ಅನ್ಯೇಚ ಭೂಮಿಪತಯೋ ಯ ಇಹಾऽऽಸುರುರ್ವ್ಯಾಮ್ ॥೩೨ ॥**

ಜರಾಸಂಧನಿಗೆ ಯುದ್ಧದಲ್ಲಿ ಸಹಾಯಕ್ಕಾಗಿ ಬಂದ ಹಂಸಡಿಭಿಕ ದ್ರುಮ, ರುಕ್ಮಿ, ಬಾಹ್ಲೀಕ, ನರಕಾಸುರ, ಅವನ ಮಗ ಭಗದತ್ತ, ಮೈಂದ ಮೊದಲಾದ ರಾಜರೆಲ್ಲರೂ ಶ್ರೀಕೃಷ್ಣನ ಅಸ್ತ್ರಗಳ ಪೆಟ್ಟಿಗೆ ತಮ್ಮ ಬಾಣ ಬತ್ತಳಿಕೆಗಳನ್ನು ಕಳೆದುಕೊಂಡು ಓಡಿ ಹೋದರು. ಇನ್ನುಳಿದ ಚಿಕ್ಕಪುಟ್ಟ ರಾಜರಿಗೂ ಇದೇ ಗತಿಯಾಯಿತು.

**ಭಿನ್ನಾಯುಧಧ್ವಜ ಪತಾಕರಥಾಶ್ವಸೂತ**
**ವರ್ಮಾಣ ಉಗ್ರಶರತಾಡಿತಭಿನ್ನಗಾತ್ರಾ:।**
**ಸ್ರಸ್ತಾಂಬರಾಭರಣ ಮೂರ್ಧಜ ಮಾಲ್ಯ ಹೀನಾ**
**ರಕ್ತಂ ವಮಂತ ಉರುದುದ್ರುವುರಾಶು ಭೀತಾ: ॥೩೩॥**

ಯುದ್ಧಕ್ಕೆ ಬಂದ ಸೈನಿಕರ ವ್ಯವಸ್ಥೆ.
ಕೆಲವರ ಆಯುಧಗಳು ತುಂಡಾಗಿವೆ. ಕೆಲವರು ರಥಗಳನ್ನು ಕಳೆದುಕೊಂಡಿದ್ದಾರೆ. ಧ್ವಜ ಪತಾಕೆಗಳು ಹರಿದು ಅಲ್ಲಲ್ಲಿ ಕಂಬಗಳಿಗೆ ಸುತ್ತಿಕೊಂಡಿವೆ. ಕೆಲವರು ಬಾಣಗಳ ಪೆಟ್ಟಿಗೆ ಜರ್ಝರಿತರಾಗಿದ್ದಾರೆ. ಕೆಲವರ ಆಭರಣಗಳು ಕಳಚಿ ಬಿದ್ದಿದ್ದರೆ, ಮತ್ತೆ ಕೆಲವರ ವಸ್ತ್ರಗಳು ಸಡಿಲಗೊಂಡಿವೆ. ಮಾಲೆಗಳು ಅಸ್ತವ್ಯಸ್ತವಾಗಿವೆ. ಕೆಲವರು ರಕ್ತಕಾರಿದರೆ, ಉಳಿದವರು ಭೀತಿಯಿಂದ ಓಡುತ್ತಿದ್ದಾರೆ.

**ಶೋಚ್ಯಾಂ ದಶಾಮುಪಗತೇಷು ನೃಪೇಷು ಸರ್ವೇ**
**ಪ್ರಾತ್ತಾಯುಧೇಷು ಹರಿಣಾ ಯುಧಿ ವಿದ್ರವತ್ಸು।**

**ನಾನಾಯುಧಾಢ್ಯಮಪರಂ ರಥಮುಗ್ರವೀರ್ಯ–**
**ಮಾಸ್ಥಾಯ ಮಾಗಧಪತಿಃ ಪ್ರಸಸಾರ ರಾಮಮ್ ॥೩೪॥**

ಎಲ್ಲಿ ರಾಜರುಗಳ ಮತ್ತು ಸೈನಿಕರ ಶೋಚನೀಯ ಸ್ಥಿತಿಯನ್ನು ಜರಾಸಂಧನು ನೋಡಿದನು. ಸರ್ವರ ಆಯುಧಗಳು, ಅಸ್ತ್ರಗಳು ಶ್ರೀಹರಿಯ ಬಲದ ಮುಂದೆ ತಲೆ ಬಾಗಿದ್ದವು. ಅಂಥ ಸಮಯದಲ್ಲಿ ಮಗಧಪತಿ ಮತ್ತೊಂದು ಒಳ್ಳೆಯ ರಥವನ್ನು ತರಿಸಿ, ಅನೇಕ ಆಯುಧಗಳಿಂದ ಸಜ್ಜಿತನಾಗಿ ಬಲರಾಮನ ಮುಂದೆ ಬಂದು ನಿಂತನು.

**ಅಧಾವತೋಽಸ್ಯ ಮುಸಲೇನ ರಥಂ ವಿಭಂಜ**
**ರಾಮೋ ಗದಾಮುರುತರೋರಸಿ ಸೋಽಪಿ ತಸ್ಯ।**
**ಚಿಕ್ಷೇಪ ತಂ ಚ ಮುಸಲೇನ ತತಾಡ ರಾಮ–**
**ಸ್ತಾವುತ್ತಮೌ ಬಲವತಾಂ ಯಯುಧಾತ ಉಗ್ರಮ್ ॥೩೫॥**

ಬರುತ್ತಿರುವ ಜರಾಸಂಧನ ರಥವನ್ನು ನೋಡಿದ ಬಲರಾಮನು, ತನ್ನ ಮುಸಲದಿಂದಲೇ ಹೊಡೆದು ಅದನ್ನು ವಿಭಂಜಿಸಿದನು. ಆಗ ಜರಾಸಂಧನು ತನ್ನ ಗದೆ ಮತ್ತು ಇತರ ಆಯುಧಗಳಿಂದ ಬಲರಾಮನಿಗೆ ಗುರಿಯಿಟ್ಟು ಹೊಡೆದನು. ಬಲರಾಮನು ಮಧ್ಯದಲ್ಲಿಯೇ ಮುಸಲದಿಂದ ಅವುಗಳನ್ನು ತಡೆದನು. ಇಬ್ಬರು ಬಲಾಢ್ಯರ ಮಧ್ಯೆ ಬಲಯುತವಾದ ಕಾಳಗ ನಡೆಯಿತು.

**ತೌ ಚಕ್ರತುಃ ಪುರುನಿಯುದ್ಧಮಪಿ ಸ್ಮ ತತ್ರ**
**ಸಂಚೂರ್ಣ್ಯ ಸರ್ವಗಿರಿವೃಕ್ಷ ಶಿಲಾ ಸಮೂಹಾನ್।**
**ದೀರ್ಘಂ ನಿಯುದ್ಧಮಭವತ್ಸಮಮೋ ತಯೋಸ್ತು**
**ವಜ್ರಾ ಧೃಢಾಂಙ್ಗ ತಮಯೋರ್ಬಲಿನೋರ್ ನಿತಾಂತಮ್ ॥೩೬॥**

ಆ ಇಬ್ಬರು ಮುಸಲ ಮತ್ತು ಗದೆಗಳಿಂದ ಬಹು ದೀರ್ಘಕಾಲದವರೆಗೆ ಯುದ್ಧ ಮಾಡಿದರು. ಅದರ ಪರಿಣಾಮದಿಂದ ಹತ್ತಿರ ಇದ್ದ ಗಿಡ–ಮರಗಳು ಮುರಿದು ಬಿದ್ದವು. ಗಿರಿ–ಗುಡ್ಡಗಳು ಚೂರುಚೂರಾದವು. ಕಲ್ಲು ಬಂಡೆಗಳು ಪುಡಿಪುಡಿಯಾದವು. ನಂತರ ಅವರು ಮುಷ್ಟಿಯುದ್ಧಕ್ಕೆ

ಸಿದ್ಧರಾದರು. ವಜ್ರದಂತೆ ದೃಢಕಾಯನಾದ ಬಲರಾಮನಿಗೂ ಬಲದಲ್ಲಿ ಪ್ರಸಿದ್ಧನಾದ ಜರಾಸಂಧನಿಗೂ ಬಹುಕಾಲ ಮುಷ್ಟಿಯುದ್ಧ ನಡೆಯಿತು.

**ಶ್ರುತ್ವಾಽಥ ಶಂಖರವ ಮಂಬುಜಲೋಚನಸ್ಯ**
**ವಿದ್ರಾವಿತಾನಪಿ ನೃಪಾನಭಿವೀಕ್ಷ್ಯ ರಾಮಃ।**
**ಯುದ್ಧಂತಮೀಕ್ಷ್ಯ ಚ ರಿಪುಂ ವವೃಧೇ ಬಲೇನ**
**ತ್ಯಕ್ತ್ವಾ ರಿಪುಂ ಮುಸಲಮಾದದ ಅಶ್ವಮೋಘಮ್ ॥೩೭॥**

ಕಮಲಲೋಚನನಾದ ಶ್ರೀಕೃಷ್ಣನ ಶಂಖದ ಧ್ವನಿಯನ್ನು ಕೇಳಿ, ರಾಜರೆಲ್ಲರೂ ಗಾಬರಿಯಾಗಿ ಓಡಿದರು. ಬಲರಾಮನ ಬಲದ ವೃದ್ಧಿಯಾಯಿತು. ರಿಪು (ಜರಾಸಂಧನ)ವಿನ ಮುಷ್ಟಿಯುದ್ಧ ನಿಂತಂತಾಯಿತು. ಬಲರಾಮನು ಪುನಃ ಅಮೋಘವಾದ ಮುಸಲವನ್ನು ಧರಿಸಿದನು.

**ತೇನಾಹತಶ್ಶಿರಸಿ ಸಮ್ಮುಮುಹೇಽತಿವೇಲಂ**
**ಬಾರ್ಹದ್ರಥೋ ಜಗೃಹ ಏನಮಥೋ ಹಲೀ ಸಃ।**
**ತತ್ರೈ ಕವಲ್ಯ ಉತ ಕೃಷ್ಣಶರೈಃ ಪಲಾಯ-**
**ನ್ನಸ್ತ್ರಾಣಿ ರಾಮಶಿರಸಿ ಪ್ರಮುಮೋದ ಶೀಘ್ರಮ್ ॥೩೮॥**

ಬಲರಾಮನು ತನ್ನ ಮುಸಲದಿಂದ ಜರಾಸಂಧನ ತಲೆಗೆ ಜೋರಾಗಿ ಹೊಡೆದನು. ಅವನು ಮೂರ್ಛಿತನಾಗಿ ಬಿದ್ದನು. ಬಲರಾಮನು ಅವನನ್ನು ರಥದಲ್ಲಿ ಹಾಕಿದನು. ಅಲ್ಲಿಯೇ ಇದ್ದ ಏಕಲವ್ಯನು ಶ್ರೀಕೃಷ್ಣನ ಶರಾಘಾತಕ್ಕೆ ತುತ್ತಾಗಿ ಓಡಿಹೋಗಿ ದೂರದಿಂದಲೇ ತನ್ನ ಅಸ್ತ್ರಗಳಿಂದ ಬಲರಾಮನ ತಲೆಗೆ ಗುರಿಯಿಟ್ಟು ಹೊಡೆದನು.

**ಭೀತೇನ ತೇನ ಸಮರಂ ಭಗವಾನನಿಚ್ಛನ್**
**ಪ್ರದ್ಯುಮ್ನಮಾಶ್ವಸೃಜದಾತ್ಮಸುತಂ ಮನೋಜಮ್।**
**ಪ್ರದ್ಯುಮ್ನ ಏನಮಭಿಯಾಯ ಮಹಾಸ್ತ್ರಜಾಲೈಃ**
**ರಾಮಸ್ತು ಮಾಗಧಮಥಾತ್ಮರಥಂ ನಿನಾಯ ॥೩೯॥**

ಯುದ್ಧದಿಂದ ಅಂಜಿ ಓಡುತ್ತಿರುವ ಏಕಲವ್ಯನೊಡನೆ ಯುದ್ಧಮಾಡಲು ಶ್ರೀಕೃಷ್ಣನು ಇಷ್ಟಪಡಲಿಲ್ಲ. ಕಾಮನನ್ನೇ ತನ್ನ ಹೊಟ್ಟೆಯಿಂದ ಮಗನನ್ನಾಗಿ ಸೃಷ್ಟಿಸಿದನು. ಅವನೇ (ಕಾಮನು) ಪ್ರದ್ಯುಮ್ನನು. ಆ ಪ್ರದ್ಯುಮ್ನನು ಅಸ್ತ್ರಗಳ ಜಾಲದಿಂದ ಏಕಲವ್ಯನೊಡನೆ ಯುದ್ಧಕ್ಕೆ ನಿಂತನು. ಬಲರಾಮನು ತನ್ನ ರಥವನ್ನು ಜರಾಸಂಧನತ್ತ ತಿರುಗಿಸಿದನು.

**ಯುಧ್ವಾ ಚಿರಂ ರಣ ಮುಖೇ ಭಗವತ್ಸು ತೋಽಸೌ**
**ಚಕ್ರೇ ನಿರಾಯುಧಮಮುಂ ಸ್ಥಿಮೇಕಲವ್ಯಮ್।**
**ಅಂಶೇನ ಯೋ ಭುವಮಗಾನ್ಮಣಿಮಾನಿತಿ ಸ್ಮ**
**ಸ ಕ್ರೋಧ ತಂತ್ರಕಗಣೇಷ್ವಧಿಪೋ ನಿಷಾದಃ ॥೪೦॥**

ಬಹಳ ಕಾಲದವರೆಗೆ ಏಕಲವ್ಯನಿಗೂ ಪ್ರದ್ಯುಮ್ನನಿಗೂ ಯುದ್ಧವಾಯಿತು. ಕೊನೆಗೆ ಪ್ರದ್ಯುಮ್ನನು ಏಕಲವ್ಯನನ್ನು ನಿರಾಯುಧನನ್ನಾಗಿ ಮಾಡಿದನು.

ಈ ಏಕಲವ್ಯನಾರು? ಮೊದಲು, ಕ್ರೋಧ ಮತ್ತು ಕಪಟಗಳಲ್ಲಿ ಪ್ರಸಿದ್ಧರಾದ ಕೆಲವು ರಾಕ್ಷಸರು ಇರುತ್ತಿದ್ದರು. ಅವರ ಗುಂಪಿಗೆ ಮಣಿಮಂತನೇ ಮುಖ್ಯನು. ಅವನೂ ಪ್ರಸಿದ್ಧ ರಾಕ್ಷಸನೇ. ಆ ಮಣಿಮಂತನ ಅಂಶದಿಂದಲೇ ಭೂಲೋಕದಲ್ಲಿ ಈಗ ಏಕಲವ್ಯನಾಗಿ ಹುಟ್ಟಿದ್ದಾನೆ. ಇವನು ಈಗ ನಿಷಾಧರಿಗೆ ಅಧಿಪತಿ. ನಿಷಾಧರು ಇವನ ಅನುಯಾಯಿಗಳು. ಅವರೆಲ್ಲರೂ ರಾಕ್ಷಸರೇ.

ಪ್ರಾಯಃ ದ್ರೋಣಾಚಾರ್ಯರು ಏಕಲವ್ಯನಿಗೆ ಧನುರ್ವಿದ್ಯೆಯನ್ನು ಕಲಿಸಲು ಈ ಕಾರಣಕ್ಕಾಗಿಯೇ ನಿರಾಕರಿಸಿರಬೇಕು.

**ಪ್ರದ್ಯುಮ್ನಮಾತ್ಮನಿ ನಿಧಾಯ ಪುನಃ ಸ ಕೃಷ್ಣಃ**
**ಸಂಹೃತ್ಯ ಮಾಗಧ ಬಲಂ ನಿಖಿಲಂ ಶರೌಘೈಃ।**
**ಭೂಯಶ್ಚ ಭೂಮಭಿವಿನೇತು ಮುದಾರ ಕರ್ಮಾ**
**ಬಾರ್ಹದ್ರಥಂ ತ್ವಮುಚದಕ್ಷಯ ಪೌರುಷೋಽಜಃ ॥೪೧॥**

ಪ್ರದ್ಯುಮ್ನನನ್ನು ಶ್ರೀಕೃಷ್ಣನು ಪುನಃ ತನ್ನ ಹೊಟ್ಟೆಯಲ್ಲಿ ಇಟ್ಟುಕೊಂಡನು. ಮಗಧರಾಜನ ಎಲ್ಲ ಬಲವನ್ನು ತನ್ನ ಬಾಣಗಳಿಂದ ನಾಶಮಾಡಿದನು. ಅವನು, ಸಕಲ ಕರ್ಮಗಳನ್ನು ಪೂರೈಸಲು ಸಮರ್ಥನಾದ

ಪುರುಷೋತ್ತಮನು, ಜರಾಸಂಧನನ್ನು ಕೊಲ್ಲಲು ಪುನಃ ಸೈನ್ಯವನ್ನು ತೆಗೆದುಕೊಂಡು ಯುದ್ಧಕ್ಕೆ ಬರಲಿ ಎನ್ನುವ ಉದ್ದೇಶದಿಂದ ಅವನನ್ನು ಬಿಟ್ಟುಬಿಟ್ಟನು.

ವಿ.ವಿ. ಜರಾಸಂಧನನ್ನು ಬಿಡುವುದರಲ್ಲಿ ಕೃಷ್ಣನಿಗೆ ಎರಡು ಉದ್ದೇಶಗಳಿದ್ದವು. ೧) ಜರಾಸಂಧನನ್ನು ತಾನು ಕೊಲ್ಲಬಾರದು. ಭಕ್ತನಾದ ಭೀಮನಿಗೆ ಅದರ ಕೀರ್ತಿ ಸಲ್ಲಬೇಕು. ೨) ಜರಾಸಂಧನು ರಾಕ್ಷಸರ ಸೈನ್ಯವನ್ನು ಯುದ್ಧಕ್ಕಾಗಿ ತಂದು ನಿಲ್ಲಿಸುತ್ತಾನೆ. ಇದರಿಂದ ರಾಕ್ಷಸರ ಸಮೂಹದ ವಧೆ ತಾನಾಗಿಯೇ ಆಗುತ್ತದೆ.

**ವ್ರೀಡಾನತಾಚ್ಚವಿಮುಖಃ ಸಹಿತೋ ನೃಪೈಸ್ಸ್ವೈ-**
**ರ್ಬಾರ್ಹದ್ರಥಃ ಪ್ರತಿಯಯೌ ಸ್ವ ಪುರೀಂ ಸ ಪಾಪಾಃ।**
**ಆತ್ಮಾಭಿಷಿಕ್ತಮಪಿ ಭೋಜವರಾಧಿ ಪತ್ಯೇ**
**ದೌಹಿತ್ರ ಮಗ್ರತ ಉತ ಪ್ರಣಿಧಾಮ ಮಂದಃ ॥೪೨॥**

ಆ ಪಾಪಿಷ್ಠನಾದ ಜರಾಸಂಧನು, ನಾಚಿಕೊಂಡು, ಯುದ್ಧದಿಂದ ವಿಮುಖನಾಗಿ, ಉಳಿದಿರುವ ಕೆಲವು ರಾಜರೊಡನೆ ತನ್ನ ರಾಜಧಾನಿಗೆ ಹಿಂದಿರುಗಿದನು. ಭೋಜಾಧಿಪತ್ಯಕ್ಕೆ ಅಭಿಷಿಕ್ತನಾಗಬೇಕಾದ ತನ್ನ ದೌಹಿತ್ರನನ್ನು ಕೂಡಿಕೊಂಡೆ ಆ ಮಂದಬುದ್ಧಿಯು ಹಿಂದಿರುಗಿದನು.

ವಿ.ವಿ. ಇಲ್ಲಿ ಉತ ಎನ್ನುವ ಪದವನ್ನು ಬಳಸಿದ್ದರಿಂದ ಜರಾಸಂಧನು ಬರುವಾಗ ಮಗಳ ಮಗನನ್ನು ಕರೆತಂದಿದ್ದನು ಎಂದು ಅರ್ಥವಾಗುತ್ತದೆ. 'ಮಗಳ ಮಗ' ಅಂದರೆ ಕಂಸನ ಮಗ. ಇವನು ಇರುವಾಗ ಶ್ರೀಕೃಷ್ಣನು ಉಗ್ರಸೇನನಿಗೆ ಏಕೆ ಪಟ್ಟಕಟ್ಟಿದನು?------ಉತ್ತರ ಬೇಕು.

**ಜಿತ್ವಾ ತಮೂರ್ಜಿತಬಲಂ ಭಗವಾನಜೇಶ-**
**ಶಕ್ರಾದಿಭಿಃ ಕುಸುಮವರ್ಷಿಭಿರೀಡ್ಯ ಮಾನಃ।**
**ರಾಮಾದಿಭಿಃ ಸಹಿತ ಆಶು ಪುರೀಂ ಪ್ರವಿಶ್ಯ**
**ರೇಮೇಽಭಿವಂದಿತಪದೋ ಮಹತಾಂ ಸಮೂಹೈಃ ॥೪೩॥**

ಶ್ರೀಕೃಷ್ಣನು ವೈರಿಯ ಬಲವನ್ನು ಗೆದ್ದನು. ಇದನ್ನು ಕಂಡ ಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳು ಸಂತುಷ್ಟರಾಗಿ ಪುಷ್ಪವೃಷ್ಟಿಯನ್ನು ಮಾಡಿ ಸ್ತುತಿಸಿದರು. ಬಲರಾಮನೊಂದಿಗೆ ಶ್ರೀಕೃಷ್ಣನು ತನ್ನ ಪುರವನ್ನು ಪ್ರವೇಶಿಸಿದನು. ಶ್ರೇಷ್ಠವಾದ ಪಾದಗಳಿಗೆ ಎಲ್ಲರೂ ಅಭಿವಂದಿಸಿದರು. ಶ್ರೀಕೃಷ್ಣನು ಆನಂದದಿಂದ ಕಾಲಕಳೆಯುತ್ತಿದ್ದನು.

ಪಾಂಡವರ ಚರಿತ್ರೆ.

**ವರ್ಧತ್ಸು ಪಾಂಡುತನಯೇಷು ಚತುರ್ದಶಂ ತು**
**ಜನ್ಮರ್ಕ್ಷಮಾಸ ತನಯಸ್ಯ ಸಹಸ್ರ ದೃಷ್ಟೇಃ**
**ಪ್ರತ್ಯಾಬ್ದಿಕಂ ಮುನಿಗಣಾನ್ ಪರಿವೇಷಯಂತೀ**
**ಕುಂತೀ ತದಾಸ ಬಹುಕಾರ್ಯಪರಾ ನಯಜ್ಞಾ ॥೪೪॥**

ಪಾಂಡುರಾಜನ ಮಕ್ಕಳು ಬೆಳೆಯುತ್ತಿದ್ದಾರೆ. ಇಂದ್ರಸುತನಿಗೆ ಹದಿನಾಲ್ಕು ವರ್ಷ ತುಂಬಿವೆ. ಯಾವ ಮಾಸದಲ್ಲಿ ಜನ್ಮ ನಕ್ಷತ್ರ ಬರುವುದೋ ಅಂದೇ ಆತನ ಹುಟ್ಟುಹಬ್ಬ. ಪ್ರತಿವರ್ಷದಂತೆ ಕುಂತಿದೇವಿ ಅಂದು ಅನೇಕ ಮುನಿಗಳಿಗೆ ಆಮಂತ್ರಣವಿತ್ತಿದ್ದಾಳೆ. ಅನ್ನ ಸಂತರ್ಪಣೆ ನಡೆದಿದೆ. ಕುಂತಿ ಅನೇಕ ಧಾರ್ಮಿಕ ಕಾರ್ಯಗಳಲ್ಲಿತೊಡಗಿದ್ದಾಳೆ.

ವಿ.ವಿ. ಅಂದಿನ ಕಾಲದಲ್ಲಿ ಜನ್ಮ ನಕ್ಷತ್ರ ಮತ್ತು ಮಾಸಕ್ಕೆ ಮಹತ್ವವಿದ್ದಿತು. ಇಂದು ತಿಥಿ ದಿನಾಂಕ ಮತ್ತು ತಿಂಗಳಿಗೆ ಪ್ರಾಶಸ್ತ್ಯ ದೊರಕಿದೆ. ಇಂದಿಗೂ ದಕ್ಷಿಣ ಭಾರತದಲ್ಲಿ ನಕ್ಷತ್ರಗಳ ಮೇಲೆ ತಿಂಗಳುಗಳನ್ನು ಎಣಿಸುತ್ತಾರೆ. ನಮ್ಮದು ಹಾಗಲ್ಲ.

**ತತ್ಕಾಲ ಏವನೃಪತಿಃ ಸಹ ಮಾದ್ರವತ್ಯಾ**
**ಪುಂಸ್ಕೋಕಿಲಾಕುಲಿತಪುಲ್ಲವನಂ ದದರ್ಶ।**
**ತಸ್ಮಿನ್ ವಸಂತಪವನಸ್ಪರ್ಶೇಧಿತಃ ಸ**
**ಕಂದರ್ಪಮಾರ್ಗಣವಶಂ ಸಹಸಾ ಜಗಾಮ ॥೪೫॥**

ಅದೇ ಸಮಯದಲ್ಲಿ ಪಾಂಡುರಾಜನು ಮಾದ್ರಿಯೊಡಗೂಡಿ ವಿಹಾರಕ್ಕೆಂದು ಹೊರಟನು. ವನದಲ್ಲಿ ಅನೇಕ ಅರಳಿದ ಪುಷ್ಪಗಳು ತುಂಬಿದ್ದವು. ಬಣ್ಣಬಣ್ಣದ ಪಕ್ಷಿಗಳು ಹಾರಾಡುತ್ತಿದ್ದವು. ವಸಂತ (ಮಾಸದ) ಸಮಯ. ಗಂಡು ಕೋಗಿಲೆಯ ಗಾನ ಕಿವಿಗೆ ಇಂಪಾಗಿತ್ತು. ಈ ದೃಶ್ಯವನ್ನು ಕಂಡ ಪಾಂಡುರಾಜನು ಸಹಜವಾಗಿಯೇ ಕಾಮನ ಬಾಣಕ್ಕೆ ವಶನಾದನು. ನಿಸರ್ಗದ ಆಕರ್ಷಣೆ ಪ್ರಬಲವಾಯಿತು.

ಜಗ್ರಾಹ ತಾಮಥ ತಯಾ ರಮಮಾಣಏವ
ಯಾತೋ ಯಮಸ್ಯ ಸದನಂ ಹರಿಪಾದಸಂಗೀ।
ಪೂರ್ವಂ ಶಚೀರಮಣವಿಚ್ಯೇತ ಏಷ ವಿಘ್ನಂ
ಶಕ್ರಸ್ಯ ಸದ್ದರ್ಶನೋಪಗತೋ ಹಿ ಚಕ್ರೇ ॥೪೬॥

ತೇನೈವ ಮಾನುಷಮವಾಪ್ಯ ರತಿಸ್ಥ ಏವ
ಪಂಚತ್ವಮಾಪ ರತಿವಿಘ್ನ ಮಪುತ್ರತಾಂ ಚ।
ಸ್ವಾತ್ಮೋತ್ತಮೇಷ್ವಥ ಸುರೇಷು ವಿಶೇಷತಶ್ಚ
ಸ್ವಲ್ಪೋಽಪಿ ದೋಷ ಉರುತಾಮಭಿಯಾತಿ ಯಸ್ಮಾತ್ ॥೪೭॥

ಮಾದ್ರೀ ಪತಿಂ ಮೃತಮವೇಕ್ಷ್ಯರುರಾವ ದೂರಾತ್
ತಚ್ಛುಶ್ರುವುಶ್ಚ ಪೃಥಯಾ ಸಹ ಪಾಂಡು ಪುತ್ರಾಃ।
ತೇ ಸ್ವಾಗತೇಷು ವಚನಾದಪಿ ಮಾದ್ರವತ್ಯಾಃ
ಪುತ್ರಾನ್ನಿವಾರ್ಯ ತು ಪೃಥಾ ಸ್ವಯಮೇವ ಚಾಗಾತ್ ॥೪೮॥

ಪಾಂಡುರಾಜನು ಮಾದ್ರಿಯನ್ನು ಕಾಮಕೇಳಿಗಾಗಿ ಕರೆದನು. ಬಲಾತ್ಕರಿಸಿದನು. ಅದೇ ಸಮಯದಲ್ಲಿ ಆತನು ಯಮಸದನಕ್ಕೂ ನಡೆದನು. (ಸತ್ತನು.) ಸುಜೀವಿಯಾದುದರಿಂದ ಹರಿಪಾದವನ್ನು ಹೊಂದಿದನು.

(ಪಾಂಡುರಾಜನಿಗೆ ಕಿಂದಮ ಋಷಿಗಳ ಶಾಪವಿದ್ದಿತೆಂದು ಹಿಂದೆ ಹೇಳಿ ಆಗಿದೆ. ಆದರೆ ಇಲ್ಲ ಅದಕ್ಕೂ ಪ್ರಬಲವಾದ ಕಾರಣವನ್ನು ಶ್ರೀಮದಾಚಾರ್ಯರು ತೋರಿಸುತ್ತಿದ್ದಾರೆ.)- ಲೇಖಕ.

ಪಾಂಡುರಾಜನ ಪೂರ್ವದಲ್ಲಿ 'ಪರಾವಹ' ಎಂಬ ಮರುತನು. ಆತನು ಒಂದುಸಲ ಇಂದ್ರನನ್ನು ಕಾಣಬೇಕೆಂದು ನಡೆದನು. ಆಗ ಇಂದ್ರನು ಶಚೀ ದೇವಿಯರೊಂದಿಗೆ ಏಕಾಂತದಲ್ಲಿದ್ದನು. ಪರಾವಹನ ಆಗಮನದಿಂದ ಇಂದ್ರನ ರತಿಕ್ರೀಡೆಗೆ ವಿಘ್ನವಾಯಿತು. ಇದೊಂದು ಮಹತ್ತರವಾದ ಪಾಪ. ಆ ಪಾಪದ ಪ್ರಯುಕ್ತ, ಆ ಪರಾವಹನು ಮಾನವನಾಗಿ ಹುಟ್ಟಿ ರತಿಕ್ರೀಡೆಯಲ್ಲಿ ತೊಡಗಿದಾಗಲೇ ಮೃತ್ಯುವಿಗೆ ತುತ್ತಾದನು. ಅಷ್ಟೇ ಅಲ್ಲ ಅದರ ಪರಿಣಾಮದಿಂದ ಔರಸ ಸಂತತಿಯೂ ಇಲ್ಲದವನಾದನು. ಅಪರಾಧ ಅಲ್ಪವಾದರೂ , ಶಿಕ್ಷೆ ಗುರುತರವಾಯಿತು.

ವಿ.ವಿ. ಸ್ವೋತ್ತಮರಲ್ಲಿ ಸಜ್ಜನರಲ್ಲಿ, ದೇವತೆಗಳಲ್ಲಿ ನಾವು ಅಲ್ಪ ಅಪರಾಧ ಮಾಡಿದರೂ ಅದರ ಫಲ ಮಾತ್ರ ಮಹತ್ತಾಗಿರುತ್ತದೆ ಎಂಬುದನ್ನು ಮಾತ್ರ ನಾವು ಮರೆಯಬಾರದು. ಮಾದ್ರಿಯ ಪತಿಯೇ ಅದಕ್ಕೆ ನಿದರ್ಶನ.

ಪತಿಯ ಮರಣವನ್ನು ಕಂಡು ಮಾದ್ರಿಯು ಗಟ್ಟಿಯಾಗಿ ರೋದಿಸಹತ್ತಿದಳು. ಅದನ್ನು ಕೇಳಿದ ಕುಂತಿ ಮಕ್ಕಳೊಡನೆ ಅಲ್ಲಿಗೆ ಬಂದಳು. 'ಮಕ್ಕಳನ್ನು ದೂರ ನಿಲ್ಲಿಸಿ ನೀನೇ ಬಾ' ಎಂದು ಮಾದ್ರಿಯು ಕೂಗಿದಾಗ ಕುಂತಿಯು ಮಕ್ಕಳನ್ನು ಅಲ್ಲಿಯೇ ತಡೆದು ತಾನು ಮುಂದೆ ಬಂದಳು.

**ಪತ್ಯುಃ ಕಲೇವರ ಮವೇಕ್ಷ್ಯ ನಿಶಮ್ಯ ಮಾದ್ರ್ಯಾಃ**
**ಕುಂತೀ ಭೃಶಂ ವ್ಯಥಿತ ಹೃತ್ಕಮಲೈವ ಮಾದ್ರೀಮ್।**
**ಧಿಕ್ಕೃತ್ಯ ಚಾನುಮರಣಾಯ ಮತಿಂ ಚಕಾರ**
**ತಸ್ಯಾಃ ಸ್ವನೋರುದಿತಜಃ ಶ್ರುತ ಆಶು ಪಾರ್ಥೈಃ ॥೪೯॥**

ಪತಿಯ ಕಳೇಬರವನ್ನು ಕಂಡು, ಮಾದ್ರಿಯಿಂದ ನಡೆದ ವೃತ್ತಾಂತ ಕೇಳಿ, ಕುಂತಿಯ ಹೃದಯವು ಬಹುವಾಗಿ ನೊಂದಿತು. ದುಃಖದಿಂದ ಸಂತಪ್ತಳಾದಳು. ಮಾದ್ರಿಯನ್ನು ಧಿಃಕ್ಕರಿಸಿದಳು. ಪತಿಯ ಜೊತೆಯಲ್ಲಿ 'ಸಹಗಮನ'ಕ್ಕೆ ಸಿದ್ಧಳಾದಳು. ಗಟ್ಟಿಯಾಗಿ ರೋದಿಸಪತ್ತಿದಳು.

ದೂರದಲ್ಲಿದ್ದ ಅರ್ಜುನನೇ ಮೊದಲಾದ ಪಾಂಡವರು ರೋದನವನ್ನೂ ಕೇಳಿದರು.

**ತೇಷ್ವಾಗತೇಷ್ವಧಿಕ ಆಸ ವಿರಾವ ಏತಂ**
**ಸರ್ವೇಽಪಿ ಶುಶ್ರುವು ಋಷಿಪ್ರವರಾ ಅಥಾತ್ರ।**
**ಅಜಗ್ಮುರುತ್ತಮ ಕೃಪಾಪಿಲೋಕ ಮಧ್ಯೆ**
**ಪತ್ನೀ ನೃಪಾನುಗಮನಾಯ ಚ ಪಸ್ಪೃಧಾತೇ ॥೫೦॥**

ಪಾಂಡವರು ಶವದತ್ತ ಸಮೀಪಿಸಿದಂತೆ ರೋದನವು ಅಧಿಕವಾಯಿತು. ಅದನ್ನು ಸುತ್ತಲಿನ ಎಲ್ಲ ಋಷಿಗಳು ಕೇಳಿದರು. ಅವರೆಲ್ಲರು ಅಲ್ಲಿಗೆ ಬಂದರು. ಅವರಲ್ಲಿಯ ಕರುಣಾಳು ಮತ್ತು ದಯಾರ್ದ್ರರಾದ ಒಬ್ಬ ಋಷಿಗಳು ಮುಂದೆ ಬಂದರು. ಪತ್ನಿಯರಿಬ್ಬರಲ್ಲಿ ಸಹಗಮನಕ್ಕಾಗಿ ಸ್ಪರ್ಧೆನಡೆದಿತ್ತು.

**ತೇ ಸನ್ನಿವಾರ್ಯ ತು ಪೃಥಾಮಥ ಮಾದ್ರವತ್ಯಾ**
**ಭರ್ತುಃ ಸಹಾನುಗಮನಂ ಬಹು ಶೋಽರ್ಥಯಂತ್ಯಾಃ।**
**ಸಂವಾದಮೇವ ನಿಜದೋಷ ಮವೇಕ್ಷ್ಯ ತಸ್ಯಾ**
**ಶ್ಚಕ್ರುಃ ಸದಾವಗತ ಭಾಗವತೋಚ್ಚಧರ್ಮಾಃ ॥೫೧॥**

ಆ ಋಷಿಗಳು ಕುಂತಿಯನ್ನು ತಡೆದರು. ಮಾದ್ರಿಗೆ ಪತಿಯೊಡನೆ ಸಹಗಮನಕ್ಕೆ ಅಪ್ಪಣೆಯಿತ್ತರು. ಏಕೆ?

ಆ ಋಷಿಗಳು ಸರ್ವೋಚ್ಚ ಭಾಗವತ ಧರ್ಮಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ಮಾದ್ರಿ ಮತ್ತು ಕುಂತಿಯರಿಬ್ಬರ ಮಾತುಗಳನ್ನು ಪೂರ್ತಿಯಾಗಿ ಆಲಿಸಿದ ಬಳಿಕ ಮಾದ್ರಿಯೇ ದೋಷಯುಕ್ತಳು. ಗಂಡನ ಮರಣಕ್ಕೆ ಅವಳೇ ಕಾರಣಳು. ಅವಳಿಗೆಯೇ ಸಹಗಮನ ಯೋಗ್ಯವು ಎಂದು ನಿರ್ಣಯಿಸಿದರು.

ಇಲ್ಲಿ ಇದು ಸಹಗಮನವೇ? ಶಿಕ್ಷೆಯೇ?
ವಿ.ವಿ. ಸಹಗಮನ ಧರ್ಮವಾಗಿದ್ದಲ್ಲಿ, ಅದು ಇಬ್ಬರಿಗೂ ಅವಶ್ಯವಾಗಿರುತ್ತಿತ್ತು. ಅದು ಹಾಗಾಗಿಲ್ಲ. ಮೇಲಾಗಿ ಮುನಿಗಳು ಬೇರೊಂದೆಡೆ ಹೀಗೆ ಹೇಳಿದ್ದಾರೆ. "ಕುಂತಿ, ನೀನು ಹಿರಿಯಳು, ಮಕ್ಕಳು

ಚಿಕ್ಕವು. ಅವುಗಳನ್ನು ರಕ್ಷಿಸುವ ಭಾರ ನಿನ್ನದು. ರಾಜನೀತಿಯನ್ನು ಪಾಲಿಸುವ ಪೊಣೆ ನಿನ್ನ ಮೇಲಿದೆ, ಕಾರಣ ಸಹಗಮನ ನಿನಗೆ ಉಚಿತವಲ್ಲ.''

ಮೇಲಿನ ಮಾತುಗಳನ್ನು ವಿಚಾರಿಸಿದಾಗ, 'ಸಹಗಮನ' ಧರ್ಮದ ದೃಷ್ಟಿಯಿಂದ ಅನುಮತಿ ಪಡೆದದ್ದಲ್ಲ. ಪತಿ-ಪತ್ನಿಯ ಸ್ನೇಹ, ಭಾವಾವೇಶ, ಸಾಮಾಜಿಕ ಪರಿಸ್ಥಿತಿ, ಪರಿಸರದ ಪ್ರಭಾವ, ಇವುಗಳ ಪ್ರಭಾವದಲ್ಲಿ ಸಹಗಮನ ಪದ್ಧತಿ ಜಾರಿಯಲ್ಲಿ ಬಂದದ್ದು ಕಂಡು ಬರುತ್ತದೆ. ಮುಂದೆ ಭಾರತದಲ್ಲಿ ರಾಜಕೀಯ ಪರಿಸ್ಥಿತಿಯೂ ಇದಕ್ಕೆ ದಾರಿಮಾಡಿಕೊಟ್ಟಿತು ಎಂದರೆ ಸತ್ಯಕ್ಕೆ ಸಮೀಪವಾದೀತು.

ಮಾದ್ರಿಯ ದೋಷಗಳ ವಿವರಣೆ.

ಭರ್ತುರ್ಗುಣೈರನಧಿಕಾ ತನಯಾರ್ಥಮೇವ
ಮಾದ್ರ್ಯಾಕೃತೌ ಸುರವರಾವಧಿಕೌ ಸ್ವತೋऽಪಿ।
ತೇನೈವ ಭರ್ತೃ ಮೃತಿಹೇತುರಭೂತ್ ಸಮಸ್ತ
ಲೋಕೈಶ್ಚ ನಾತಿ ಮಹಿತಾ ಸುಗುಣಾಪಿ ಮಾದ್ರೀ ॥೫೨॥

ಮಾದ್ರಿಯು ಮಕ್ಕಳಿಗಾಗಿ, ಗಂಡನಿಗಿಂತ ಗುಣಗಳಲ್ಲಿ ಅಧಿಕರಲ್ಲದ ದೇವತೆಗಳನ್ನು ಆಹ್ವಾನಿಸಿದ್ದಾಳೆ. ಆ ದೇವತೆಗಳು ಮಾದ್ರಿಗಿಂತ ಗುಣಗಳಲ್ಲಿ ಅಧಿಕರಾಗಿರಬಹುದು. ಆದರೂ ಅದು ಅಧರ್ಮ. ಅದುವೇ ಗಂಡನ ಮೃತ್ಯುವಿಗೆ ಕಾರಣವಾಯಿತು. ಅಲ್ಲದೆ ಗುಣಗಳಲ್ಲಿ ಶ್ರೇಷ್ಠಳೂ ಅಲ್ಲ. ಜಗತ್ತಿಗೆ ಪೂಜ್ಯಳೂ ಅಲ್ಲ.

ವಿ.ವಿ. ಪಾಂಡುರಾಜನ ಮರಣಕ್ಕೆ ಮೂರು ಕಾರಣಗಳು.

೧. ಮಾದ್ರಿಯು ಮಾಡಿದ ಅಧರ್ಮ ಕಾರ್ಯ.

೨. ಇಂದ್ರನ ಮಾನಸಿಕ ಸಂತಾಪ.

೩. ಕಿಂದಮ ಋಷಿಗಳ ಶಾಪ.

ಮೂರರಲ್ಲಿ ಮರಣಕ್ಕೆ ಒಂದೇ ಕಾರಣ ಸಾಕು. ಆದರೆ ಇಲ್ಲಿ ಮೂರೂ ಕೂಡಿವೆ. ಅಂದಮೇಲೆ ಮರಣ ತಪ್ಪಲು ಸಾಧ್ಯವಾದೀತೆ?

ಪಾಂಡೋಃ ಸುತಾ ಮುನಿಗಣೈಃ ಪಿತೃಮೇಧಮತ್ರ
ಚಕ್ರುರ್ಯಥಾವದಥ ತೇನ ಸಹೈವ ಮಾದ್ರಿ।
ಹುತ್ವಾತ್ಮ ದೇಹಮುರುಪಾಪಮದಃ ಕೃತಂ ಚ
ಸಮ್ಮಾರ್ಜ್ಯ ಲೋಕಮಗಮನ್ನಿಜಭರ್ತುರೇವ ॥೫೩॥

ಪಾಂಡುರಾಜನ ಮಕ್ಕಳು, ಮುನಿಗಳ ಸಹಾಯದಿಂದ ಪಿತೃದೇಹಕ್ಕೆ ಅಗ್ನಿಯನ್ನಿತ್ತು, ಯಥಾವಿಧಿಯಿಂದ ಪಿತೃಯಜ್ಞವನ್ನು ಸಮಾಪ್ತಿಗೊಳಿಸಿದರು. ಮಾದ್ರಿಯು ತನ್ನ ಸ್ವಯಂಕೃತ ಅಪರಾಧದ ಪ್ರಾಯಶ್ಚಿತ್ತಕ್ಕಾಗಿ ಆ ಪಾಪಮಯ ದೇಹವನ್ನು ಅಗ್ನಿಗೆ ಸಮರ್ಪಿಸಿ ಪತಿಯೊಂದಿಗೆ ಪರಲೋಕಕ್ಕೆ ತೆರಳಿದಳು.

**ಪಾಂಡೋಶ್ಚ ಪುತ್ರಕಗುಣ್ಯೈ: ಸ್ವಗುಣೈಶ್ಚ ಸಾಕ್ಷಾತ್**
**ಕೃಷ್ಣಾತ್ಮಜ: ಸತತಮಸ್ಯ ಪದೈಕಭಕ್ತ:।**
**ಲೋಕಾನವಾಪ ವಿಮಲಾನ್ಮಹಿತಾನ್ಮಹದ್ಭಿ:**
**ಕಿಂ ಚಿತ್ರ ಮತ್ರ ಹರಿಪಾದ ವಿನಮ್ರ ಚಿತ್ತೇ ॥೫೪॥**

ಪಾಂಡುರಾಜನು ಶ್ರೀವೇದವ್ಯಾಸರ ಪುತ್ರನು. ಸ್ವರೂಪತ: ಒಳ್ಳೆಯ ಗುಣಗಳುಳ್ಳವನು. ಸಾಕ್ಷಾತ್ ಶ್ರೀಕೃಷ್ಣನ ಪಾದಗಳಲ್ಲಿ ಭಕ್ತಿಯುಳ್ಳವನು. ಅಲ್ಲದೆ ಏಕಾಂತ ಭಕ್ತನು ಕೂಡ. ಈ ಕಾರಣಗಳಿಗಾಗಿ ಅವನು ಪವಿತ್ರ ಮತ್ತು ಶ್ರೇಷ್ಠನಾದ ಲೋಕಗಳನ್ನೇ ಹೊಂದಿದನು. ಹರಿಪಾದಗಳಲ್ಲಿ ವಿನಮ್ರಚಿತ್ತರಾದವರಿಗೆ ಸದ್ಗತಿ ದೊರೆಯುವುದು ಏನಾಶ್ಚರ್ಯ?

**ಪಾಂಡೋ: ಸುತಾಶ್ಚ ಪೃಥಯಾ ಸಹಿತಾ ಮುನೀಂದ್ರೈ**
**ರ್ನಾರಾಯಣಾಶ್ರಮತ ಆಶು ಪುರಂ ಸ್ವಕೀಯಮ್।**
**ಜಗ್ಮುಸ್ತಥೈವ ಧೃತರಾಷ್ಟ್ರ ಪುರೋ ಮುನೀಂದ್ರಾ**
**ವೃತ್ತಂ ಸಮಸ್ತ ಮದದನ್ನನುಜಂ ಮೃತಂ ಚ ॥೫೫॥**

ಪಾಂಡುರಾಜನ ಮಕ್ಕಳು, ತಾಯಿಯಾದ ಕುಂತಿ ಸಹಿತರಾಗಿ, ಮುನಿಗಳೊಂದಿಗೆ ನಾರಾಯಣಾಶ್ರಮವನ್ನು ಬಿಟ್ಟು, ತಮ್ಮ ನಗರವಾದ ಹಸ್ತಿನಾವತಿಗೆ ಬಂದರು. ಬಂದ ಋಷಿಗಳು ಧೃತರಾಷ್ಟ್ರನಿಗೆ ತಮ್ಮನಾದ ಪಾಂಡುವಿನ ಮರಣ ಮತ್ತು ಇತರ ವಿಚಾರಗಳನ್ನು ಸವಿಸ್ತಾರವಾಗಿ ತಿಳಿಸಿದರು.

**ತೂಷ್ಣೀಂ ಸ್ಥಿತೇ ಚ ನೃಪತೌ ತನುಜೇ ಚ ನದ್ಯಾ:**
**ಕ್ಷತ್ತರ್ಯುತಾತ್ತ ಉರುಮೋದಮತೀವ ಪಾಪಾ:।**

**ಊಚು: ಸುಯೋಧನಮುಖಾ: ಸಹ ಸೌಬಲೇನ**

**ಪಾಂಡೋರ್ಮೃತಿ: ಕಿಲಪುರಾ ತನಯಾ: ಕ್ವ ತಸ್ಯ ॥೫೭॥**

ಆ ಮಾತನ್ನು ಕೇಳಿದ ಧೃತರಾಷ್ಟ್ರನು ಸುಮ್ಮನಾದನು. ಭೀಷ್ಮಾಚಾರ್ಯರು ಮೌನವನ್ನು ತಾಳಿದರು. ಪಾಪಿಯಾದ ದುರ್ಯೋಧನ ಮತ್ತು ಆತನ ಮಿತ್ರರು, ಪಾಂಡು ಮೊದಲೇ ಮರಣ ಹೊಂದಿದ್ದಾನೆ. ಅಂದಮೇಲೆ ಆತನಿಗೆ ಮಕ್ಕಳೆಲ್ಲಿ?

**ನ ಕ್ಷೇತ್ರಜಾ ಅಪಿ ಮೃತೇ ಪಿ ತರಿಸ್ವಕೀಯೈ:**

**ಸಮ್ಯಜ್ಞ್ನೆ ಯೋಗಮವಾಪ್ಯ ಭವಾಯ ಯೋಗ್ಯಾ:।**

**ತೇಷಾಮಿತೀರಿತವಚೋऽನು ಜಗಾದ ವಾಯು–**

**ರಾಭಾಷ್ಯ ಕೌರವಗನಾನ್ ಗಗನಸ್ಥ ಏವ ॥೫೭॥**

ಕ್ಷೇತ್ರಜನು (ರಾಜನು) ಮಕ್ಕಳಿಲ್ಲದೆ ಮೃತನಾದ ಪಕ್ಷದಲ್ಲಿ, ಆತನ ಹೆಂಡತಿ ಹಿರಿಯರಿಂದಲೂ, ಆತನ ಬಂಧುಗಳಿಂದಲೂ, ಆಜ್ಞೆಯನ್ನು ಪಡೆಯದೆ ಮಕ್ಕಳನ್ನು ಪಡೆದದ್ದಾದರೆ, ಅವರು ಕ್ಷೇತ್ರಜನ ಮನೆತನಕ್ಕೆ ಯೋಗ್ಯರಾಗರು. ಹೀಗೆಂದು ಅವರು ಕೂಗುತ್ತಿರಲು ಆಕಾಶದಲ್ಲಿ ವಾಯುವು ಅದೇ ಕಾಲಕ್ಕೆ ಗಟ್ಟಿಯಾಗಿ ಮಾತನಾಡಿದನು.

**ಏತೇ ಹಿ ಧರ್ಮಮರುದಿಂದ್ರ ಭಿಷಗ್ವರೇಭ್ಯೋ**

**ಜಾತಾ: ಪ್ರಜೀವತಿ ಪಿತುರ್ಯುರುಧರ್ಮ ಸಾರಾ:।**

**ಶಕ್ಯಾಶ್ಚ ನೈವ ಭವತಾಂ ಕ್ವಚಿದಗ್ರ ಹಾಯ**

**ನಾರಾಯಣೇನ ಸತತಂ ಪರಿರಕ್ಷಿತಾಯತ್ ॥೫೮॥**

ಇವರೆಲ್ಲರೂ ಧರ್ಮ, ವಾಯು, ಇಂದ್ರ ಮತ್ತು ಅಶ್ವಿನಿ ದೇವತೆಗಳ ವರಗಳಿಂದಲೇ ಬಂದವರು. ಪಾಂಡು ಚಕ್ರವರ್ತಿ ಬದುಕಿರುವಾಗಲೇ ಹುಟ್ಟಿದವರು. ಧರ್ಮಾನುಸಾರವಾಗಿಯೇ ಆಜ್ಞೆಗೆ ಒಳಗಾದವರು. ಇವರನ್ನು ಹೊರಗಟ್ಟಲು ನಿಮ್ಮಿಂದ ಶಕ್ಯವಿಲ್ಲ. ನಾರಾಯಣನು ಇವರಿಗೆ ಯಾವಾಗಲೂ ರಕ್ಷಕನಾಗಿದ್ದಾನೆ.

ವಾಯೋರದೃಶ್ಯವಚನಂ ಪರಿಶಂಕಮಾನೇ
ಷ್ವಾವಿರ್ಬಭೂವ ಭಗವಾನ್ ಸ್ವಯ ಮಬ್ಜನಾಭಃ।
ವ್ಯಾಸಸ್ವರೂಪ ಉರುಸರ್ವಗುಣೈಕ ದೇಹ
ಆದಾಯ ತಾನಗಮದಾಶು ಚ ಪಾಂಡುಗೇಹಮ್ ॥೫೯॥

ವಾಯುವಿನ ಈ ಅದೃಶ್ಯ ವಚನವನ್ನು ಕೇಳಿ ಅವರು ಶಂಕೆಗೊಳಗಾದರು. ಆಗ ಸ್ವಯಂ ಕಮಲನಾಭನಾದ ನಾರಾಯಣನೇ ಸರ್ವೋತ್ಕೃಷ್ಟ ಗುಣಗಳ ದೇಹವುಳ್ಳವನಾಗಿ ವ್ಯಾಸರ ರೂಪದಲ್ಲಿ ಪ್ರಕಟನಾದನು. ಅಲ್ಲಿಂದ ಆ ಮಕ್ಕಳನ್ನು ಪಾಂಡುರಾಜನ ಮನೆಗೆ ಕರೆದುಕೊಂಡು ಹೋದನು.

ತಸ್ಮಿ್ೀಕೃತೇಷು ಸಕಲಾ ಅಪಿ ಭೀಷ್ಮ ಮುಖ್ಯಾ
ವೈಚಿತ್ರ ವೀರ್ಯಸಹಿತಾಃ ಪರಿಪೂಜ್ಯ ಸರ್ವಾನ್।
ಕುಂತ್ಯಾ ಸಹೈವ ಜಗೃಹುಃ ಸುಭೃಶಂ ತದಾರ್ತಾ
ವೈಚಿತ್ರ ವೀರ್ಯತನಯಾಃ ಸಹ ಸೌಬಲೇನ ॥೬೦॥

ವ್ಯಾಸರೇ ಅವರನ್ನು ಸ್ವೀಕರಿಸಿದಾಗ ಭೀಷ್ಮ ಮುಖ್ಯಾದಿಗಳೂ, ಧೃತರಾಷ್ಟ್ರ ಆದಿಯಾಗಿ ಎಲ್ಲರೂ ಅವರನ್ನು ಪೂಜ್ಯಭಾವದಿಂದ ಕಂಡರು. ಕುಂತಿ ದೇವಿಯರಿಗೂ ಗೌರವ-ಆದರಗಳನ್ನಿತ್ತರು. ಇದನ್ನು ಕಂಡು ಧೃತರಾಷ್ಟ್ರನ ಮಕ್ಕಳಿಗೂ ಅವರ ಸ್ನೇಹಿತರಾದ ಶಕುನಿ ಮುಂತಾದವರಿಗೆ ಅತೀವ ದುಃಖವಾಯಿತು.

ವೈಚಿತ್ರ ವೀರ್ಯತನಯಾಃಕೃಪತೋ ಮಹಾಸ್ತ್ರಾ-
ಣ್ಯಾಪುತ್ರಾಶ್ಚ ಪಾಂಡುತನಯೈಃ ಸಹ ಸರ್ವರಾಜ್ಞಾಮ್।
ಪುತ್ರಾಶ್ಚ ತತ್ರ ವಿವಿಧಾ ಅಪಿ ಬಾಲಚೇಷ್ಟಾಃ
ಕುರ್ವಂತ್ಸು ವಾಯು ತನಯೇನ ಜಿತಾಃ ಸಮಸ್ತಾಃ ॥೬೧॥

ಧೃತರಾಷ್ಟ್ರನ ಮಕ್ಕಳು, ಪಾಂಡವರು ಮತ್ತು ಇತರ ರಾಜಪುತ್ರರು ಕೃಪಾಚಾರ್ಯರಲ್ಲಿ ಮಹಾಸ್ತ್ರಗಳ ಪ್ರಯೋಗಗಳನ್ನು ಕಲಿಯುತ್ತಿದ್ದರು. ಅಲ್ಲಿ ಎಲ್ಲ ಮಕ್ಕಳು ಬಾಲಚೇಷ್ಟೆಗಳಿಂದ (ಮಕ್ಕಳ ಆಟಗಳಲ್ಲಿ) ಅನೇಕ ಆಟಗಳನ್ನು ಆಡುತ್ತಿದ್ದರು. ವಾಯುಪುತ್ರನೇ ಎಲ್ಲವನ್ನು ಗೆಲ್ಲುತ್ತಿದ್ದನು.

ಪಕ್ವೋರು ಭೋಜ್ಯಫಲಸನ್ನಯನಾಯ ವೃಕ್ಷೇ-
ಷ್ವಾರೂಢ ರಾಜತನಯಾನಭಿವೀಕ್ಷ್ಯ ಭೀಮಃ।
ಪಾದ ಪ್ರಹಾರ ಮುರು ವೃಕ್ಷತಲೇ ಪ್ರದಾಯ
ಸಾಕಂ ಫಲೈರ್ವಿನಿಪತತ್ಸು ಫಲಾನ್ಯ ಭುಂಕ್ತ ॥೬೨॥

ಒಂದು ದಿನ ರಾಜಪುತ್ರರೆಲ್ಲರೂ, ಗಿಡದಲ್ಲಿರುವ ಪಕ್ವವಾದ ಫಲಗಳನ್ನು ತಿನ್ನಲು ಗಿಡವೇರಿದರು. ಅದನ್ನು ಭೀಮನು ನೋಡಿದನು. ತನ್ನ ಪಾದಗಳಿಂದ ಆ ವೃಕ್ಷದ ತಲದಲ್ಲಿ ಚೆನ್ನಾಗಿ ಪ್ರಹಾರ ಮಾಡಿದನು. ಅದರಿಂದ ಗಿಡದಲ್ಲಿದ್ದ ರಾಜಕುಮಾರರು, ಫಲಗಳ ಸಹಿತ ಕೆಳಗೆ ಬಿದ್ದರು. ಭೀಮನು ಎಲ್ಲ ಫಲಗಳನ್ನೂ ತಿಂದನು.

ಯುದ್ಧೇ ನಿಯುದ್ಧ ಉತ ಧಾವತ ಉತ್ಪ್ಲವೇ ಚ
ಪಾರಿಪ್ಲವೇ ಚ ನಿಖಿಲಾನ್ ಸಹಿತಾನ್ ಕುಮಾರಾನ್।
ಏಕೋ ಜಿಗಾಯ ತರಸಾ ಪರಮಾರ್ಯಕರ್ಮಾ
ವಿಷ್ಣೋಃ ಸುಪೂರ್ಣ ಸದನುಗ್ರಹತಃ ಸುನಿತ್ಯಾತ್ ॥೬೩॥

ಮಕ್ಕಳ ಆಟದಲ್ಲಿ, ದ್ವಂದ್ವಯುದ್ಧದಲ್ಲಿ, ಓಟದಲ್ಲಿ, ಜಿಗಿಯುವಲ್ಲಿ, ಹಾರುವುದರಲ್ಲಿ, ನೀರಿನಲ್ಲಿ ಹಾರಿ ಈಜುವುದರಲ್ಲಿ ಎಲ್ಲ ಆಟಗಳಲ್ಲೂ ಭೀಮನದೇ ಮೇಲುಗೈ ಆಗುತ್ತಿತ್ತು. ಎಲ್ಲ ರಾಜಕುಮಾರರನ್ನು ಅವನೇ ಗೆಲ್ಲುತ್ತಿದ್ದನು. ಅವನು ಯಾವಾಗಲೂ ಭಗವಂತನಿಗೆ ಪ್ರಿಯವಾದ ಕರ್ಮಗಳನ್ನೇ ಮಾಡುತ್ತಿದ್ದನು. ಅದರಿಂದ ಪರಮಾತ್ಮನ ಸಂಪೂರ್ಣ ಅನುಗ್ರಹವಿದ್ದಿತು.

ಸರ್ವಾನ್ ಪ್ರಗೃಹ್ಯ ವಿನಿಮಜ್ಜತಿ ವಾರಿಮಧ್ಯೇ
ಶ್ರಾಂತಾನ್ ವಿಸೃಜ್ಯ ಹಸತಿಸ್ಮಸ ವಿಷ್ಣುಪದ್ಯಾಮ್।
ಸರ್ವಾನುದೂಹ್ಯ ಚ ಕದಾಚಿದುರುಪ್ರವಾಹಾಂ
ಗಂಗಾಂ ಸ ತಾರಯತಿ ಸಾರಸುಪೂರ್ಣ ಪೌಂಸ್ಯಃ ॥೬೪॥

ಭೀಮಸೇನನು ಸರ್ವರನ್ನು ಹಿಡಿದುಕೊಂಡು ನೀರಿನ ಮಧ್ಯದಲ್ಲಿ ಮುಳುಗಿಸುತ್ತಿದ್ದನು. ಬಳಲಿದವರನ್ನು ಬಿಟ್ಟು ನಗುತ್ತಿದ್ದನು. ಸದಾ

ಭಗವಂತನ ಪಾದದಲ್ಲಿ ಮನಸಿಟ್ಟವನಾಗಿದ್ದನು. ಒಂದೊಂದು ಸಲ ಪೌರುಷಶಾಲಿಯಾದ ಭೀಮನು ಎಲ್ಲರನ್ನು ಎತ್ತಿಕೊಂಡು ಗಂಗೆಯ ಪೂರ್ಣ ಪ್ರವಾಹವನ್ನು ದಾಟುತ್ತಿದ್ದನು.

ಸಮುದ್ರವನ್ನೇ ದಾಟಿದವನಿಗೆ ಈ ಗಂಗೆಯನ್ನು ದಾಟುವುದು ಆಶ್ಚರ್ಯವೇ?

ಈ ರೀತಿ ಮಾಡುವುದರಲ್ಲಿ ಭೀಮಸೇನನ ಉದ್ದೇಶವೇನು?

**ದ್ವೇಷಂ ಹ್ಯೃತೇ ನ ಹಿ ಹಶಾ ತಮಸಿ ಪ್ರವೇಶ:**
**ಪ್ರಾಣೇ ಚ ತೇನ ಜಗತೀಮನು ತೌ ಪ್ರಪನ್ನೌ।**
**ತತ್ಕಾರಣಾನ್ಯ ಕುರುತಾಂ ಪರಮೌ ಕರಾಂಸಿ**
**ದೇವದ್ವಿಷಾಂ ಸತತವಿಸ್ಮೃತ ಸಾಧು ಪೌಂಸ್ಯೌ ॥೬೫॥**

ಶ್ರೀಹರಿಯಲ್ಲಿಯೂ, ಮುಖ್ಯ ಪ್ರಾಣನಲ್ಲಿಯೂ ದ್ವೇಷ ಹುಟ್ಟದೆ ಹೋದರೆ ಅಸುರರು ತಮಸ್ಸಿಗೆ ಯೋಗ್ಯರಾಗಲಾರರು. ಆ ಉದ್ದೇಶಕ್ಕಾಗಿಯೇ ಶ್ರೀಹರಿ ಮತ್ತು ವಾಯು, ಭೂಲೋಕದಲ್ಲಿ ಅವತರಿಸಿದ್ದಾರೆ. ಆ ಕಾರಣಕ್ಕಾಗಿಯೇ ಭೀಮನು ಕೌರವರೊಡನೆ ಹೆಚ್ಚು ದ್ವೇಷ ಮಾಡುತ್ತಿದ್ದನು. ಅವರಿಂದ ಶ್ರೀಹರಿಯ ವಿಷಯದಲ್ಲಿ ದ್ವೇಷವು ವಿಸ್ತೃತವಾಗಿ ಹಬ್ಬುವಂತೆ ಕಾರ್ಯಗಳನ್ನು ಮಾಡುತ್ತಿದ್ದನು. ಈ ಲೀಲೆಗಳನ್ನು ಕಂಡು ಸಜ್ಜನರು ಆನಂದಿಸುತ್ತಿದ್ದರು.

**ದೃಷ್ಟ್ವಾಮಿತಾನ್ಯಥ ಕರಾಂಸಿ ಮರುತ್ಸು ತೇನ**
**ನಿತ್ಯಂ ಕೃತಾನಿ ತನಯಾ ನಿಖಿಲಾಶ್ಚ ರಾಜ್ಞಾಮ್।**
**ತಸ್ಯಾಮಿತ: ಬಲಮುದೀಷ್ಯ ಸದೋರು ವೃದ್ಧ-**
**ದ್ವೇಷಾ ಬಭೂವುರಥ ಮಂತ್ರಮಮಂತ್ರಯಂಶ್ಚ ॥೬೬॥**

ಭೀಮನಿಂದ, ದಿನನಿತ್ಯ ಉಂಟಾಗುತ್ತಿರುವ ಅನೇಕ ಪೀಡೆಗಳನ್ನು ಕಂಡು, ಆತನ ಬಲವನ್ನು ಸಹಿಸಲಾರದೆ ಎಲ್ಲ ರಾಜಕುಮಾರರೂ ಆತನನ್ನು ದ್ವೇಷಿಸಹತ್ತಿದರು. ಅದು ದಿನನಿತ್ಯ ವೃದ್ಧಿಯಾಗಹತ್ತಿತು. ಎಲ್ಲರೂ ಸೇರಿ ಕುತಂತ್ರವನ್ನು ಯೋಚಿಸಿದರು.

ಯೇ ಯೇ ಹಿ ತತ್ರ ನರದೇವಸುತಾ: ಸುರಾಂಶಾ:
ಪ್ರೀತಿಂ ಪರಾಂ ಪವನಜೇನಿಖಿಲಾ ಅಕುರ್ವನ್।
ತಾಂಸ್ತಾನ್ ವಿಹಾಯ ದಿತಿಜಾ ನರದೇವವಂಶ ಜಾತಾ
ವಿಚಾರ್ಯ ವಧನಿಶ್ಚಯ ಮಸ್ಯ ಚಕ್ರು: ॥೬೭॥

ಯಾರು ಯಾರು ದೇವಾಂಶರಾಗಿದ್ದರೋ, ಆ ರಾಜಕುಮಾರರೆಲ್ಲರೂ ಭೀಮನನ್ನು ಅತಿಯಾಗಿ ಪ್ರೀತಿಸುತ್ತಿದ್ದರು. ಅಸುರಾಂಶರಾದ ಇತರ ರಾಜಕುಮಾರರು ಅವನನ್ನು ಬೇರೆ ಮಾಡಿ, ತಮ್ಮದೇ ಒಂದು ಗುಂಪನ್ನು ಕಟ್ಟಿ ಭೀಮನನ್ನು ವಧಿಸಲು ನಿಶ್ಚಯಿಸಿದರು.

ಅಸ್ಮಿನ್ ಹತೇ ವಿನಿಹತಾ ಅಖಿಲಾಶ್ಚ ಪಾರ್ಥಾ:
ಶಕ್ಯೋ ಬಲಾಚ್ಚ ನ ನಿಹಂತುಮಯಂ ಬಲಾಢ್ಯ:।
ಛದ್ಮ ಪ್ರಯೋಗತ ಇಮಂ ವಿನಿಹತ್ಯವೀರ್ಯಾತ್
ಪಾರ್ಥಂ ನಿಹತ್ಯ ನಿಗಡೇ ಚ ವಿದಧ್ಮಹೇಽನ್ಯಾನ್ ॥೬೮॥

ಈ ಭೀಮನನ್ನು ಕೊಂದರೆ, ಅರ್ಜುನ ಮೊದಲಾದ ಪಾಂಡವರನ್ನು ಕೊಂದಂತೆಯೆ. ಭೀಮನು ಬಲಾಢ್ಯನಾದುದರಿಂದ ಇವನನ್ನು ಬಲದಿಂದ ಕೊಲ್ಲಲು ಸಾಧ್ಯವಿಲ್ಲ. ಕಾರಣ ಇವನನ್ನು ಮಂತ್ರ, ಔಷಧ ಮೊದಲಾದ ಛದ್ಮ ಪ್ರಯೋಗಗಳಿಂದಲೇ ಕೊಲ್ಲಬೇಕು. ಪಾರ್ಥನನ್ನು ಬಲದಿಂದ ಕೊಲ್ಲಬಹುದು. ಉಳಿದವರನ್ನು ಬಂಧನದಲ್ಲಿಟ್ಟರಾಯಿತು ಎಂದು ಯೋಚಿಸಿದರು.

ಏವಂ ಕೃತೇ ನಿಹತ ಕಂಟಕಮಸ್ಯ ರಾಜ್ಯಂ
ದುರ್ಯೋಧನಸ್ಯ ತು ಭವೇನ್ನ ತತೋಽನ್ಯಥಾಸ್ಯಾತ್।
ಅಸ್ಮನ್ ಹತೇ ನಿಪತಿತೇ ಚ ಸುರೇಂದ್ರ ಸೂನೌ
ಶೇಷಾ ಭವೇಯುರಥ ನೌಬಲಿಪುತ್ರದಾಸಾ: ॥೬೯॥

ನಾವು ಇದೇ ರೀತಿಯಿಂದ ಮಾಡಿದರೇನೆ ದುರ್ಯೋಧನನಿಗೆ ನಿಷ್ಕಂಟಕ ರಾಜ್ಯ ಲಭಿಸುವುದು. ಅನ್ಯ ಮಾರ್ಗದಿಂದ ಇದು ಸಾಧ್ಯವಾಗಲಾರದು.

ಈ ಭೀಮನು ಹತನಾದರೆ, ಅರ್ಜುನನೂ ಹತನಾಗುವನು. ಉಳಿದವರೆಲ್ಲರೂ ಗಾಂಧಾರಿ ಪುತ್ರನ ದಾಸರಾಗುವರು.

**ಏವಂ ವಿಚಾರ್ಯ ವಿಷ ಮುಲ್ಬಣ ಮಂತಕಾಭಂ**
**ಕ್ಷಿರೋದಧೇರ್ಮಥನಜಂ ತಪಸಾ ಗಿರೀಶಾತ್**
**ಶುಕ್ರೇಣಲಬ್ಧಮಮುತಃ ಸಬಲಾತ್ಮಜೇನ**
**ಪ್ರಾಪ್ತಂ ಪ್ರತೋಷ್ಯ ಮರುತಸ್ತನಯಾಯ ಚಾದುಃ ॥೭೦॥**

ಈ ರೀತಿ ಆಲೋಚಿಸಿ ಅವರು ಉಲ್ಬಣವಾದ ವಿಷವನ್ನು ಸಂಗ್ರಹಿಸಿದರು. ಅದು ಮಹಾಪ್ರಬಲ ಮತ್ತು ಮರಣಾಂತಕವಾಗಿತ್ತು. ಹಾಲುಗಡಲನ್ನು (ಕ್ಷೀರಸಮುದ್ರವನ್ನು) ಮಥಿಸುವ ಕಾಲದಲ್ಲಿ ಹುಟ್ಟಿಕೊಂಡಿತ್ತು. ಅದು ಮಹಾರುದ್ರ ದೇವರಲ್ಲಿದ್ದಿತು. ರುದ್ರರನ್ನು ಮೆಚ್ಚಿಸಿ ಶುಕಾಚಾರ್ಯರು ಅದನ್ನು ಪಡೆದಿದ್ದರು. ಶುಕಾಚಾರ್ಯರನ್ನು ಸಂತೋಷಪಡಿಸಿ, ಶಕುನಿಯು ಅದನ್ನು ತಂದಿದ್ದನು. ಆ ವಿಷವನ್ನೇ ಇಂದು ಭೀಮನಿಗೆ ಹಾಕಲು ನಿಶ್ಚಯಿಸಿದರು.

**ಸಮ್ಮಂತ್ರ್ಯ ರಾಜತನಯೈರ್ಧೃತರಾಷ್ಟ್ರ ಜೈಸ್ತು**
**ದತ್ತಂ ಸ ಸೂದಮುಖತೋಽಖಿಲ ಭಕ್ಷಭೋಜ್ಯೇ।**
**ಜ್ಞಾತ್ವಾ ಯುಯುತ್ಸುಗದಿತಂ ಬಲವಾನ್ ಸ ಭೀಮೋ**
**ವಿಷ್ಣೋರನುಗ್ರಹಬಲಾಜ್ಜರಯಾಂ ಚಕಾರ ॥೭೧॥**

ರಾಜಕುಮಾರರೆಲ್ಲ ಸೇರಿ, ಧೃತರಾಷ್ಟ್ರನೊಡಗೂಡಿ, ಮಂತ್ರಾಲೋಚನೆ ಮಾಡಿದರು. ಆ ವಿಷವನ್ನು ಅಡಿಗೆಯವನಿಗಿತ್ತು ಭಕ್ಷ ಭೋಜ್ಯಗಳಲ್ಲಿ ಕೂಡಿಸಲು ಹೇಳಿದರು. ಅವನು ಅದರಂತೆ ಮಾಡಿದನು. ಇದನ್ನು ಪರಾಕ್ರಮಿಯಾದ ಭೀಮನು ಯುಯುತ್ಸುನಿಂದ ತಿಳಿದನು. ಆದರೂ ಶ್ರೀಹರಿಯ ಅನುಗ್ರಹದಿಂದ ಭೀಮನು ಎಲ್ಲವನ್ನು ತಿಂದು ಜೀರ್ಣಿಸಿಕೊಂಡನು.

**ಜೀರ್ಣೇ ವಿಷೇ ಕುಮತಯಃ ಪರಮಾಭಿ ತಪ್ತಾಃ**
**ಪ್ರಾಸಾದಮಾಶು ವಿದದುರ್ಹರಿಪಾದತೋಯೇ।**

ಜ್ಞಾತ್ವಾ ಯುಯುತ್ಸು ಮುಖತಃ ಸ್ವಯಮತ್ರಚಾಂತೇ
ಸುಷ್ವಾಪ ಮಾರುತಿ ರಮಾ ಧೃತರಾಷ್ಟ್ರಪುತ್ರೈಃ ॥೭೨॥

ವಿಷಪ್ರ ಜೀರ್ಣವಾದದ್ದನ್ನು ಕಂಡು, ಕುಮತಿಗಳಾದ ಕೌರವರು ಅತ್ಯಂತ ಸಂತಪ್ತರಾದರು. ಪರಿಪಾದದಿಂದ ಹೊರಟ ಗಂಗೆಯ ತಟದಲ್ಲಿಯೇ ಒಂದು ಪ್ರಾಸಾದವನ್ನು ನಿರ್ಮಿಸಿದರು. ಯುಯುತ್ಸುವಿನ ಮುಖದಿಂದ ಅದರ ಉದ್ದೇಶವನ್ನು ಭೀಮಸೇನನು ಅರಿತನು. ಆದರು ಧೃತರಾಷ್ಟ್ರನ ಮಕ್ಕಳೊಂದಿಗೆ ತಾನೇ ಅಲ್ಲಿ ಹೋಗಿ ಮಲಗಿದನು.

ದೋಷಾನ್ ಪ್ರಕಾಶಯಿತುಮೇವ ವಿಚಿತ್ರವೀರ್ಯ-
ಪುತ್ರಾತ್ಮ ಜೇಷು ನೃವರಂ ಪ್ರತಿಸುಪ್ತ ಮೀಕ್ಷ್ಯ।
ಬಧ್ವಾಭಿಮಂತ್ರಣ ದೃಢೈರಯಸಾಕೃತೈಸ್ತಂ
ಪಾಶೈರ್ವಿಚಿಕ್ಷಿಪುರುದೇ ಹರಿಪಾದಜಾಯಾಃ ॥೭೩॥

ಧೃತರಾಷ್ಟ್ರನ ಮಕ್ಕಳ ದೋಷಗಳನ್ನು ಜಗತ್ತಿಗೆ ತೋರಬೇಕು ಎನ್ನುವ ದೃಷ್ಟಿಯಿಂದ ನರೋತ್ತಮನಾದ ಭೀಮನು ಸುಪ್ತನಾಗಿದ್ದನು. ಇದನ್ನು ಕಂಡು ಕೌರವರು ಹಗ್ಗಗಳಿಂದ ಬಂಧಿಸಿದರು. ಆ ಹಗ್ಗಗಳನ್ನು ವಿಶಿಷ್ಟವಾದ ಲೋಹ ಮಿಶ್ರಣದಿಂದ ಸಿದ್ಧವಾಗಿದ್ದವು. ಬಹು ಗಟ್ಟಿಯಾಗಿದ್ದವು. ಬಂಧಿತನನ್ನು ಅಲ್ಲಿಯೇ ಹರಿಯುತ್ತಿರುವ ಗಂಗೆಯಲ್ಲಿ ಎಸೆದರು.

ತತ್ಕೋಟಿಯೋಜನಗಭೀರಮುದಂ ವಿಗಾಹ್ಯ
ಭೀಮೋ ವಿಜಂಭೃತಣತ ಏವ ವಿಪೃಷ್ಟ ಪಾಶಾನ್।
ಉತ್ತೀರ್ಯ ಸಜ್ಜನಗಣಸ್ಯ ವಿಧಾಯ ಹರ್ಷಂ
ತಸ್ಥಾವನಂತ ಗುಣ ವಿಷ್ಣುಸದಾತಿ ಹಾರ್ದಃ ॥೭೪॥

ಆ ಮಡುವು ಕೋಟಿಯೋಜನ ಆಳವಾಗಿದ್ದಿತು. ಅಂತಹ ನೀರನ್ನು ಕದಡಿ ಭೀಮಸೇನನು ಆನಂದದಿಂದ ಮೇಲೆ ಬಂದನು. ಕೇವಲ ಆತನು ಆಕಳಿಸುವುದರಿಂದ ಕಟ್ಟಿದ ಹಗ್ಗಗಳು ಕಳಚಿಬಿದ್ದವು. ಅನಂತ ಗುಣಗಳುಳ್ಳ ಪರಮಾತ್ಮನನ್ನು ಸದಾ ತನ್ನ ಹೃದಯದಲ್ಲಿ ಸ್ಥಾಪಿಸಿದ ಭೀಮನು ಆ

ಘಟನೆಯಿಂದ ಪಾರಾದನು. ಇದನ್ನು ಕಂಡ ಸಜ್ಜನರು ಹರ್ಷಗೊಂಡರು. 'ಪ್ರಮಾಣಕೋಟಿ' ಆ ಮಡುವಿನ ಹೆಸರು.

**ತಂ ವೀಕ್ಷ್ಯ ದುಷ್ಟಮನಸೋಽತಿ ವಿಷಣ್ಣ ಚಿತ್ತಾ:**
**ಸಮ್ಮಂತ್ರ್ಯ ಭೂಯ ಉರುನಾಗಗಣಾನಥಾಷ್ಟೌ।**
**ಶುಕ್ರೋಕ್ತ ಮಂತ್ರಬಲತ: ಪುರ ಆಹ್ವಯಿತ್ವಾ**
**ಪಶ್ಚಾತ್ ಸುಪಂಜರಗತಾನ್ ಪ್ರದದು: ಸ್ವಸೂತೇ ॥೭೫॥**

ಮೇಲೆ ಬಂದ ಭೀಮಸೇನನನ್ನು ಕಂಡ ಆ ದುಷ್ಟ ಕೌರವರು, ಮನದಲ್ಲಿ ಬಹು ದು:ಖಿತರಾದರು. ಎಲ್ಲರೂ ಆಲೋಚಿಸಿ, ಶುಕ್ರಾಚಾರ್ಯರು ಉಪದೇಶವಿತ್ತ ಮಂತ್ರಬಲದಿಂದ ಎಂಟು ಪ್ರಕಾರದ ಸರ್ಪಗಳನ್ನು ಆಹ್ವಾನಿಸಿ ಪುರಕ್ಕೆ ತಂದರು. ಆನಂತರ ಅವುಗಳನ್ನು ಒಂದು ಒಳ್ಳೆಯ ಪಂಜರದಲ್ಲಿಟ್ಟು ಅದನ್ನು ಸೂತನಿಗೆ ಕೊಟ್ಟರು.

ಸರ್ಪಗಳ ಪ್ರಕಾರಗಳು: ಅನಂತ, ವಾಸುಕಿ, ಪದ್ಮ, ಮಹಾಪದ್ಮ, ತಕ್ಷಕ, ಕರ್ಕೋಟಕ, ಶಂಖಪಾಲ ಮತ್ತು ಮಹಾಶಂಖ ಇವು ಎಂಟು.

**ದುರ್ಯೋಧನ ಪೃಥುಮಂತ್ರ ಬಲೋಪಹೂತಾನ್**
**ತತ್ಸಾರಥಿ ಫಣಿಗಣಾನ್ ಪವನಾತ್ಮಜಸ್ಯ।**
**ಸುಪ್ತಸ್ಯ ವಿಸ್ತೃತ ಉರಸ್ಯಮುಚದ್ವಿಶೀರ್ಣದಂತಾ**
**ಬಭೂವುರ ಮುಮಾಶು ವಿದಶ್ಯ ನಾಗಾ: ॥೭೬॥**

ದುರ್ಯೋಧನನಿಂದ ಪ್ರಬಲವಾದ ಮಂತ್ರಗಳಿಂದ ಕರೆಯಲ್ಪಟ್ಟ ಆ ನಾಗಗಳ ಸಮೂಹವನ್ನು ಸಾರಥಿಯು ತೆಗೆದುಕೊಂಡು ಬಂದನು. ಅಲ್ಲಿಯೇ ಪ್ರಶಾಂತನಾಗಿ ಮಲಗಿರುವ ವಾಯುಸುತನ ವಿಸ್ತೀರ್ಣವಾದ ಎದೆಯ ಮೇಲೆ ಬಿಟ್ಟನು. ಸರ್ಪಗಳು ಕೂಡಲೇ ಅವನನ್ನು ಕಚ್ಚಹತ್ತಿದವು. ಅದರಿಂದ ಆ ನಾಗಗಳ ಹಲ್ಲುಗಳು ಪುಡಿಪುಡಿಯಾದವು.

**ಕ್ಷಿಪ್ತ್ವಾ ಸುದೂರ ಉರುನಾಗಗಣಾನಥಾಷ್ಟೌ**
**ತದವಂಶಜಾನ್ ಸ ವಿನಿಹತ್ಯ ಪಿಪೀಲಿಕಾವತ್।**

**ಜಘ್ನೇಚ ಸೂತಮಪ ಹಸ್ತತ ಏವ ಭೀಮಃ**
**ಸುಷ್ವಾಪ ಪೂರ್ವವದನುತ್ಥಿತ ಏವ ತಲ್ಪಾತ್ ॥೭೭॥**

ಭೀಮಸೇನನು ಮಲಗಿದ್ದಲ್ಲಿಯೇ ಕೈಗಳನ್ನು ಝಾಡಿಸಿದಾಗ ಆ ನಾಗಗಳು ಬಹುದೂರ ಹೋಗಿ ಬಿದ್ದವು. ಅಲ್ಲಿಯೇ ಉಳಿದಿದ್ದ ಕೆಲವು ಮರಿಗಳನ್ನು ಇರುವೆಗಳನ್ನು ಒರೆಸಿದಂತೆ ಒರೆದು ಕೊಂದನು. ಭೀಮನ ಕರದ ಪೆಟ್ಟಿನಿಂದ ಸೂತನು ಕೂಡ ಬಹುದೂರ ಹೋಗಿ ಬಿದ್ದನು. ಭೀಮನು ಮಾತ್ರ ಸುಷುಪ್ತಿಗೆಂದು ಮೇಲೆ ಮಲಗಿರುವನೋ ಎಂಬಂತೆ ಮಲಗಿದ್ದನು.

**ತತ್ತಸ್ಯ ನೈಜಬಲಮಪ್ರತಿಮಂ ನಿರೀಕ್ಷ್ಯ**
**ಸರ್ವೇ ಕ್ಷಿತೀಶತನಯಾ ಅಧಿಕಂ ವಿಷೇದುಃ।**
**ನಿಃಶ್ವಾಸತೋ ದರ್ಶನಾದಪಿ ಭಸ್ಮಯೇಷಾಂ**
**ಭೂಯಾಸುರೇವ ಭುವನಾನಿ ಚ ತೇ ವ್ಯಥಾಸನ್ ॥೭೮॥**

ಭೀಮಸೇನನ ಸ್ವಾಭಾವಿಕ ಮತ್ತು ಅಪ್ರತಿಮ ಬಲ ಕಂಡು, ಎಲ್ಲ ರಾಜಕುಮಾರರ ಬಹಳಷ್ಟು ದುಃಖಿತರಾದರು. ಭೀಮನಲ್ಲಿ ಅಧಿಕ ದ್ವೇಷವುಳ್ಳರಾದರು. ಯಾವ ಸರ್ಪಗಳ ಕೇವಲ ನಿಃಶ್ವಾಸದಿಂದ, ದರ್ಶನಮಾತ್ರದಿಂದ ಸರ್ವಭೂಲೋಕ ಮತ್ತು ಸುರಲೋಕಗಳು ಭಸ್ಮವಾಗುವವೋ, ಅಂತಹ ಸರ್ಪಗಳ ಪ್ರಯತ್ನ ಇಂದು ವ್ಯರ್ಥವಾಯಿತಲ್ಲ ಎಂದು ಖಿಶಿಗೊಂಡರು.

**ದಧ್ಭಿರ್ವಿದಸ್ಯ ನ ವಿಕಾರ ಮಮುಷ್ಯ ಕರ್ತುಂ**
**ಶೇಕುರ್ಭುಜಂಗಮವರಾ ಅಪಿ ಸುಪ್ರಯತ್ನಾಃ।**
**ಕಸ್ಯಾಪಿ ನೇದೃಶಬಲಂ ಶ್ರುತಪೂರ್ವಮಾಸೀತ್**
**ದೃಷ್ಟಂ ಕಿಮುಸ್ಮ ತನಯೇಽಪಿ ಹಿರಣ್ಯಕಸ್ಯ ॥೭೯॥**

ಆ ಎಲ್ಲ ಸರ್ಪಗಳ ಪ್ರಯತ್ನಪೂರ್ವಕವಾಗಿ ಕಚ್ಚಿ ವಿಷವನ್ನು ಬಿಟ್ಟರೂ, ಭೀಮಸೇನನಲ್ಲಿ ತಿಲಮಾತ್ರವೂ ವಿಕಾರವುಂಟಾಗಲಿಲ್ಲ. ಇಂತಹ ಅಸದೃಶ ಬಲವನ್ನು ಪೂರ್ವದಲ್ಲಿ ಎಲ್ಲಿಯೂ ಕೇಳಿಲ್ಲ. ಹಿರಣ್ಯಕಶಿಪುವಿನ ಪ್ರಹ್ಲಾದನನಲ್ಲೂ ಈ ಬಗೆಯ ಬಲವು ಇರಲಿಲ್ಲ.

ಸ್ನಾತ್ವಾ ಪನಾರ್ಥಮಧಿಕಾಂ ಸ್ತುತಿಮೇವ ಕೃತ್ವಾ
ವಿಷ್ಣೋ: ಸದೈತ್ಯತನಯೋ ಹರಿಣಾವಿತೋಽಭೂತ್।
ನ ತ್ವೌರಸಂ ಬಲಮಮುಷ್ಯ ಸಕೃಷ್ಯತೇ ಹಿ
ಭೃತ್ಯೈ ರ್ಬಲಾತ್ ಸ್ವಪಿತುರೌರಸಮುಸ್ಯವೀರ್ಯಮ್ ॥೮೦॥

ಪ್ರಹ್ಲಾದನು ತನ್ನನ್ನು ರಕ್ಷಿಸಿಕೊಳ್ಳುವುದಕ್ಕಾಗಿ, ಶ್ರೀಹರಿಯನ್ನು ಕುರಿತು ಅಧಿಕವಾಗಿ ಸ್ತುತಿಸುತ್ತಿದ್ದನು. ಆ ಬಲವು ಹರಿಯಿಂದ ಕೊಡಲ್ಪಡುತ್ತಿತ್ತು. ಅದು ಆತನ ಸ್ವಾಭಾವಿಕ ಬಲವಾಗಿರಲಿಲ್ಲ. ತಂದೆಯ ಭೃತ್ಯರಿಂದ ಬಲಾತ್ಕಾರ ಪೆಟ್ಟಾದಾಗಲೆಲ್ಲ ಆತನು ಶ್ರೀಹರಿಯನ್ನು ಸ್ಮರಿಸುತ್ತಿದ್ದನು. ಶ್ರೀಹರಿಯೇ ಅವನನ್ನು ರಕ್ಷಿಸುತ್ತಿದ್ದನು.

ನೈಸರ್ಗಿಕಂ ಪ್ರಿಯಮಿಮಂ ಪ್ರವದಂತಿ ವಿಪ್ರಾ-
ವಿಷ್ಣೋರ್ನಿತಾಂತಮಪಿ ಸತ್ಯಮಿದಂ ಧ್ರುವಂ ಹಿ ।
ನೈವಾನ್ಯಥೌರಸಬಲಂ ಭವತೀ ದೃಶಂ ತದುತ್ಸಾದ್ಯ
ಏಷ ಹರಿಣೈವ ಸಹೈಷ ನೋಽರ್ಥ: ॥೮೧॥

'ಈ ಭೀಮಸೇನನು ಸ್ವಭಾವದಿಂದಲೇ ಶ್ರೀಹರಿಗೆ ನಿರುಪಾಧಿಕ ಪ್ರಿಯನಾಗಿದ್ದಾನೆ' ಎಂದು ಬ್ರಾಹ್ಮಣರು ಹೇಳುತ್ತಾರೆ. ಅದು ಸತ್ಯವು ಮತ್ತು ನಿತ್ಯವೂ ಕೂಡ. ಇಲ್ಲದಿದ್ದಲ್ಲಿ ಇಂತಹ ಬಲವು ಸಾಧ್ಯವಿರಲಿಲ್ಲ. ಕಾರಣ ಭೀಮನ ಜೊತೆಯಲ್ಲಿ ಶ್ರೀಹರಿಯು ಕೂಡ ಕೊಲ್ಲಲು ಅರ್ಹನು. ಭೀಮ ಮತ್ತು ಪ್ರಹ್ಲಾದ ಇಬ್ಬರೂ ಭಕ್ತರೇ. ಆದರೆ ಇಬ್ಬರ ಭಕ್ತಿಯಲ್ಲಿ ಅಜಗಜಾಂತರವಿದೆ ಎಂಬುದೇ ಆಚಾರ್ಯರ ಅಭಿಪ್ರಾಯ. 'ಶ್ರೀಹರಿವಾಯುಗಳ ನಾಶವೇ ನಮಗೆ ಉಪಯುಕ್ತ' ಇದು ಕೌರವರ ಗುಂಪಿನ ಅಭಿಪ್ರಾಯ.
ಶ್ರೀಹರಿಯನ್ನು ಕೊಲ್ಲುವ ಬಗೆ ಹೇಗೆ?

ಕೃಷ್ಣ: ಕಿಲೈಷ ಚ ಹರಿರ್ಯದುಷು ಪ್ರಜಾತ:
ಸೋಽಸ್ಯಾಶ್ರಯ: ಕುರುತೇ ತಸ್ಯ ಬಹು ಪ್ರತೀಪಮ್ ।
ಸಂಮಂತ್ರ್ಯ ಚೈವಮತಿ ಪಾಪತಮಾ ನರೇಂದ್ರ-
ಪುತ್ರಾ ಹರೇಶ್ಚ ಬಹುಚಕ್ರು ರಥ ಪ್ರತೀಪಮ್ ॥೮೨॥

ಈಗ ಯಾದವರಲ್ಲಿ ಶ್ರೀಕೃಷ್ಣನಾಗಿ ಹುಟ್ಟಿದ್ದಾನೆ. ಆತನೆ ಭೀಮನಿಗೆ ಆಶ್ರಯನಾಗಿದ್ದಾನೆ. ಆದ್ದರಿಂದ ಆತನೊಡನೆ ದ್ವೇಷವನ್ನು ಮಾಡೋಣ. ಆ ಪಾಪಾತ್ಮರು ದುಷ್ಟಬುದ್ಧಿಯಿಂದ ಹೀಗೆ ಯೋಚಿಸಿ ಶ್ರೀಕೃಷ್ಣನೊಡನೆ ದ್ವೇಷಿಸ ಹತ್ತಿದರು.

ತೈಃ ಪ್ರೇರಿತಾ ನೃಪತಯಃ ಪಿತರಶ್ಚ ತೇಷಾಂ
ಸಾಕಂ ಬೃಹದ್ರಥಸುತೇನ ಹರೇಃ ಸಕಾಶಮ್।
ಯುದ್ಧಾಯ ಜಗ್ಮುರಮುನಾಷ್ಟದಶೇಷು ಯುದ್ಧೇ
ಷ್ವತ್ಯಂತ ಭಗ್ನ ಬಲದರ್ಪಮದಾ ನಿವೃತ್ತೇಃ ॥೮೩॥

ದುಷ್ಟಬುದ್ಧಿಯಿಂದ ಈ ರೀತಿ ಪ್ರೇರಿತರಾಗಿ ಆ ರಾಜಪುತ್ರರು ತಂದೆಯ ಅನುಮತಿಯೊಂದಿಗೆ ಬೃಹದ್ರಥನ ಮಗನಾದ ಜರಾಸಂಧನೊಡನೆ ಸ್ನೇಹ ಬೆಳೆಸಿದರು. ಎಲ್ಲರೂ ಸೇರಿ ಶ್ರೀಕೃಷ್ಣನೊಡನೆ ಹದಿನೆಂಟು ಸಲ ಯುದ್ಧ ಮಾಡಿದರು. ಪ್ರತಿ ಸಲವೂ ಅವರಿಗೆ ಸೋಲುಂಟಾಗುತ್ತಿತ್ತು. ಅವರ ಸೈನ್ಯ, ಬಲ, ಮದ, ದರ್ಪ ಮತ್ತು ಅಹಂಕಾರ ಎಲ್ಲವೂ ಭಗ್ನವಾಗಿ ಹಿಂದಿರುಗುತ್ತಿದ್ದರು.

ತೇನಾಗೃಹೀತರಥವಾಜಿಗಜಾ ನಿತಾಂತಂ
ಶಸ್ತ್ರೈಃ ಪರಿಕ್ಷತ ತನೂಭಿರಲಂ ವಮಂತಃ ।
ರಕ್ತಂ ವಿಶಸ್ತ್ರಕವಚಧ್ವಜವಾಜಿ ಸೂತಾಃ
ಸ್ರಸ್ತಾಂಬರಾಃ ಶ್ಲಥಿತ ಮುರ್ಧಜಿತೋ ನಿವೃತ್ತಾಃ ॥೮೪॥

ಅವರು ತಂದಿರುವ ರಥಗಳು, ಕುದುರೆ, ಆನೆ ಎಲ್ಲವು ವೈರಿಗಳ ಬಾಣಗಳಿಗೆ ಆಹುತಿಯಾಗುತ್ತಿದ್ದವು. ಜರಾಸಂಧನ ಮತ್ತಿತರ ಶಸ್ತ್ರಗಳು ಮುರಿದುಬೀಳುತ್ತಿದ್ದರೆ, ಧ್ವಜ ಪತಾಕೆಗಳು ಹರಿದು ಹಾರಾಡುತ್ತಿದ್ದವು. ಕಿರೀಟ, ಕವಚ, ಕುಂಡಲಗಳು ಕಳಚಿಬಿದ್ದರೆ, ವಸ್ತ್ರಗಳ ಶ್ಲಥವಾಗುತ್ತಿದ್ದವು. ಸಾರಥಿಗಳು ಗಾಯಗೊಂಡರು. ಕೆಲವರು ರಕ್ತಕಾರುತ್ತಿದ್ದರು.

ಈ ಸ್ಥಿತಿಯಲ್ಲಿ ಜರಾಸಂಧನ ಸೈನ್ಯವು ಶ್ರೀಕೃಷ್ಣನಿಂದ ಪರಾಜಯಹೊಂದಿ ಹಿಂದಿರುಗುತ್ತಿತ್ತು.

ಏವಂ ಬೃಹದ್ರಥಸುತೋऽಪಿ ಸುಶೋಚ್ಯ ರೂಪ
ಆರ್ತೋ ಯಯೌ ಬಹುಶ ಏವ ಪುರಂ ಸ್ವಕೀಯಮ್।
ಕೃಷ್ಣೇನ ಪೂರ್ಣಬಲವೀರ್ಯ ಗುಣೇನ ಮುಕ್ತೋ
ಜೀವೇತ್ಯತೀವ ವಿಜಿತಃ ಶ್ವಸಿತಾಪಶೇಷಃ ॥೮೫॥

ಬೃಹದ್ರಥನ ಮಗ(ನಾದ) ಜರಾಸಂಧನ ಸ್ಥಿತಿಯೂ ಕೂಡ ಶೋಚನೀಯವಾಗಿತ್ತು. ಆರ್ತನಾಗಿ ಅವನು ಕೂಡ ತನ್ನ ಪಟ್ಟಣಕ್ಕೆ ಹಿಂದಿರುಗಿದನು. ಬಲಪರಿಪೂರ್ಣ ಮತ್ತು ಪರಾಕ್ರಮಿಯಾದ ಶ್ರೀಕೃಷ್ಣನು, 'ಬದುಕಿಕೋ' ಎಂದು ಹೇಳಿ ಅವನನ್ನು ಮುಕ್ತನನ್ನಾಗಿ ಮಾಡಿದನು. ಅವನಲ್ಲಿ ಕೇವಲ ಉಸಿರಾಟದ ಶಕ್ತಿ ಮಾತ್ರ ಉಳಿದಿತ್ತು.

ಏವಂ ಗತೇಷು ಬಹುಶೋ ನತಕಂದರೇಷು
ರಾಜಸ್ವಜೋऽಪಿ ಮಧುರಾಂ ಸ್ವಪುರೀಂ ಪ್ರವಿಶ್ಯ ।
ರಾಮೇಣ ಸಾರ್ಧಮಖಿಲೈರ್ಯದುಭಿಃ ಸಮೇತೋ
ರೇಮೇ ರಮಾಪತಿರಚಿಂತ್ಯಬಲೋ ಜಯಶ್ರೀಃ ॥೮೬॥

ಈ ರೀತಿಯಾಗಿ ಅನೇಕ ರಾಜರು ತಲೆತಗ್ಗಿಸಿ, ಸೋತು ಹತಾಶರಾಗಿ ಹಿಂದಿರುಗಿದ ಬಳಿಕ, ಶ್ರೀಕೃಷ್ಣನು ಕೂಡ ತನ್ನ ಮಥುರಾ ಪಟ್ಟಣವನ್ನು ಪ್ರವೇಶಿಸಿದನು. ಸಮಸ್ತ ಯಾದವರೊಡನೆ, ಬಲರಾಮನನ್ನು ಕೂಡಿಕೊಂಡು ಅಚಿಂತ್ಯ ಬಲವುಳ್ಳ ರಮಾಪತಿಯಾದ ಶ್ರೀಕೃಷ್ಣನು ಜಯಶ್ರೀಯನ್ನು ಸಂಪಾದಿಸಿ ಆನಂದದಿಂದ ಇರುತ್ತಿದ್ದನು.

ವ್ಯರ್ಥೋದ್ಯಮಾಃ ಪುನರಪಿ ಸ್ಮ ಸಧಾರ್ತರಾಷ್ಟ್ರಾ
ಭೀಮಂ ನಿಹಂತು ಮುರುಯತ್ನಮ ಕುರ್ವತಾಜ್ಞಾಃ ।
ರಾಜ್ಞಾಂ ಸುತಾಸ್ತ ಮಖಿಲಂ ಸ ಮೃಷೈವ ಕೃತ್ವಾ
ಚಕ್ರೇ ಜಯಾಯ ಚ ದಿಶಾಂ ಬಲವಾನ್ ಪ್ರಯತ್ನಮ್ ॥೮೭॥

ಅಜ್ಞಾನಿಗಳಾದ ಕೌರವರು ಭೀಮನನ್ನು ಕೊಲ್ಲಲು ಅನೇಕ ಪ್ರಯತ್ನಗಳನ್ನು ಮಾಡಿದರೂ ಅವು ವ್ಯರ್ಥವಾದವು. ದೈವವು ರಾಜಕುಮಾರರ ಎಲ್ಲಾ

ಪ್ರಯತ್ನಗಳನ್ನು ಸುಳ್ಳಾಗಿಸಿತು. ಭೀಮನು ಊರಲ್ಲಿರಬಾರದು ಎಂದು ಯೋಚಿಸಿ, ಅವನನ್ನು ದೇಶಗಳ ದಿಗ್ವಿಜಯಕ್ಕಾಗಿ ಕಳಿಸಿಕೊಟ್ಟನು.

ಭೀಮನ ದಿಗ್ವಿಜಯ.

**ಪ್ರಾಚೀಂ ದಿಶಂ ಪ್ರಥಮಮೇವ ಜಿಗಾಯ ಪಶ್ಚಾತ್**
**ಯಾಮ್ಯಾಂ ಜಲೇಶ ಪರಿಪಾಲಿತಯಾ ಸಹಾನ್ಯಾಮ್।**
**ಯೌ ತೌ ಪುರಾತನದಶಾನನ ಕುಂಭಕರ್ಣೌ**
**ಮಾತೃಷ್ವಸಾತನಯತಾಂ ಚ ಗತೌ ಜಿಗಾಯ ॥೮೮॥**

ಪೂರ್ವದಿಕ್ಕಿನ ರಾಜರನ್ನು ಮೊದಲು ಗೆದ್ದನು. ನಂತರ ದಕ್ಷಿಣ ದಿಕ್ಕನ್ನೂ, ಆಮೇಲೆ ವರುಣನಿಂದ ಪರಿಪಾಲಿತವಾದ ಪಶ್ಚಿಮ ದಿಕ್ಕನ್ನೂ, ಜೊತೆಯಲ್ಲಿ ಇತರ ದಿಕ್ಕುಗಳೂ ಸೇರಿದ್ದವು. ಎಲ್ಲ ಭಾಗಗಳನ್ನು ಗೆದ್ದು ಭೀಮನು ವಿಜಯಶಾಲಿಯಾದನು. ಹಿಂದೆ ರಾವಣ ಕುಂಭಕರ್ಣರಾಗಿರುವವರೇ ಇಂದು ಕುಂತಿಯ ತಂಗಿಯ ಮಕ್ಕಳಾಗಿ ಹುಟ್ಟಿದ್ದಾರೆ. ಭೀಮನು ಅವರನ್ನು ಕೂಡ ಗೆದ್ದನು.

ಈಗ ಅವರು ಯಾರು?

**ಪೂರ್ವಸ್ತಯೋರ್ದಮಘೋಷಸುತಃ ಪ್ರಜಾತಃ**
**ಪ್ರಾಹುಷ್ಟ ಯಂ ನೃಪತಯಃ ಶಿಶುಪಾಲನಾಮ್ನಾ ।**
**ಅನ್ಯಂ ವದಂತಿ ಚ ಕರುಶನೃಪಂ ತಥಾನ್ಯಂ**
**ಮಾತೃಷ್ವಸಾತನಯ ಮೇವ ಚ ದಂತವಕ್ರಮ್ ॥೮೯॥**

ಜ್ಯೇಷ್ಠನಾದ ರಾವಣನು ದಮಘೋಷನ ಮಗನಾಗಿ ಹುಟ್ಟಿದ್ದಾನೆ. ಸುತ್ತಲಿನ ರಾಜರೆಲ್ಲ ಅವನನ್ನು 'ಶಿಶುಪಾಲ' ಎಂದು ಕರೆದರು. ಮತ್ತೊಬ್ಬನು ಕರುಶದೇಶದ ನೃಪತಿ. ಅವನು 'ದಂತವಕ್ರ' ಎಂದೇ ಪ್ರಸಿದ್ಧನಾಗಿದ್ದಾನೆ.

**ಜಿತ್ವೈವ ತಾವಪಿ ಜಿಗಾಯ ಚ ಪೌಂಡ್ರಕಾಖ್ಯಂ**
**ಶೌರೇಃ ಸುತಂ ಸುತಮಜ್ಯೈದಥ ಭೀಷ್ಮ ಕಸ್ಯ ।**

**ಯಃ ಪೂರ್ವಮಾಸ ದಿತಿಜೋ ನರಹೇಲ್ವಲಾಖ್ಯೋ**
**ರುಕ್ಮೀತಿ ನಾಮ ಚ ಬಭೂವ ಸ ಕುಂಡಿನೇಶ ॥೯೦॥**

ಭೀಮಸೇನನು ಶಿಶುಪಾಲ-ದಂತವಕ್ರರನ್ನು ಗೆದ್ದ ನಂತರ, ವಸುದೇವನ ಮಗನಾದ ಪೌಂಡ್ರಕ ವಾಸುದೇವನನ್ನು ಗೆದ್ದನು. ಆಮೇಲೆ ಭೀಷ್ಮಕನ ಮಗ, 'ರುಕ್ಮಿ'ಯನ್ನು ಗೆದ್ದನು. ಈ ರುಕ್ಮಿ ಪೂರ್ವದಲ್ಲಿ ಇಲ್ವಲನೆಂಬ ದೈತ್ಯನಾಗಿದ್ದನು. ಅವನು ನರಭಕ್ಷಕನು. ಅವನೇ ಇಂದು ರುಕ್ಮಿಯಾಗಿ ಕುಂಡಿನೀ ಪುರಕ್ಕೆ ಅರಸನಾಗಿದ್ದಾನೆ.

ಇಲ್ವಲ ಮತ್ತು ವಾತಾಪಿ ಇವರ ಕಥೆಯನ್ನು ಸೂಚಿಸುವುದಕ್ಕಾಗಿ ಆಚಾರ್ಯರು 'ನರಹಾ' ಎಂಬ ಸಾಂಕೇತಿಕ ಪದವನ್ನು ಬಳಸಿದ್ದಾರೆ.

**ಭಾಗೇತ ಏವ ತನಯಸ್ಯ ಸ ಏವ ವಹ್ನೇ-**
**ರ್ನಾಮ್ನಾ ಶುಚೇಃ ಸ ತು ಪಿತಾಸ್ಯ ಹಿ ಮಿತ್ರಭಾಗಃ ।**
**ರಾಹ್ವಂಶಯುಕ್ತ ದನುಜೌ ಕ್ರಥ ಕೌಶಿಕಾಖ್ಯೌ**
**ಭಾಗೌ ತಥಾಗ್ನಿಸುತಯೋಃ ಪವಮಾನ ಶುಂಧ್ಯೋಃ ॥೯೧॥**

ಆ ರುಕ್ಮಿಯಲ್ಲಿ ಪ್ರಧಾನಾಗ್ನಿಯ ಪುತ್ರ, ಶುಚಿಯು ಅಂಶವಿದ್ದಿತು. ಅವನ ತಂದೆ ಭೀಷ್ಮಕನಲ್ಲಿ ಮಿತ್ರನೆಂಬ ಸೂರ್ಯನ ಮತ್ತು ರಾಹುವಿನ ಅಂಶಗಳಿದ್ದವು. ಅವನ ತಮ್ಮಂದಿರಾದ ಕ್ರಥ ಮತ್ತು ಕೌಶಿಕ ಇವರಲ್ಲಿ ಪವಮಾನ ಮತ್ತು ಶುಂಧಿಗಳ ಅಂಶಗಳಿದ್ದವು.

**ಬಂಧೋರ್ನಿಜಸ್ಯ ತು ಬಲಂ ಸುಪರೀಕ್ಷಮಾಣಃ**
**ಶಲ್ಯೋಽಪಿ ತೇನ ಯುಯುಧೇ ವಿಜಿತಸ್ತಥೈವ ।**
**ಭೀಮೋ ಜಿಗಾಯ ಯುಧಿ ವೀರ ಮಥೈಕಲವ್ಯಂ**
**ಸರ್ವೇ ನೃಪಾಶ್ಚ ವಿಜಿತಾ ಅಮುನೈವ ಮೇವ ॥೯೨॥**

ಸ್ವಬಂಧುವಿನ ಬಲವನ್ನು ಪರೀಕ್ಷಿಸಬೇಕೆಂದು ಶಲ್ಯನೂ ಭೀಮನ ಜೊತೆಗೆ ಯುದ್ಧವಾಡಿದನು. ಅದರಲ್ಲಿ ಭೀಮನಿಗೆ ಗೆಲುವಾಯಿತು. ನಂತರ ವೀರನಾದ ಏಕಲವ್ಯನ ಜೊತೆಗೆ ಯುದ್ಧವಾಯಿತು. ಒಟ್ಟಿನಲ್ಲಿ ಎಲ್ಲ ರಾಜರನ್ನೂ ಗೆದ್ದು ಅವರನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡನು.

ತದ್ಬಾಹು ವೀರ್ಯಪರಿಪಾಲಿತ ಇಂದ್ರಸೂನು:
ಶೇಷಾನ್ನೃಪಾಂಶ್ಚ ಸಮಜೈದ್ಬಲವಾನಯತ್ನಾತ್ ।
ಸಾಲ್ವಂ ಚ ಹಂಸಡಿಭಿಕೌ ಚ ವಿಜಿತ್ಯಭೀಮೋ
ನಾಗಾಹ್ವಯಂ ಪುರಮಗಾತ್ ಸಹಿತೋಽರ್ಜುನೇನ ॥೯೩॥

ಭೀಮನ ಬಾಹುಬಲದಿಂದ ತಪ್ಪಿಸಿಕೊಂಡವರನ್ನು ಅರ್ಜುನನು ಗೆದ್ದನು. ಸಾಲ್ವ ಮತ್ತು ಹಂಸಡಿಭಕರನ್ನು ಭೀಮನು ಗೆದ್ದನು. ಭೀಮಸೇನನು ಅರ್ಜುನನನ್ನು ಕೂಡಿಕೊಂಡು ಹಸ್ತಿನಾಪುರಕ್ಕೆ ಬಂದನು.

ವಿ.ವಿ. ಮೇಲಿನ ಶ್ಲೋಕಗಳಲ್ಲಿ, ಶ್ರೀಮದಾಚಾರ್ಯರು ಆಯಾ ವ್ಯಕ್ತಿಗಳ ಮೂಲಸ್ವರೂಪಗಳನ್ನು ತಿಳಿಸಿ ವ್ಯಕ್ತಿಗಳ ಚರಿತ್ರೆಯನ್ನು ತಿಳಿಯಲು ಅನುವುಮಾಡಿಕೊಟ್ಟಿದ್ದಾರೆ.

ತದ್ಬಾಹು ವೀರ್ಯಮಥ ವೀಕ್ಷ್ಯ ಮುಮೋದ ಧರ್ಮ-
ಸೂನು: ಸಮಾತೃಯಮಜೋ ವಿದುರ: ಸ ಭೀಷ್ಮ: ।
ಅನ್ಯೇ ಚ ಸಜ್ಜನಗಣಾ: ಸಹಪೌರರಾಷ್ಟ್ರಾ:
ಶ್ರುತ್ವೈವ ಸರ್ವಯದವೋ ಜಹೃಷುರ್ನಿತಾಂತಮ್ ॥೯೪॥

ಅವರಿಬ್ಬರ ಪರಾಕ್ರಮವನ್ನು ನೋಡಿ ಧರ್ಮಜ, ಕುಂತಿ, ವಿದುರ ಮತ್ತು ಭೀಷ್ಮ ಇವರುಗಳು ಆನಂದಪಟ್ಟರು. ಇತರ ಸಜ್ಜನರು, ಪೌರರು ಅವರ ಯಶಸ್ಸನ್ನು ಕೇಳಿ ಹರ್ಷಿಸಿದರು. ಸರ್ವ ಯಾದವರೂ ಇವರ ಕೀರ್ತಿಯನ್ನು ಕೇಳಿ ಮುದಹೊಂದಿದರು.

ಶ್ರೀಕೃಷ್ಣನು ಧೃತರಾಷ್ಟ್ರನಿಗೆ ತಿಳಿಯಹೇಳಿದ್ದು.

ಕೃಷ್ಣ: ಸುಯೋಧನ ಮುಖಾಕ್ರಮ ಮಾಂಬಿಕೇಯಂ
ಜಾನನ್ ಸ್ವಪುತ್ರ ವಶವರ್ತಿನಮೇವ ಗತ್ವಾ ।
ಶ್ವಾಫಲ್ಕಿನೋ ಗೃಹಮಮುಂ ಧೃತ್ರಾಷ್ಟ್ರ ಶಾಂತ್ಯೈ
ಗಂತುಂ ವಿದೇಶ ಗಜನಾಮಪುರಂ ಪರೇಶ: ॥೯೫॥

ಧೃತರಾಷ್ಟ್ರನು ಸುಯೋಧನ ಮೊದಲಾದ ದುಷ್ಟಮಕ್ಕಳ ಪ್ರಭಾವಕ್ಕೆ ಒಳಗಾಗಿದ್ದಾನೆ. ಅವರ ವಶದಲ್ಲಿದ್ದಾನೆ ಎಂದು ಶ್ರೀಕೃಷ್ಣನು ತಿಳಿದುಕೊಂಡನು. ಅಕ್ರೂರರನ್ನು ಕರೆದು "ಧೃತರಾಷ್ಟ್ರನಿಗೆ ಸರಿಯಾಗಿ ತಿಳಿಸಿ ಸಂತೈಸು" ಎಂದು ಅಪ್ಪಣೆಕೊಟ್ಟು ಹಸ್ತಿನಾಪುರಕ್ಕೆ ಕಳುಹಿಸಿದನು.

ವಿ.ವಿ. ಶ್ರೀಮದಾಚಾರ್ಯರು ಈ ಶ್ಲೋಕದಲ್ಲಿ ಅಧ್ಯಾತ್ಮದ ಸಾರವನ್ನೇ ಉಪದೇಶಿಸಿದ್ದಾರೆ ಎಂದು ಹೇಳಿದರೆ ತಪ್ಪಾಗಲಾರದು.

ಅಜ್ಞಾನದ ಮನಸ್ಸೇ ಧೃತರಾಷ್ಟ್ರ. ಅವನ ಮಕ್ಕಳೇ ಇಂದ್ರಿಯಗಳು. ಇಂದ್ರಿಯಗಳು ಅಕ್ರಮವಾಗಿ ಪ್ರಭಾವ ಬೀರಿವೆ. ಅವನೂ ಅವುಗಳಿಗೆ ವಶನಾಗಿದ್ದಾನೆ. ಪರಿಣಾಮ ಮಿಥ್ಯಾಜ್ಞಾನ, ವಿಪರೀತ ಜ್ಞಾನಗಳು ಹುಟ್ಟಿಕೊಂಡಿವೆ. ಮನಸ್ಸು ಕ್ರೂರವಾಗಿದೆ. ದುಷ್ಟ ವಿಚಾರಗಳಿಂದ ತುಂಬಿದೆ. ಅದನ್ನು ಸರಿಪಡಿಸುವುದಕ್ಕಾಗಿ ಪರಮಾತ್ಮನು ಅಕ್ರೂರನನ್ನು ಶಾಂತ ಸ್ವಭಾವವನ್ನು ಕಳಿಸುತ್ತಾನೆ. ಅದರಿಂದ ಸರಿಯಾದ ಜ್ಞಾನ ಹುಟ್ಟಿ ವಿಪರೀತ ಜ್ಞಾನ ನಾಶವಾಗಲಿ ಎಂಬುದೇ ಆತನ ಉದ್ದೇಶ. ಅಂತಹ ಅಕ್ರೂರನು ಮದದಿಂದ ತುಂಬದ ಹಸ್ತಿನಾಪುರ ಶರೀರ ಎಂಬ ಪಟ್ಟಣಕ್ಕೆ ಬಂದಿದ್ದಾನೆ. ಭಾಗವತದಲ್ಲಿ ಪುರಂಜನಾಖ್ಯಾನವಿದ್ದಂತೆ.

**ಸೋಽಯಾದ್ಗಜಾಹ್ವಯಮಮುತ್ರ ವಿಚಿತ್ರವೀರ್ಯ–**
**ಪುತ್ರೇಣ ಭೀಷ್ಮ ಸಹಿತೈಃ ಕುರುಭಿಃ ಸಮಸ್ತೈಃ ।**
**ಸಂಪೂಜಿತಃ ಕತಿಪಯಾನವಸಚ್ಚ ಮಾಸಾನ್**
**ಜ್ಞಾತುಂಬ ಹಿ ಪಾಂಡುಷು ಮನಃಪ್ರಕೃತಿಂ ಕರೂಣಾಮ್ ॥೯೬॥**

ಅಕ್ರೂರನು ಹಸ್ತಿನಾಪುರಕ್ಕೆ ಬಂದನು. ಅಲ್ಲಿ ಧೃತರಾಷ್ಟ್ರ, ಭೀಷ್ಮ ಮತ್ತು ಕೌರವರು ಎಲ್ಲರನ್ನೂ ಕಂಡನು. ಅವರೆಲ್ಲರೂ ಅಕ್ರೂರನನ್ನು ಸತ್ಕಾರದಿಂದ ಸ್ವಾಗತಿಸಿದರು, ಪೂಜಿಸಿದರು. ಪಾಂಡವರ ಬಗೆಗಿನ ಕೌರವರ ವಿಚಾರಗಳು ಪರಿವರ್ತನೆಯಾಗಲಿ, ದುಷ್ಟ ವಿಚಾರಗಳು ದೂರಾಗಲಿ ಎನ್ನುವ ಉದ್ದೇಶದಿಂದ ಅಕ್ರೂರನು ಕೆಲವುಕಾಲ ಅಲ್ಲಿಯೇ ವಾಸವಾಗಿದ್ದನು.

ಜ್ಞಾತ್ವಾ ಸ ಕುಂತಿ ವಿದುರೋಕ್ತಿತ ಆತ್ಮನಾ ಚ
ಮಿತ್ರಾರಿ ಮಧ್ಯ ಮಜನಾಂಸ್ತನಯೇಷು ಪಾಂಡೋಃ ।
ವಿಜ್ಞಾಯ ಪುತ್ರವಶಗಂ ಧೃತರಾಷ್ಟ್ರಮಂಜಃ
ಸಾಮ್ನೈವ ಭೇದಸಹಿತೇನ ಜಗಾದ ವಿದ್ವಾನ್ ॥೯೭॥

ಜ್ಞಾನಿಯಾದ ಅಕ್ರೂರನು ಕುಂತಿ, ವಿದುರ ಮತ್ತಿತರ ಜನರ ಮಾತುಗಳಿಂದ ಕೆಲವು ವಿಷಯಗಳನ್ನು ತಿಳಿದುಕೊಂಡನು. ಪಾಂಡವರ ವಿಷಯದಲ್ಲಿ ಮಿತ್ರರು, ಶತ್ರುಗಳು ಮತ್ತು ಉದಾಸೀನರು ಇರುವರೆಂದು ಅರಿತುಕೊಂಡನು. ಧೃತರಾಷ್ಟ್ರನು ಮಕ್ಕಳ ವಶನಾಗಿದ್ದಾನೆ ಎಂಬುದನ್ನು ತನ್ನ ಅನುಭವದಿಂದ ತಿಳಿದುಕೊಂಡನು. ಆಗ ಅಕ್ರೂರನು ಭೇದಸಹಿತ ಸಾಮೋಪಾಯ ಯುಕ್ತವೆಂದು ಧೃತರಾಷ್ಟ್ರನಿಗೆ ಹೀಗೆ ಹೇಳಿದನು.

ಪುತ್ರೇಷು ಪಾಂಡು ತನಯೇಷು ಚ ಸಾಮ್ಯವೃತ್ತಿಃ
ಕೀರ್ತಿಂ ಚ ಧರ್ಮಮುರುಮೇ ಷಿ ತಥಾರ್ಥಕಾಮೌ ।
ಪ್ರೀತಿಂ ಪರಾಂ ತ್ವಯಿ ಕರಿಷ್ಯತಿ ವಾಸುದೇವಃ
ಸಾಕಂ ಸಮಸ್ತಯದುಭಿಃ ಸಹಿತಃ ಸುರಾದ್ಯೈ ॥೯೮॥

ನಿನ್ನ ಮಕ್ಕಳಲ್ಲಿ ಪಾಂಡವರಲ್ಲಿ ಸಮವೃತ್ತಿಯನ್ನು ಬೆಳೆಸಿಕೊಂಡರೆ, ಅವರವರ ಯೋಗ್ಯತೆಗೆ ತಕ್ಕಂತೆ ಪ್ರೀತಿಸಿದಿಯಾದರೆ, ಅದರಿಂದ ನಿನಗೆ ಇಹದಲ್ಲಿ ಕೀರ್ತಿ ಲಭಿಸುವುದು. ಅಲ್ಲದೆ ಅದು ನಿನಗೆ ಶ್ರೇಷ್ಠ ಧರ್ಮ, ಅರ್ಥ ಕಾಮಗಳನ್ನೂ ಕೊಡಬಲ್ಲದು. ಕೊನೆಯಲ್ಲಿ ಪರಗತಿಯು ಕೂಡ ನಿನಗೆ ಪ್ರಿಯವಾಗಿಯೇ ಆಗುತ್ತದೆ. ವಾಸುದೇವನು, ಸಮಸ್ತ ಯಾದವರೂ ಜೊತೆಯಲ್ಲಿ ಸಕಲದೇವತೆಗಳೂ ನಿನ್ನ ವಿಷಯದಲ್ಲಿ ತೃಪ್ತರಾಗುತ್ತಾರೆ.

ಧರ್ಮಾರ್ಥಕಾಮಸಹಿತಾಂ ಚ ವಿಮುಕ್ತಿ ಮೇಷಿ
ತತ್ಪ್ರೀತಿ ತಃ ಸುನಿಯತಂ ವಿಪರೀತ ವೃತ್ತಿಃ ।
ಯಾಸ್ಯೇವ ರಾಜವರ ತತ್ಫಲ ವೈಪರೀತ್ಯ
ಮಿತ್ಥಂ ವಚೋ ನಿಗದಿತಂ ತವಕಾರ್ಷ್ಣಮದ್ಯ ॥೯೯॥

ನೀನು ಮೇಲೆ ಹೇಳಿದಂತೆ ನಡೆದುಕೊಂಡಿಯಾದರೆ, ಪರಮಾತ್ಮನ ಅನುಗ್ರಹದಿಂದ ಧರ್ಮ, ಅರ್ಥ, ಕಾಮಗಳು ದೊರೆಯುತ್ತವೆ. ಜೊತೆಯಲ್ಲಿ ಯೋಗ್ಯವಾದ ಮುಕ್ತಿಯೂ ನಿಶ್ಚಿತ. ಈ ಮಾತು ಖಂಡಿತ.

"ಎಲೈ ರಾಜನೇ ಇದರ ವಿರುದ್ಧವಾಗಿ ನಡೆದುಕೊಂಡರೆ ಫಲವು ಕೂಡ ವಿಪರೀತ. ಅಂದರೆ ನರಕ ನಿಶ್ಚಿತ. ಇದು ಶ್ರೀಕೃಷ್ಣನು ಹೇಳಿದ ಮಾತು. ಅದನ್ನೇ ನಾನು ನಿನಗೆ ಹೇಳಿದ್ದೇನೆ" ಎಂದು ಅಕ್ರೂರನು ಹೇಳಿದನು.

**ಇತ್ಥಂ ಸಮಸ್ತ ಕುರುಮಧ್ಯ ಉಪಾತ್ತವಾಕ್ಯೋ**
**ಚಾನಾಪಿ ಪುತ್ರವಶಗೋ ವಚನಂ ಜಗಾದ ।**
**ಸರ್ವಂ ವಶೇ ಭಗವತೋನ ವಯಂ ಸ್ವತಂತ್ರಾ**
**ಭೂಭಾರಸಂಹೃತಿಕೃತೇ ಸ ಇಹಾವತೀರ್ಣ: ॥೧೦೦॥**

ಮಕ್ಕಳ ವಶನಾದ ಧೃತರಾಷ್ಟ್ರನು, ಸಮಸ್ತ ಕೌರವರ ಮಧ್ಯದಲ್ಲಿ ಕುಳಿತು, ನಿರ್ಣಯಾತ್ಮಕವಾದ ಮೇಲಿನ ಮಾತುಗಳನ್ನು ಕೇಳಿದನು. ನಂತರ ಧೃತರಾಷ್ಟ್ರನು, "ಸರ್ವವು ಭಗವಂತನ ಅಧೀನದಲ್ಲಿದೆ. ನಾನು ಸ್ವತಂತ್ರನಲ್ಲ. ಭೂಭಾರವನ್ನು ಇಳುಹುವದಕ್ಕಾಗಿ, ದುಷ್ಟರ ನಾಶಕ್ಕಾಗಿಯೇ ಆತನ ಅವತಾರವಾಗಿದೆ" ಎಂದು ಹೇಳಿದನು.

ವಿ.ಲಿ. ಧೃತರಾಷ್ಟ್ರನ ಮಾತುಗಳೂ ನಿರ್ಣಾಯಕವಾದವುಗಳೇ. ಅವನು ಅಜ್ಞಾನಿಯಲ್ಲ. ಕೇವಲ ಮಕ್ಕಳ ಮೋಹ ಅವನನ್ನು ಆ ರೀತಿ ಮಾಡಿಸಿತು ಎಂದು ವ್ಯಕ್ತವಾಗುತ್ತದೆ.

**ಏವಂ ನಿಶಮ್ಯ ವಚನಂ ಸ ತು ಯಾದವೋಽಸ್ಯ**
**ಜ್ಞಾತ್ವಾ ಮನೋಽಸ್ಯ ಕಲುಷಂ ವನ್ವೈವ ಪುತ್ರಾ: ।**
**ಇತ್ಯೂಚಿವಾನ್ ಸಹ ಮರುತ್ತನಯಾರ್ಜುನಾಭ್ಯಾಂ**
**ಪ್ರಾಯಾತ್ ಪುರೀಂ ಚ ಸಹದೇವಯುತ: ಸ್ವಕೀಯಮ್ ॥೧೦೧॥**

ಕಲುಷಿತ ಮನಸ್ಸನಾದ ಧೃತರಾಷ್ಟ್ರನ ಮಾತುಗಳನ್ನು ಕೇಳಿದ ಅಕ್ರೂರನು, 'ನಿನಗೆ ಮಕ್ಕಳಿಲ್ಲ' ಎಂದು ಹೇಳಿ ಅಲ್ಲಿಂದ ಹೊರಟು ಭೀಮ, ಅರ್ಜುನ, ನಕುಲ, ಸಹದೇವರ ಜೊತೆಯಲ್ಲಿ ತನ್ನ ಪುರವನ್ನು ಬಂದುಸೇರಿದನು. 'ನಿನಗೆ ಮಕ್ಕಳಿಲ್ಲ' ಎಂಬ ಮಾತಿನಿಂದ, ನಿನಗೆ ಮಕ್ಕಳಿಂದ

ಸುಖವಾಗುವುದಿಲ್ಲ ಅಥವಾ ನಿನಗೆ ಮಕ್ಕಳಿಲ್ಲದಂತಾಗುತ್ತದೆ ಎಂಬ ಭವಿಷ್ಯವನ್ನೇ ಸೂಚಿಸಿದಂತಾಗಿದೆ.

ಜ್ಞಾನಂ ತು ಭಾಗವತಮುತ್ತಮಮಾತ್ಮಯೋಗ್ಯಂ
ಭೀಮಾರ್ಜುನೌ ಭಗವತಃ ಸಮವಾಪ್ಯ ಕೃಷ್ಣಾತ್ ।
ತತ್ರೋಷತುರ್ಭಗವತಾ ಸಹಯುಕ್ತ ಚೇಷ್ಟೌ
ಸಂಪೂಜಿತೌ ಯದುಭಿರುತ್ತಮಕರ್ಮಸಾರೌ ॥೧೦೨॥

ಜ್ಞಾನದಲ್ಲಿ ಭಾಗವತ ಧರ್ಮಜ್ಞಾನ ತಿಳಿಯುವುದು ಅಥವಾ ಭಗವಂತನನ್ನು ಕುರಿತು ಅರಿಯುವುದು ಇವು ಶ್ರೇಷ್ಠವು. ಆತ್ಮೋದ್ಧಾರಕ್ಕೆ ಯೋಗ್ಯವೂ ಅಹುದು. ಭೀಮಾರ್ಜುನರು ಶ್ರೀಕೃಷ್ಣನ ಹತ್ತಿರದಲ್ಲಿದ್ದು ಎಲ್ಲವನ್ನೂ ಕಲಿತರು. ಅಲ್ಲಿ ಭಗವಂತನಿಗೆ ಪ್ರಿಯವಾದ ಕಾರ್ಯಗಳನ್ನೇ ಮಾಡುತ್ತಿದ್ದರು. ಯಾದವರಿಂದ ಆದರ, ಆತಿಥ್ಯ, ಸತ್ಕಾರಗಳನ್ನು ಹೊಂದಿ ಮಥುರೆಯಲ್ಲಿ ಸುಖವಾಗಿದ್ದರು.

ಪ್ರತ್ಯುದ್ಯಮೋ ಭಗವತಾಪಿ ಭವೇದ್ಗದಾಯಾಃ
ಶಿಕ್ಷಾಯದಾ ಭಗವತಾ ಕ್ರಿಯತೇ ನ ಚೇಮಮ್ ।
ಕುರ್ಯಾಮಿತಿ ಸ್ಮ ಭಗವತ್ಸೆ ಮಹುಜ್ಞ ಯ್ಯೈವ
ರಾಮಾದಶಿಕ್ಷ ದುರುಗಾಯಪುರಃ ಸ ಭೀಮಃ ॥೧೦೩॥

ಶ್ರೀಕೃಷ್ಣನಿಂದ ಗದಾವಿದ್ಯೆ ಕಲಿಯಲು ಭೀಮನು ನಿರಾಕರಿಸಿದನು.

(ಏಕೆಂದರೆ, ಗದಾವಿದ್ಯೆಯನ್ನು ಕಲಿಯುವಾಗ ಅಭ್ಯಾಸಕ್ಕಾಗಿಯಾದರೂ ಒಬ್ಬರ ಮೇಲೊಬ್ಬರು ಗದೆಯನ್ನು ಪ್ರಯೋಗಿಸಬೇಕಾಗುತ್ತದೆ. ಶ್ರೀಕೃಷ್ಣನ ಮೇಲೆ ಗದಾ ಪ್ರಯೋಗ ಭೀಮನಿಗೆ ಇಷ್ಟವಿರಲಿಲ್ಲ ಕಾರಣ ಒಪ್ಪಲಿಲ್ಲ).

ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು, ಆತನ ಸಮ್ಮುಖದಲ್ಲಿಯೇ ಬಲರಾಮನಲ್ಲಿ ಗದಾಯುದ್ಧವನ್ನು ಅಭ್ಯಾಸ ಮಾಡಿದನು.

ವಿ.ವಿ. ಭೀಮನಿಗೆ ಅದೂ ಅವಶ್ಯಕವಿರಲಿಲ್ಲ. ಆತನಲ್ಲಿ ಸ್ವಾಭಾವಿಕ ಬಲವಿದ್ದಿತು. ಅಲ್ಲದೆ ಎಲ್ಲ ವಿದ್ಯೆಗಳನ್ನು ತಿಳಿದವನಾಗಿದ್ದನು. 'ಗುರುವಿನಿಂದಲೇ ವಿದ್ಯೆಯನ್ನು ಕಲಿಯುವುದು ಅವಶ್ಯಕ' ಇದನ್ನು

ಜಗತ್ತಿಗೆ ತೋರಿಸುವುದಕ್ಕಾಗಿ ಭೀಮಸೇನನು ಹೀಗೆ ಮಾಡಿದ್ದಾನೆ ಎಂದು ತಿಳಿಯಬೇಕು.

**ರಾಮೋಽಪಿ ಶಿಕ್ಷಿತಮರೀಂದ್ರರಥರಾತ್ ಪುರೋಽಸ್ಯ**
**ಭೀಮೋದನಾವಥ ಪರಾಣಿ ಹರೇರವಾಪ ।**
**ಅಸ್ತ್ರಾಣಿ ಶಕ್ರತನಯಃ ಸಹದೇವ ಆರ್ಯ**
**ನೀತಿಂ ತಥೋದ್ಧವಮುಖಾತ್ ಸಕಲಾ ಮುದಾರಾಮ್ ॥೧೦೪॥**

ಬಲರಾಮನು ಕೂಡ ಗುರುಗಳ ಮನೆಯಲ್ಲಿ ವಿದ್ಯಾಭ್ಯಾಸದ ಕಾಲದಲ್ಲಿ ಆಟರೂಪವಾಗಿ ಶ್ರೀಕೃಷ್ಣನಿಂದ ಗದಾವಿದ್ಯೆಯನ್ನು ಕಲಿತಿದ್ದನು. ಅದನ್ನೇ ಇಂದು ಶ್ರೀಕೃಷ್ಣನ ಸಮ್ಮುಖದಲ್ಲಿ ಭೀಮನಿಗೆ ಒಪ್ಪಿಸಿದನು. ಅರ್ಜುನನು ಶ್ರೀಕೃಷ್ಣನಿಂದ ಧನು ಮತ್ತು ಇತರ ಅಸ್ತ್ರಗಳ ವಿದ್ಯೆಗಳನ್ನು ಕಲಿತರೆ, ಸಹದೇವನು ಉದ್ಧವನಿಂದ ಶ್ರೇಷ್ಠವಾದ ಆರ್ಯನೀತಿಗಳನ್ನು ಅರಿತನು.

ವಿ.ವಿ. ಬಲರಾಮನು ಭೀಮನಿಗೆ ವಿದ್ಯೆಯನ್ನು ಕಲಿಸಿದನೇ? ಇಲ್ಲ. ಅಂತೆಯೇ ಆಚಾರ್ಯರು ಸ್ಪಷ್ಟ ಪಡಿಸಿದ್ದಾರೆ. ತಾರತಮ್ಯದ ಪ್ರಕಾರ ಬಲರಾಮ(ಶೇಷ)ನು ಭೀಮ(ವಾಯು)ನಿಗೆ ವಿದ್ಯಾಬೋಧನೆಗೆ ಅರ್ಹರಲ್ಲ.

**ಕೃಷ್ಣೋಽಥ ಚೌಪಗವಿಮುತ್ತಮ ನೀತಿಯುಕ್ತಂ**
**ಸಂಪ್ರೇಷಯನ್ನಿದಮುವಾಚ ಹ ಗೋಕುಲಾಯ ।**
**ದುಃಖಂ ವಿನಾಶಯ ವಚೋಭಿರರೇ ಮದೀಯೈ**
**ರ್ನಂದಾದಿನಾಂ ವಿರಹಜಂ ಮಮ ಚೌಶು ಯಾಹಿ ॥೧೦೫॥**

ಶ್ರೀಕೃಷ್ಣನು ಉತ್ತಮ ನೀತಿಯುಕ್ತನಾದ (ಉಪಗ) ಉದ್ಧವನನ್ನು ಗೋಕುಲಕ್ಕೆ ಕಳಿಸಿದನು. ನಂದನೇ ಮೊದಲಾದ ಗೋಕುಲ ನಿವಾಸಿಗಳಿಗೆ ನನ್ನ ಅಗಲಿಕೆಯಿಂದ ಉಂಟಾದ ದುಃಖವನ್ನು ನಿವಾರಿಸಿ, ಅವರನ್ನು ಸಂತೈಸು ಎಂದ ಸಂದೇಶವಿತ್ತು ಕಳಿಸಿದನು.

**ಮತ್ತೋ ವಿಯೋಗ ಇಹ ಕಸ್ಯಚಿದಸ್ತಿ ನೈವ**
**ಯಸ್ಮಾದಹಂ ತನುಭೃತಾಂ ಸಹಿತೋಽತರೇವ ।**

**ನಾಹಂ ಮನುಷ್ಯ ಇತಿ ಕುತ್ರ ಚ ವೋಽಸ್ತು ಬುದ್ಧಿ-**

**ರ್ಬ್ರಹ್ಮೈವ ನಿರ್ಮಲ ತಮಂ ಪ್ರವಂತಿ ಮಾಂಹಿ ||೧೦೬||**

ಶರೀರಧಾರಿಗಳಾದ ವ್ಯಕ್ತಿಗಳ ಎಲ್ಲರ ಅಂತರಂಗದಲ್ಲಿಯು ಸ್ಥಿರವಾಗಿ, ನಿರಂತರವಾಗಿ ನಾನು ಇದ್ದೇನೆ. ಅಂದ ಮೇಲೆ ವಿಯೋಗ ಎಲ್ಲಿಂದ ಬಂದೀತು? "ನಾನು ಮನುಷ್ಯನಲ್ಲ. ಹಾಗೆ ನೀವು ತಿಳಿಯಬಾರದು. ನನ್ನನ್ನೇ ನಿರ್ಮಲತಮ ಶ್ರೇಷ್ಠ ಬ್ರಹ್ಮನೆಂದು ಕರೆಯುತ್ತಾರೆ.
(ಈ ಶ್ಲೋಕ ಭ್ರಮರ ಗೀತೆಯ ಸಾರವಾಗಿದೆ.)

**ಪೂರ್ವಂ ಯದಾಹ್ಯಜಗರೋ ನಿಜಗಾರ ನಂದಂ**

**ಸರ್ವೇನ ಶೇಕುರಥ ತತ್ಪವಿಮೋಕ್ಷಣಾಯ ।**

**ಮತ್ಪಾದ ಸಂಸ್ಪರ್ಶತಃ ಸ ತದಾತಿ ದವ್ಯೋ**

**ವಿದ್ಯಾಧರಸ್ತದುದಿತಂ ನಿಖಿಲಂ ಸ್ಮರಂತು ||೧೦೭||**

ಪೂರ್ವದಲ್ಲಿ (ಹೆಬ್ಬಾವು) ಅಜಗರ ನಂದನನ್ನು ಹಿಡಿದಾಗ, ಎಲ್ಲರೂ ಆತನನ್ನು ಬಿಡಿಸಲು ಪ್ರಯತ್ನಿಸಿದರು. ಶಕ್ತರಾಗಲಿಲ್ಲ. ಪ್ರಯತ್ನ ಫಲಿಸಲಿಲ್ಲ. ಕೇವಲ ನನ್ನ ಪಾದಸ್ಪರ್ಶದಿಂದ, ಆ ಅಜಗರನಿಂದ ವಿದ್ಯಾಧರನೆಂಬ ಒಬ್ಬ ಗಂಧರ್ವನು ಹುಟ್ಟಿಕೊಂಡನು. ಇದನ್ನು ನೀವು ಸ್ಮರಿಸಿಕೊಳ್ಳಿರಿ. ಇದು ಶ್ರೀಕೃಷ್ಣನು ಉದ್ಧವನಿಗೆ ಹೇಳಿ ಕಳಿಸಿದ ವಿಚಾರ
ಇದರಿಂದ ಶ್ರೀಕೃಷ್ಣನು ಕೇವಲ ಮಾನವನಲ್ಲ ಎಂಬುದು ಸಿದ್ಧ.
ವಿದ್ಯಾಧರನು ಹಾವಾಗಲು ಕಾರಣ,

**ಪೂರ್ವಂ ಸ ರೂಪಮದತಃ ಪ್ರಜಹಾಸ ವಿಪ್ರಾನ್**

**ನಿತ್ಯಂ ತಪಃ ಕೃಶತರಾಂಗಿರಸೋ ವಿರೂಪಾನ್ ।**

**ತೈಃ ಪ್ರಾಪಿತಃ ಸಪದಿ ಸೋಽಜಗರತ್ವ ಮೇವ**

**ಮತ್ತೋ ನಿಜಾಂ ತನುಮವಾಪ್ಯ ಜಗಾದ ನಂದನ್ ||೧೦೮||**

ವಿದ್ಯಾಧರನು ಒಬ್ಬ ಗಂಧರ್ವನು. ಅವನು ಬಹು ಸುಂದರನೂ ಆಹುದು. ಅವನಿಗೆ ಸೌಂದರ್ಯಮದವೇರಿತ್ತು. ನಿತ್ಯವೂ ತಪದಲ್ಲಿ ನಿರತರಾಗಿ ಕೃಶರಾದ ಅಂಗೀರಸ ಮತ್ತು ಅವರ ಮಕ್ಕಳನ್ನು ಕಂಡು 'ನೀವು ವಿರೂಪರು' ಎಂದು ಹಾಸ್ಯ ಮಾಡಿದನು. ಆಗ ಆ ವಿಪ್ರರು ಖತಿಗೊಂಡು

'ನೀನು ಅಜಗರನಾಗು' ಎಂದು ಶಾಪವಿತ್ತರು. ಅದೇ ಅಜಗರವೇ ಮದದಿಂದ ನಂದನನ್ನು ಓಡಿದಿತ್ತು.
(ಮುಂದಿನ ವಿಷಯ ಮೇಲಿನ ಶ್ಲೋಕದಲ್ಲಿ ಬಂದಿದೆ)
ಕೊನೆಯಲ್ಲಿ

**ನಾಯಂ ನರೋ ಹರಿರಯಂ ಪರಮಃ ಪರೇಭ್ಯೋ**
**ವಿಶ್ವೇಶ್ವರಃ ಸಕಲಕಾರಣ ಆತ್ಮತಂತ್ರಃ ।**
**ವಿಜ್ಞಾಯ ಚೈನ ಮುರು ಸಂಸೃತಿ–ತೋ ವಿಮುಕ್ತಾ**
**ಯಾಂತ್ಯಸ್ಯ ಪಾದಯುಗಲಂ ಮುನಯೋ ವಿರಾಗಾಃ ॥೧೦೯॥**

ಇವನು ನರನಲ್ಲ ಈತನು ಸಾಕ್ಷಾತ್ ಶ್ರೀಹರಿಯಿದ್ದಾನೆ. ಪರಮರಲ್ಲಿ ಪರಮಶ್ರೇಷ್ಠನಾಗಿದ್ದಾನೆ. ಸಕಲದೇವತೆಗಳಲ್ಲಿ ಸರ್ವೋತ್ತಮನಾಗಿದ್ದಾನೆ. ವಿಶ್ವಕ್ಕೆ ಒಡೆಯನಾಗಿದ್ದಾನೆ. ಜಗತ್ತಿನ ಸೃಷ್ಟಿಗೆ ಕಾರಣನಾಗಿದ್ದಾನೆ. ಸೃಷ್ಟಿ, ಸ್ಥಿತಿ, ಲಯ ಮೂರಕ್ಕೂ ಮೂಲಕಾರಣನಾಗಿದ್ದಾನೆ. ಸರ್ವತಂತ್ರ ಸ್ವತಂತ್ರನಾಗಿದ್ದಾನೆ. ಈ ರೀತಿ ತಿಳಿದು, ಜ್ಞಾನಿಗಳು ವಿರಕ್ತರೂ ಆದ ಋಷಿಮುನಿಗಳು ಆತನ ಪಾದಯುಗ್ಮಂಗಳಲ್ಲಿ ಆಸಕ್ತಿಯಿಟ್ಟು ಭಜಿಸಿ ಸಂಸಾರದಿಂದ ಮುಕ್ತರಾಗುತ್ತಾರೆ.
ಇದು ಪರಮಾತ್ಮನ ರೂಪಿಯಾದ ಶ್ರೀಕೃಷ್ಣನ ವರ್ಣನೆ.
ಇನ್ನೊಂದು ಘಟನೆ–

**ನಂದಂ ಯದಾಚ ಜಗೃಹೇ ವರುಣಸ್ಯ ದೂತ–**
**ಸ್ತತ್ರಾಪಿ ಮಾಂ ಜಲಪತೇರ್ಗೃಹಮಾಶು ಯಾಂತಮ್ ।**
**ಸಂಪೂಜ್ಯ ವಾರಿಪತಿರಾಹ ವಿಮುಚ್ಯ ನಂದಂ**
**ನಾಯಂ ಸುತಸ್ತವ ಪುಮಾನ್ ಪರಮಃ ಸವಿಷಃ ॥೧೧೦॥**

ಸ್ನಾನ ಮಾಡುತ್ತಿರುವಾಗ ವರುಣನ ಭೃತ್ಯರು ಬಂದು ನಂದನನ್ನು ಓಡಿದುಕೊಂಡು ವರುಣನ ಲೋಕಕ್ಕೆ ಹೋದರು. ಆಗ ನಾನು ವರುಣನ ಮನೆಯನ್ನು ಪ್ರವೇಶಿಸಿದೆ. ನನ್ನನ್ನು ನೋಡಿದ ಕೂಡಲೆ ವರುಣನು ನಂದನನ್ನು ಬಿಟ್ಟನು. ನನ್ನನ್ನು ಪೂಜಿಸಿದನು. ಅಲ್ಲದೆ, "ಈತನು ನಿನ್ನ ಮಗನಲ್ಲ, ಪುರುಷೋತ್ತಮ ಇದ್ದಾನೆ. ಆತನೆ, ಪರಮನು. ಅವನೇ ನಾರಾಯಣನು" ಹೀಗೆಂದು ನಂದಗೆ ಹೇಳಿದನು. ಅದನ್ನೂ ನೆನಪಿಗೆ ತಂದು ಕೊಳ್ಳಿ

**ಸಂದರ್ಶಿತೋ ನನು ಮಯ್ಯೈವ ವಿಕುಂಠಲೋಕೋ**
**ಗೋಜೀವಿನಾಂ ಸ್ಥಿತಿರಪಿ ಪ್ರವಾರಾಮದೀಯಾ ।**
**ಮಾನುಷ್ಯ ಬುದ್ಧಿ ಮಪನೇತು ಮಜೇ ಮಯಿಸ್ಮ**
**ತಸ್ಮಾನ್ಮಯಿ ಸ್ಥಿತಿ ಮವಾಪ್ಯ ಶಮಂ ಪ್ರಯಾಂತು ॥೧೧೧॥**

ಗೋಪಾಲಕರೆಲ್ಲರೂ ಕೂಡಿ ನನ್ನದೇ ಆದ ವೈಕುಂಠ ಲೋಕವನ್ನು ತೋರಿಸು ಎಂದಾಗ, ಅವರಿಗೆ ಅದನ್ನು ತೋರಿಸಿದ್ದೇನೆ. ನನ್ನ ಶ್ರೇಷ್ಠ ಸ್ಥಿತಿಯನ್ನು ಅಲ್ಲಿ ಅವರು ಮನಗಂಡಿದ್ದಾರೆ. ಈಗಲಾದರೂ "ನಾನು ಮನುಷ್ಯ" ಎಂಬ ಬುದ್ಧಿಯನ್ನು ತ್ಯಜಿಸಿರಿ. ನನ್ನಲ್ಲಿ ಮನವನ್ನು ನಿಲ್ಲಿಸಿ, ಧೈರ್ಯವನ್ನು ತಂದು ಕೊಂಡು ಶಾಂತಿಯನ್ನು ಪಡೆಯಿರಿ.

**ಶ್ರುತ್ವೋದ್ಧವೋ ನಿಗದಿತಂ ಪರಮಸ್ಯ ಪುಂಸೋ**
**ವೃಮದಾವನಂ ಪ್ರತಿಯಯೌ ವಚನೈಶ್ಚ ತಸ್ಯ ।**
**ದುಃಖಂ ವ್ಯಪೋಹ್ಯ ನಿಖಿಲಂ ಪಶುಜೀವಾನಾನ-**
**ಮಾಯಾತ್ ಪುನಶ್ಚರಣ ಸನ್ನಿಧಿಮೇವ ವಿಷ್ಣೋಃ ॥೧೧೨॥**

ಉದ್ಧವನು, ಶ್ರೀಕೃಷ್ಣನ ಸಂದೇಶಗಳನ್ನು, ಆತನ ಮಾತುಗಳನ್ನು ಈ ರೀತಿ ಹೇಳಿ, ಗೋಪಾಲಕರ ದುಗುಡವನ್ನು ಗೋಪಿಕೆಯರ ದುಃಖವನ್ನು ನಿವಾರಿಸಿ, ಅವರನ್ನು ಸಂತೈಸಿ, ಸಮಾಧಾನ ಹೇಳಿ, ಶ್ರೀಕೃಷ್ಣನ ಪಾದಸೇವೆಗಾಗಿ ಪುನಃ ವೃಂದಾವನಕ್ಕೆ ಹಿಂದಿರುಗಿದನು.

ವಿ.ವಿ. ಭಾಗವತದಲ್ಲಿ ಬರುವ 'ಭ್ರಮರ ಗೀತೆ' ಹುಟ್ಟಿದುದು ಇದೇ ಸಂದರ್ಭದಲ್ಲಿ .

**ಇತಿ, ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ,**
**ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ**
**ಚತುರ್ದಶೋಽಧ್ಯಾಯಃ**

ಇಲ್ಲಿಗೆ ಶ್ರೀಮದಾಚಾರ್ಯರಿಂದ ವಿರಚಿತವಾದ ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯದಲ್ಲಿಯ ಅಧ್ಯಾಯ ಹದಿನಾಲ್ಕು ಸಮಾಪ್ತಿ.
ಇದನ್ನು ಶ್ರೀ ಕೃಷ್ಣನು ಸ್ವೀಕರಿಸಿ, ಸಂತೃಪ್ತನಾಗಿ ಉದ್ಧರಿಸಲಿ.

---0---

## ಹದಿನಾಲ್ಕನೆಯ ಅಧ್ಯಾಯದ ಚಿಂತನ

ಇದೇ ಅಧ್ಯಾಯದ ಪೀಠಿಕೆಯಲ್ಲಿ ಹೇಳಿದಂತೆ, ಕಂಸನ ವಧೆಯ ನಂತರದ ಘಟನೆಗಳನ್ನು ಈ ಅಧ್ಯಾಯದಲ್ಲಿ ವಿವರಿಸಿದ್ದಾರೆ.

ಹರಿವಂಶದಲ್ಲಿ ಪೂರ್ವಾರ್ಧ ಮತ್ತು ಉತ್ತರಾರ್ಧ ಎಂದು ಎರಡು ಭಾಗಗಳನ್ನು ಮಾಡಿದ್ದು ತಮಗೆಲ್ಲರಿಗೂ ತಿಳಿದ ವಿಷಯ.

ಬಹುಶಃ ಶ್ರೀಮದಾಚಾರ್ಯರು ಅದೇ ಜಾಡಿನಲ್ಲಿ ಈ ಎರಡು ಅಧ್ಯಾಯಗಳನ್ನು ರೂಪಿಸಿರಬಹುದೇ? ಇದರಲ್ಲಿಯೂ ಕೃಷ್ಣ ಲೀಲೆಯೇ ವಿಶೇಷ ಅಡಕವಾಗಿದೆ. ಜೊತೆಯಲ್ಲಿ ಪಾಂಡವರ ಚರಿತ್ರೆಯೂ ಸೇರಿಕೊಂಡಿದೆ.

ಶ್ರೀಕೃಷ್ಣನು ತಂದೆ ತಾಯಿಗಳ ಬಂಧನವನ್ನು ಬಿಡಿಸಿದನು. ತಾನು ಮುಂಜೀ ಬಂಧನಕ್ಕೊಳಗಾದನು. ಮಾನವನ ಜೀವನಕ್ಕೆ ಅಗತ್ಯವೆನಿಸುವ ಮೂರು ಧರ್ಮಗಳನ್ನು ಕೇವಲ ಉಪದೇಶಿಸಿಲ್ಲ. ತಾನು ಮಾಡಿ ತೋರಿದ್ದಾನೆ. ಇದೇ ಆತನ ವೈಶಿಷ್ಟ್ಯ. 'ಆಡದೆ ಮಾಡುವನು ರೂಢಿಯೊಳಗುತ್ತಮನು' ಎಂಬ ಮಾತನ್ನು ಮೆರೆದಿದ್ದಾನೆ. ನಂದಗೋಪನು ಕೃಷ್ಣನ ಮಾತುಗಳಿಂದ ಸಂತುಷ್ಟನಾಗಿ ವೃಂದಾವನಕ್ಕೆ ಬಂದಿದ್ದಾನೆ.

'ಜ್ಞಾನಾರ್ಜನೆಯಿಲ್ಲದೆ ಮಾನವನ ಜೀವನ ವ್ಯರ್ಥ' ಇದನ್ನು ತೋರಲೆಂದೇ ಶ್ರೀಕೃಷ್ಣನು ಆವಂತಿಯ ಗುರುಕುಲದಲ್ಲಿ ಸೇರಿದ್ದಾನೆ. ತಾನು ಸರ್ವಜ್ಞನಾದರೂ ಅಜ್ಞನಂತೆ ವರ್ತಿಸಿ ಗುರುವಿನಲ್ಲಿ ಕಲಿತಿದ್ದಾನೆ. ದೇವತೆಗಳಿಗೆ ದಾರಿ ತೊರಿದ್ದಾನೆ. ಗುರುಗಳು ಶ್ರೀಕೃಷ್ಣನಿಗೆ ವಿದ್ಯೆಯನ್ನು ಕಲಿಸಿದರೇ, ಅರ್ಪಿಸಿದರೇ ಎಂಬುದನ್ನು ವಿವರಿಸಿ ಆಗಿದೆ. ಶಿಷ್ಯನಿಗೆ ವಿದ್ಯೆ ಫಲಿಸಬೇಕಾದರೆ ಗುರುದಕ್ಷಿಣೆ ಅವಶ್ಯಕ ಮತ್ತು ಅನಿವಾರ್ಯ ಎಂಬ ಮಾತು ವ್ಯಕ್ತವಾಗುತ್ತದೆ.

ಗೋಪೀ ಗೀತೆಯಲ್ಲಿ ಹೇಳಿದಂತೆ ಶ್ರೀಕೃಷ್ಣನ ಆವಾಸದಿಂದ ಆಸ್ಥಾನ ಲಕ್ಷ್ಮಿಯ ನಿವಾಸವಾಯಿತು. ಲಕ್ಷ್ಮಿಯ ನಿವಾಸದಿಂದ ಅದು ವೈಕುಂಠಕ್ಕೆ ಮಿಗಿಲಾಯಿತು. ದೇಶ ಸಮೃದ್ಧವಾಯಿತು.

ಇತ್ತ ಕಂಸನ ಪತ್ನಿಯರು ಆಸ್ತಿ ಮತ್ತು ಪ್ರಾಸ್ತಿ, ತಂದೆಯಾದ ಜರಾಸಂಧನ ಹತ್ತಿರ ಹೋಗಿ, ಕೃಷ್ಣನಿಂದಲೇ ತಮಗೆ ವೈಧವ್ಯ ಪ್ರಾಪ್ತಿಯಾಯಿತು ಎಂದು ಹೇಳಿದಾಗ ಯಾವ ತಂದೆಗೆ ಕ್ರೋಧ ಬರಲಿಕ್ಕಿಲ್ಲ? ಮೇಲಾಗಿ

ಜರಾಸಂಧನು ಸಾಮಾನ್ಯನಲ್ಲ. ಅವನು ತನ್ನ ಗದೆಯನ್ನು ಬೀಸಿ ಒಗೆದು ಕೃಷ್ಣನನ್ನು ಆತನ ಪರಿವಾರ ಮತ್ತು ನಗರ ಎಲ್ಲವನ್ನು ನಾಶಮಾಡಬೇಕೆಂದು ಕುಳಿತಲ್ಲಿಂದಲೇ ಒಗೆದನು. ಗದೆಯೇನೋ ಅಷ್ಟು ದೂರ ಹೋಯಿತು. ಆದರೆ ನಾರದರ ಒಂದು ಮಾತಿನಿಂದ ಮಥುರೆಯು ಉಳಿಯಿತು. ಬದಲಾಗಿ ಜರಾಸಂಧನ ತಾಯಿ ಅಳಿದಳು. ಜರಾಸಂಧನಿಗೆ ತಾಯಿ ಇಲ್ಲದಂತಾದಳು. ಜೊತೆಯಲ್ಲಿ ಗದೆಯೂ ಹಾರಿಹೋಯಿತು. ಅವನಿಗೆ ಕ್ರೋಧ ಅಧಿಕವಾಯಿತು. ಇಂದು ಆ ಕಾರ್ಯ ಬಾಂಬುಗಳು ಮಾಡಹತ್ತಿವೆ.

ನಾರದರು ಹೇಳಿದ ಮಾತು ಸತ್ಯವೇ? ಅಸತ್ಯವೇ? ಇದನ್ನು ವಿವರಿಸ ಲಾಗಿದೆ. ನಾಲ್ಕು ಜನ ಸಜ್ಜನರಿಗೆ ಹಿತವಾಗುವ ಮಾತಿದ್ದರೆ, ಅದು ಸತ್ಯ. ಅಲ್ಲಿ ಶಬ್ದಗಳ ಅರ್ಥಕ್ಕೆ (ಬಾಹ್ಯಾರ್ಥಕ್ಕೆ) ಮಹತ್ವವಿಲ್ಲ ಎಂದು ನಿರ್ಣಯಿಸಲಾಗಿದೆ.

ಜರಾಸಂಧನು ಸೈನ್ಯದಿಂದ ಮುತ್ತಿಗೆ ಹಾಕಿ, ಯುದ್ಧ ಮಾಡಿಯೇ ಕೃಷ್ಣನನ್ನು ಆತನ ಪಟ್ಟಣವನ್ನು ನಾಶಮಾಡಬೇಕೆಂದು ನಿಶ್ಚಯಿಸುತ್ತಾನೆ. ಮಥುರಾ ಪಟ್ಟಣಕ್ಕೆ ಬಂದು ಮುತ್ತುತ್ತಾನೆ. ಯುದ್ಧ ನಿಯಮಕ್ಕೆ ಸರಿಯಾಗಿ ದೂತರನ್ನು ಕಳುಹಿ, ವೈರಿಯನ್ನು ಎಚ್ಚರಿಸುತ್ತಾನೆ. ಅವನನ್ನು ರೇಗಿಸುವುದಕ್ಕಾಗಿ ಕೆಲವು ಅಣಕದ (ವ್ಯಂಗ್ಯ) ಮಾತುಗಳನ್ನಾಡಿ ಓಯಾಳಿಸುತ್ತಾನೆ. ಯುದ್ಧಕ್ಕೆ ಆಹ್ವಾನಿಸುತ್ತಾನೆ.

ಜರಾಸಂಧನ ಮೂದಲಿಕೆಯ ಮಾತುಗಳು, ಅವನಿಗೆ ವ್ಯಂಗ್ಯವಾಗಿ ಕಂಡರೂ ಪರಮಾತ್ಮನ ಬಗೆಗೆ ಅವು ಸತ್ಯವೆಂಬ ಮಾತನ್ನು ಅವನು ಅರಿಯದಿದ್ದರೂ, ಶ್ರೀಮದಾಚಾರ್ಯರು ಅವುಗಳನ್ನು ಸತ್ಯವೆಂದು ದೃಢಪಡಿಸಿದ್ದಾರೆ.

ಶ್ರೀಕೃಷ್ಣ, ಬಲರಾಮರು ಕೂಡಿ ಜರಾಸಂಧನ ಸೈನ್ಯವನ್ನು ಎದುರಿಸುತ್ತಾರೆ. ಜರಾಸಂಧನನ್ನು ರೇಗಿಸುವ (ಸಿಟ್ಟಿಗೆಬ್ಬಿಸುವ) ದೃಷ್ಟಿಯಿಂದ ಉಗ್ರಸೇನನನ್ನು ಮುಂದೆ ಮಾಡುತ್ತಾರೆ. ಜರಾಸಂಧನು ಅವನನ್ನು ಬಹಳಷ್ಟು ಬೈಯುತ್ತಾನೆ. ಕೊನೆಗೆ ಯುದ್ಧ ಪ್ರಾರಂಭವಾಗುತ್ತದೆ. ಜರಾಸಂಧನ ಸಹಾಯಕ್ಕಾಗಿ ಬಂದ ಅನೇಕ ರಾಜರು, ಅವರ ಸೈನ್ಯ ಎಲ್ಲವೂ ನಾಶವಾಗುತ್ತದೆ. ಕೊನೆಗೆ ಅವನು ಸೋತು ಓಡಿ ಹೋಗುತ್ತಾನೆ. ಏಕಲವ್ಯನೂ ಜರಾಸಂಧನಿಗೆ ಸಹಾಯಕನಾಗಿ ಬಂದಿರುತ್ತಾನೆ.

ಇಲ್ಲಿ ಆಚಾರ್ಯರು ಏಕಲವ್ಯನ ಪೂರ್ವವೃತ್ತಾಂತವನ್ನು ತಿಳಿಸಿ ವ್ಯಕ್ತಿ ಪರಿಚಯವನ್ನು ಮಾಡಿಸುತ್ತಾರೆ. ಓದುಗರಿಗೆ ಅದು ಮುಂದೆ ಸಹಾಯವಾಗುತ್ತದೆ.

ಜರಾಸಂಧನು ಶ್ರೀಕೃಷ್ಣನ ಕೈಗೆ ಸಿಕ್ಕರೂ ಕೃಷ್ಣ ಕೊಲ್ಲುವುದಿಲ್ಲ. ಜೀವದಾನ ಕೊಟ್ಟು ತಿರುಗಿ ಕಳಿಸುತ್ತಾನೆ. ಆಚಾರ್ಯರು ಅದಕ್ಕೆ ಕಾರಣವನ್ನು ಸುಂದರವಾಗಿ ಮತ್ತು ಮನಸ್ಸಿಗೆ ನಾಟುವಂತೆ ಕೊಟ್ಟಿದ್ದಾರೆ.

ಶ್ರೀಕೃಷ್ಣನು 'ವಿಜಯಶ್ರೀ'ಯನ್ನು ಪಡೆದನು. ಅನೇಕ ದುಷ್ಟರ ನಾಶವೂ ಆಯಿತು. ದೇವತೆಗಳು ಸಂತುಷ್ಟರಾಗಿ ಹೂಮಳೆಗರೆದರು.

ಆಚಾರ್ಯರು ಕೇವಲ ಶ್ರೀಕೃಷ್ಣನ ಚರಿತ್ರೆಯನ್ನೇ ಮುಂದೊಡ್ಡುವುದಿಲ್ಲ. ಭಕ್ತರ ಚರಿತ್ರೆಯನ್ನೂ ಸೇರಿಸಿ ಕೃಷ್ಣನ ಕೀರ್ತಿಗೆ ಎರಡು ಗರಿಗಳನ್ನು ಸೇರಿಸುತ್ತಾರೆ. ಭಕ್ತರನ್ನು ಹೊಗಳಿದರೆ ಭಕ್ತವತ್ಸಲನಿಗೂ ಪ್ರೀತಿ. ಮಗನನ್ನು ಬಣ್ಣಿಸಿದರೆ ತಂದೆಗೆ ಆನಂದವಾಗಲಾರದೇ?

ಆಚಾರ್ಯರ ಈ ಉದ್ದೇಶದಲ್ಲಿ ಮನೋವೈಜ್ಞಾನಿಕ ದೃಷ್ಟಿಯೂ ಅಡಕವಾಗಿದೆ. ಒಂದೇ ವಿಷಯವನ್ನು ವಿವರಿಸುತ್ತ ಹೋದರೆ ಸಾಮಾನ್ಯ ಓದುಗರಿಗೆ ಕಠಿಣವಾಗಬಹುದು ಎಂದು ಭಾವಿಸಿ ಅಲ್ಲಲ್ಲಿ ಇತರ ವಿಷಯಗಳನ್ನು ಸೇರಿಸಿ, ವಿಷಯದ ಚಿಂತನೆಗೆ ಮನವನ್ನು ಅಣಿಗೊಳಿಸುತ್ತಾರೆ. ಇದು ಮನೋವಿಜ್ಞಾನಿಯ ಲಕ್ಷಣ. ಆಚಾರ್ಯರು ಜೀವೋತ್ತಮರು. ಅಂದಮೇಲೆ ಅವರು ಮಾನವನ ಜೀವನದ ಯೋಗ್ಯತೆಯನ್ನು ಅರಿಯರೇ?

## ಪಾಂಡವರ ಚರಿತ್ರೆ

ಪಾಂಡುರಾಜನು ನಾರಾಯಣಾಶ್ರಮದಲ್ಲಿದ್ದಾನೆ. ಮಕ್ಕಳು ಬೆಳೆಯುತ್ತಿದ್ದಾರೆ. ಒಂದು ದಿನ ಅರ್ಜುನನ ಹುಟ್ಟುಹಬ್ಬ. ಕುಂತಿಯು ಆನಂದದಿಂದ ಋಷಿಮುನಿಗಳಿಗೆ ಆಮಂತ್ರಣವಿತ್ತಿದ್ದಾಳೆ. ಧಾರ್ಮಿಕ ಕಾರ್ಯಗಳೂ ನಡೆದಿವೆ.

ಪಾಂಡುರಾಜನು ಮಾದ್ರಿಯನ್ನು ಕೂಡಿಕೊಂಡು ವನದಲ್ಲಿ ತಿರುಗಾಡಲು ಹೊರಟಿದ್ದಾನೆ. ವಸಂತ ಋತು. ಪುಷ್ಪಗಳು ಅರಳಿವೆ. ಮಕರಂದ ಮತ್ತು ಸುವಾಸನೆ ಎಲ್ಲ ಕಡೆಗೂ ಪಸರಿಸಿದೆ. ಹಿತಮಿತವಾದ ಮಂದಗಾಳಿ, ಕೋಗಿಲೆಯ ಇಂಚರ ಸಹಜವಾಗಿಯೇ ಪಾಂಡುರಾಜನೂ ಕಾಮನ ಬಾಣಕ್ಕೆ ತುತ್ತಾಗಿದ್ದಾನೆ. ಮಾದ್ರಿಯನ್ನು ಕರೆದಿದ್ದಾನೆ. ಆಕೆ ಎಷ್ಟು ಹೇಳಿದರೂ ಕೇಳದೆ ಬಲಾತ್ಕರಿಸಿದ್ದಾನೆ. ವಿಧಿಯ ಲೀಲೆಯು ಬೇರೇಯೇ

ಇದ್ದಿತು. ಪಾಂಡುವು ಮೃತ್ಯುವಿಗೆ ತುತ್ತಾಗಿದ್ದಾನೆ. ಮಾದ್ರಿ ಹೆದರಿ ಚೀರಿದ್ದಾಳೆ. ಕುಂತಿಯೂ ಹೆದರಿ ಮಕ್ಕಳೊಂದಿಗೆ ಅಲ್ಲಿಗೆ ಬಂದಿದ್ದಾಳೆ. ವಿಚಿತ್ರವಾದ ಘಟನೆ ಮಾದ್ರಿ, ಕುಂತಿ, ಪಾಂಡವರು ಎಲ್ಲರು ರೋದಿಸುವವರೇ, ಇದನ್ನು ಕೇಳಿ ಮುನಿಗಳೂ ಬಂದರು. ಸಹಗಮನಕ್ಕಾಗಿ ಸ್ಪರ್ಧೆ ನಡೆದಿದೆ. ಋಷಿಗಳು ಎಲ್ಲ ವೃತ್ತಾಂತವನ್ನು ಕೇಳಿ, ಮಾದ್ರಿಯು ತಪ್ಪಿತಸ್ಥಳು. ಅವಳಿಗೆಯೇ ಸಹಗಮನ ಯೋಗ್ಯವೆಂದು ನಿರ್ಣಯಿಸಿದ್ದಾರೆ. ಸಹಗಮನವು ಶಿಕ್ಷೆಯಾಗಿ ಪರಿಣಮಿಸಿತು.

ಸಹಗಮನವು ಧಾರ್ಮಿಕವೇ? ಸಾಮಾಜಿಕವೇ? ಅಥವಾ ಪರಿಸ್ಥಿತಿಯನ್ನು ಅವಲಂಭಿಸಿದೆಯೇ? ಇತ್ಯಾದಿಗಳನ್ನು ಚರ್ಚಿಸಲಾಗಿದೆ. ಧಾರ್ಮಿಕವಾಗಿ ಬಂದದ್ದಲ್ಲ ಎಂದು ನಿರ್ಣಯಿಸಲಾಗಿದೆ.

ಆಚಾರ್ಯರು, ಪಾಂಡುರಾಜನ ಮೃತ್ಯುವಿಗೆ ಕೇವಲ ಕಿಂದಮ ಋಷಿಗಳ ಶಾಪವು ಒಂದೇ ಕಾರಣವಲ್ಲ. ಇನ್ನೂ ಇತರ ಕಾರಣಗಳೂ ಇವೆ ಎಂದು ಸ್ಪಷ್ಟಪಡಿಸಿದ್ದಾರೆ.

ದೊಡ್ಡವರ ಮನನೊಂದರೂ ಶಾಪವಾಗಬಹುದು ಎಂದು ಎಚ್ಚರಿಸಿದ್ದಾರೆ.

ಪಾಂಡುರಾಜನ ಅಂತ್ಯಕ್ರಿಯೆ ಮುಗಿದಿದೆ. ಪಾಂಡುವಿಗೆ ಗತಿಯೂ ಲಭಿಸಿದೆ. ಕುಂತಿಯು ಮಕ್ಕಳನ್ನು ಕಟ್ಟಿಕೊಂಡು ಮುನಿಗಳ ಸಹಿತಳಾಗಿ ಹಸ್ತಿನಾವತಿಗೆ ಬಂದಿದ್ದಾಳೆ. ಬಂದ ಮುನಿಗಳು ಪಾಂಡುರಾಜನ ಮರಣ, ಮತ್ತಿತರ ವೃತ್ತಾಂತವನ್ನು ತಿಳಿಸಿದರು. ಧೃತರಾಷ್ಟ್ರ, ಭೀಷ್ಮ ಮೊದಲಾದವರು ಮೌನವನ್ನು ತಾಳಿದರು. ಆ ಮಕ್ಕಳನ್ನು ಸ್ವೀಕರಿಸಲು ಸಿದ್ಧರಾಗಲಿಲ್ಲ. ದುರ್ಯೋಧನನು ಎದ್ದು ನಿಂತು ಪಾಂಡುರಾಜನು ಮೊದಲೇ ತೀರಿಕೊಂಡಿದ್ದಾನೆ. ಈ ಮಕ್ಕಳು ಅನಂತರದವು. ಇವರು ನಮ್ಮ ಮನೆತನಕ್ಕೆ ಯೋಗ್ಯರಾಗಲಾರರು ಎಂದು ದುಷ್ಟ ಮತ್ತು ನಿಕೃಷ್ಟ ಮಾತುಗಳನ್ನು ಆಡಿದ್ದಾನೆ. ಅವನನ್ನು ಯಾರೂ ವಿರೋಧಿಸಲಿಲ್ಲ. ಅಷ್ಟರಲ್ಲಿ ಆಕಾಶವಾಣಿ ಆಯಿತು. "ಇವರು ಪಾಂಡುವಿನ ಮಕ್ಕಳು ಧಾರ್ಮಿಕ ವಿಧಿಯಿಂದಲೇ ಹುಟ್ಟಿದ್ದಾರೆ. ಇವರನ್ನು ನೀವು ಹೊರಗೆ ಹಾಕಲು ಶಕ್ಯವಿಲ್ಲ. ಪರಮಾತ್ಮನು ಇವರ ರಕ್ಷಕನಾಗಿದ್ದಾನೆ" ಎಂದು ಹೇಳಿದಾಗ ಎಲ್ಲರೂ ಹೆದರಿದರು. ಆದರೂ ಒಪ್ಪಲಿಲ್ಲ. ಅಷ್ಟರಲ್ಲಿ ವ್ಯಾಸರು ಬಂದು ಅವರನ್ನು ಕರೆದುಕೊಂಡು ಪಾಂಡು ರಾಜನ ಮನೆಗೆ

ಹೋದರು. ಆಗ ಎಲ್ಲರೂ ಕುಂತಿಯನ್ನು, ಕುಂತಿಯ ಮಕ್ಕಳನ್ನು ಗೌರವದಿಂದ ಕಾಣಹತ್ತಿದರು.

ಕೌರವರು ಪಾಂಡವರು ಕೃಪಾಚಾರ್ಯರ ಹತ್ತಿರ ವಿದ್ಯಾಭ್ಯಾಸ ಪ್ರಾರಂಭಿಸಿದರು. ಮಕ್ಕಳ ಎಲ್ಲ ಆಟಗಳಲ್ಲೂ ಭೀಮನೇ ಮುಂದಾಗಿರುತ್ತಿದ್ದನು. ಎಲ್ಲರನ್ನು ಗೆಲ್ಲುತ್ತಿದ್ದನು.

ಒಂದು ದಿನ ಕೌರವರು ಗಿಡದ ಹಣ್ಣು ಬಯಸಿ ಮೇಲೇರಿದಾಗ, ಭೀಮನು ಆ ಗಿಡದ ಬುಡಕ್ಕೆ ಒದೆದು ಎಲ್ಲರನ್ನು ಕೆಡವಿದನು. ಅದು ಕೌರವರಿಗೆ ಅಪಮಾನವಾಯಿತು. ಭೀಮನು ನೀರಾಟದಲ್ಲಿ ನಿಪುಣನು. ಅನೇಕರನ್ನು ನೀರಿನಲ್ಲಿ ಮುಳುಗಿಸಿ, ಅವರು ದಣಿವದ್ದನ್ನು ಕಂಡು ನಗುತ್ತಿದ್ದನು. ಒಂದೊಂದು ಸಲ ಅನೇಕರನ್ನು ಹೊತ್ತುಕೊಂಡು ಗಂಗೆಯ ತುಂಬು ಪ್ರವಾಹವನ್ನು ಆಯಾಸವಿಲ್ಲದೆ ದಾಟುತ್ತಿದ್ದನು. ಕೌರವರನ್ನು ಕಂಡರೆ ಭೀಮನಿಗೆ ಆಗುತ್ತಿರಲಿಲ್ಲ. ಅವರಿಗೆ ಕಿರುಕುಳ ಕೊಡುತ್ತಿದ್ದನು. ಅವನ ಬಲವನ್ನು ಕಂಡು ಕೌರವರು ಸಹಿಸದಾದರು.

ಭೀಮನು ಹೀಗೆ ಏಕೆ ಮಾಡಿದನು. ಅದಕ್ಕೆ ಆಚಾರ್ಯರ ಸಮಾಧಾನ. ಪರಿವಾಯುಗಳಲ್ಲಿ ದ್ವೇಷವಿಲ್ಲದೆ, ಅಸುರರಿಗೆ ನರಕವಿಲ್ಲ. ವಾಯುವಿನಲ್ಲಿ ದ್ವೇಷ ಹುಟ್ಟಿಸುವುದಕ್ಕಾಗಿಯೇ ಭೀಮನು ಈ ರೀತಿಯಿಂದ ಮಾಡಿದನು. ಮುಂದೆ ಅದು ಶ್ರೀಹರಿಯ ದ್ವೇಷದಲ್ಲಿಯೂ ಪರ್ಯವಸಾನಗೊಂಡಿತು.

ಭೀಮನು ಸತ್ತರೆ, ಅರ್ಜುನನನ್ನು ಬಲದಿಂದ ಗೆಲ್ಲಬಹುದು. ಉಳಿದವರನ್ನು ಬಂಧನದಲ್ಲಿಟ್ಟು ನಮ್ಮ ಕಾರ್ಯವನ್ನು ಸಾಧಿಸಿಕೊಳ್ಳಬಹುದೆಂದು ಕೌರವರು ಯೋಚಿಸಿದರು. 'ಭೀಮನನ್ನು ಬಲದಿಂದ ಗೆಲ್ಲುವುದು ಸಾಧ್ಯವಿಲ್ಲ. ಕುಯುಕ್ತಿಯಿಂದ ಕೊಲ್ಲಬೇಕು' ಎಂದು ಯೋಚಿಸಿ, ಊಟದಲ್ಲಿ ವಿಷವನ್ನು ಹಾಕಿದರು, ಗಂಗೆಯ ಮಡುವಿನಲ್ಲಿ ಕಾಲು ಕಟ್ಟಿ ಒಗೆದರು, ಹಾವುಗಳಿಂದ ಕಚ್ಚಿಸಿದರು, ಯಾವುದಕ್ಕೂ ಸಾಯಲಿಲ್ಲ. ಏಕೆ? ಇದಕ್ಕೆ ದ್ವೈತಸಿದ್ಧಾಂತದ ದೃಷ್ಟಿಯಿಂದ ಈ ರೀತಿ ಸಮಾಧಾನ ಹೇಳಬಹುದು.

ತಾರತಮ್ಯದ ಪ್ರಕಾರ ಶ್ರೀಹರಿ ಮತ್ತು ಲಕ್ಷ್ಮಿಯ ನಂತರ ವಾಯು–ಬ್ರಹ್ಮರು.

ಒಬ್ಬ ವ್ಯಕ್ತಿ ಇನ್ನೊಬ್ಬನನ್ನು ಸೋಲಿಸಬೇಕಾದರೆ, ಅಥವಾ ಕೊಲ್ಲಬೇಕಾದರೆ, ಇನ್ನೊಬ್ಬರಿಗಿಂತ ಮೊದಲಿನವನು ಹತ್ತುಪಟ್ಟು ಅಥವಾ ನೂರುಪಟ್ಟು ಅಧಿಕ ಬಲವಿದ್ದಾಗ ಮಾತ್ರ ಸಾಧ್ಯ. ಈ ಮಾತು ತಾತ್ಪರ್ಯ ನಿರ್ಣಯದಲ್ಲಿ ನಿರ್ಣಯಿಸಿ ಆಗಿದೆ. ಇದು ಲೋಕಾರೂಢಿಯು ಕೂಡ. ಇಲ್ಲಿ ಕೌರವರು ಪ್ರಯತ್ನಿಸಿದ ವಿಷ, ನೀರು ಮತ್ತಿತರ ಸಾಧನೆಗಳ ಅಭಿಮಾನಿ ದೇವತೆಗಳಿಗಿಂತಲೂ ಕಡಿಮೆ ದರ್ಜೆಯವು. ಅಂದಮೇಲೆ ಅದರ ಪರಿಣಾಮ ವಾಯುವಿನ ಮೇಲೆಂತಾಗಬೇಕು? ಅಲ್ಲದೆ ಶ್ರೀಹರಿಯ ಸಂಪೂರ್ಣ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಶ್ರೀಹರಿಯ ರಕ್ಷಾಕವಚ ವಾಯುದೇವರಿಗೆ ಸದಾ ಬೆನ್ನಿಗೆ ರಕ್ಷೆಯಾಗಿದೆ.

ಶ್ರೀಮದಾಚಾರ್ಯರು ಭೀಮನ ಭಕ್ತಿಯನ್ನು ವಿವರಿಸುತ್ತ ಪ್ರಹ್ಲಾದನೊಂದಿಗೆ ಹೋಲಿಸಿದ್ದಾರೆ. ಭಗವಂತನಿಗೆ ಅನೇಕ ಭಕ್ತರಿದ್ದರೂ ಪ್ರಹ್ಲಾದನನ್ನೇ ಏಕೆ ತೆಗೆದುಕೊಂಡರು? ಎನ್ನುವುದಕ್ಕೆ ವಿಚಾರ. ಪ್ರಹ್ಲಾದ ಭಕ್ತ ಶ್ರೇಷ್ಠನೆಂದು ಪ್ರಸಿದ್ಧನಾಗಿದ್ದಾನೆ. ಕಾರಣ ಅತನನ್ನೇ ತೆಗೆದುಕೊಂಡಿದ್ದಾರೆ. ಪ್ರಹ್ಲಾದರು ದೇವನನ್ನು ಅನೇಕ ಸಲ ಸ್ತುತಿಸಿದ್ದಾರೆ. ಆಗ ಶ್ರೀಹರಿ ಪ್ರಹ್ಲಾದರನ್ನು ಸಂಕಟದಿಂದ ಪಾರುಮಾಡಿದ್ದಾರೆ. ಆದರೆ ವಾಯುವಿನ ಭಕ್ತಿ ಹಾಗಲ್ಲ ನಿರುಪಾಧಿಕ ಮತ್ತು ನಿರವಧಿಕ ಸ್ವಭಾವದಿಂದ ಬಂದದ್ದು. ಜೀವನಿಗೆ ಉಸಿರಾಟವಿದ್ದಂತೆ– ಇಬ್ಬರೂ ಶ್ರೇಷ್ಠ ಭಕ್ತರೇ. ಆದರೂ ತಾರತಮ್ಯವಿದೆ. ಇದೇ ದ್ವೈತ ಸಿದ್ಧಾಂತದ ಮುಖ್ಯ ತಿರುಳು.

ಈಗ ದುರ್ಯೋಧನಾದಿಗಳು, (ವಾಯುವಿಗೆ ಆಶ್ರಯನಾದ ನಾರಾಯಣ) ಅಥವಾ ಭೀಮನಿಗೆ ಸಹಾಯಕನಾದ ಶ್ರೀಕೃಷ್ಣನನ್ನೇ ದ್ವೇಷಿಸಿ ಅವನನ್ನೇ ಇಲ್ಲದಂತೆ ಮಾಡಿದರೆ ಭೀಮನ ಆಟವು ಮುಗಿದಂತೆಯೇ ಎಂದು ನಿಶ್ಚಯಿಸಿದರು. ಹಿರಣ್ಯಕಶಿಪು ಕೂಡ ಇದೇ ರೀತಿ ಯೋಚಿಸಿದ್ದನು. ದುಷ್ಟರ ವಿಚಾರಗಳು ಎಲ್ಲಿದ್ದರೂ ಯಾವಾಗಲೂ ಒಂದೇ ಇರುತ್ತವೆ.

ಶ್ರೀಕೃಷ್ಣನಿಗೂ ಜರಾಸಂಧನಿಗೂ ದ್ವೇಷವಿದೆ ಎಂಬುದನ್ನು ಕೌರವರು ಚೆನ್ನಾಗಿ ಅರಿತಿದ್ದರು. ಕಾರಣ· ತಮ್ಮ ಉದ್ದೇಶವನ್ನು ಈಡೇರಿಸಲು ಅವರು ಜರಾಸಂಧನೊಡನೆ ಸಖ್ಯ ಬೆಳೆಸಿದರು. ಸಮಾನ ಸ್ವಭಾವದವರಲ್ಲಿ ಸಖ್ಯ ಬೆಳೆಸುವುದು ಸ್ವಾಭಾವಿಕ. ಇಲ್ಲಿ ಇಬ್ಬರೂ ಶ್ರೀಕೃಷ್ಣನ ವೈರಿಗಳಾಗಿದ್ದಾರೆ. ಕಾರಣ ಅವರಲ್ಲಿ ಸ್ನೇಹ ಕುದುರಿತು. ಎಲ್ಲರೂ ಸೇರಿ

ಮಥುರಾ ಪುರಿಯ ಮೇಲೆ ಆಕ್ರಮಣ ಮಾಡಿದರು. ಶ್ರೀಕೃಷ್ಣನು ಎಲ್ಲರನ್ನೂ ಸೋಲಿಸಿ ಜಯವನ್ನು ಸಂಪಾದಿಸಿದನು.

ಇತ್ತ ದುಷ್ಟನಾದ ಧೃತರಾಷ್ಟ್ರನು, ಮಕ್ಕಳ ಪ್ರಯತ್ನದಿಂದ ಭೀಮನು ಸಾಯಲಿಲ್ಲವಲ್ಲ! ಇವನು ಊರಲ್ಲಿದ್ದರೆ ಒಳಿತಲ್ಲ. ಕಾರಣ ಯುದ್ಧದಲ್ಲಾದರೂ ಸಾಯಲಿ ಎಂದು ಯೋಚಿಸಿ, ಭೀಮನನ್ನು ಸುತ್ತಲಿನ ಪ್ರಾಂತಗಳ ದಿಗ್ವಿಜಯಕ್ಕಾಗಿ ಕಳಿಸಿದನು.

ಭೀಮನಿಗೆ ಅದು ಒಳ್ಳೆಯದೇ ಆಯಿತು. ಅನೇಕ ದುಷ್ಟರ ನಾಶವಾಯಿತು. ಜೊತೆಯಲ್ಲಿ ಅವನ ಕೀರ್ತಿಯೂ ಬೆಳೆಯಿತು. ಭೀಮನು ಯುದ್ಧದಲ್ಲಿ ನಾಲ್ಕೂ ದಿಕ್ಕಿನ ರಾಜರನ್ನು ಗೆದ್ದನು. ಶಿಶುಪಾಲ, ದಂತವಕ್ತ್ರ, ರುಕ್ಮಿ, ಶಲ್ಯ, ಏಕಲವ್ಯ ಮುಂತಾದ ಅನೇಕ ರಾಜರನ್ನು ಸೋಲಿಸಿದನು. ಭೀಮನ ಕೈತಪ್ಪಿದವರು, ಅರ್ಜುನನಿಂದ ಮೆತ್ತಗಾದರು. ಅಂತು ಪಾಂಡವರಿಗೆ ಜಯವಾಯಿತು.

ಶ್ರೀಮದಾಚಾರ್ಯರು ಮೇಲಿನ ವ್ಯಕ್ತಿಗಳ ಪೂರ್ವಾಪರಗಳನ್ನು ತಿಳಿಸಿ ಓದುಗರಿಗೆ ಅವರ ಚರಿತ್ರೆ ಮತ್ತು ಸ್ವಭಾವಗಳನ್ನು ಅರಿಯಲು ಅನುಕೂಲ ಮಾಡಿಕೊಟ್ಟಿದ್ದಾರೆ.

ಶ್ರೀಕೃಷ್ಣನು ಧೃತರಾಷ್ಟ್ರನಿಗೆ ಹೇಳಿದ ಬುದ್ಧಿವಾದ.

ಧೃತರಾಷ್ಟ್ರನು ದುಷ್ಟ ಮಕ್ಕಳ ವಶದಲ್ಲಿದ್ದಾನೆ. ಪಾಂಡವರ ಮೇಲೆ ಅನ್ಯಾಯ ಮಾಡಲು ಪ್ರವೃತ್ತನಾಗಿದ್ದಾನೆ ಎಂದು ಶ್ರೀಕೃಷ್ಣನು ಅರಿತನು. ಅದನ್ನು ಬೆಳೆಯಗೊಡಬಾರದು ಎಂದು ಅಕ್ರೂರನನ್ನು ಕಳಿಸಿದನು.

ಅಕ್ರೂರನು ಬಂದು, ಧೃತರಾಷ್ಟ್ರನಿಗೆ, "ನಿನಗೆ ಎಲ್ಲ ಮಕ್ಕಳು ಸಮಾನರು. ಪಾಂಡವರೂ ನಿನ್ನ ತಮ್ಮನ ಮಕ್ಕಳೇ. ಇಬ್ಬರಲ್ಲಿ ಸಮವೃತ್ತಿಯನ್ನು ಬೆಳಸಿಕೋ. ಅದು ನಿನಗೆ ಶ್ರೇಷ್ಠಧರ್ಮ. ಇಹದಲ್ಲಿ ಕೀರ್ತಿ, ಪರದಲ್ಲಿ ಪರಮಾತ್ಮನ ಅನುಗ್ರಹಕ್ಕೆ ಪಾತ್ರನಾಗುವಿ. ಧರ್ಮ, ಅರ್ಥ, ಕಾಮ, ಮೋಕ್ಷಗಳು ನಿನಗೆ ಕರಗತವಾಗುತ್ತವೆ" ಇದು ಶ್ರೀಕೃಷ್ಣನು ಹೇಳಿದ ಮಾತು. ಅದನ್ನೇ ನಾನು ನಿನಗೆ ಹೇಳಿದ್ದೇನೆ ಎಂದನು.

ಆಗ ಧೃತರಾಷ್ಟ್ರನು, "ನಾನು ಅಸ್ವತಂತ್ರನು, ಸರ್ವವು ಭಗವದಧೀನ. ದೈವೇಚ್ಛೆಯಂತೆ ಆಗುತ್ತದೆ. ಪರಮಾತ್ಮನ ಅವತಾರವೇ ದುಷ್ಟರ

ನಾಶಕ್ಕಾಗಿ ಆಗಿದೆ. ನಾನೇನೂ ಮಾಡುವಂತಿಲ್ಲ'' ಎಂದು ತನ್ನ ಅಸಹಾಯಕತೆಯನ್ನು ಹೇಳಿಕೊಂಡನು.

ಧೃತರಾಷ್ಟ್ರನ ಮಾತುಗಳು ಮೇಲುನೋಟಕ್ಕೆ ಮಕ್ಕಳ ಪರವಾಗಿ ಕಂಡರೂ ಅವು ಜ್ಞಾನಿಗಳ ಮಾತುಗಳು ಆಗಿದ್ದವು. ಆದರೆ ಅವು ಧೃತರಾಷ್ಟ್ರನ ನಡೆಯಲ್ಲಿರಲಿಲ್ಲ. "ಆಡುವ ಮಾತು ನುಡಿಯಲ್ಲಿದ್ದು, ನಡೆಯಲ್ಲಿರದಿದ್ದರೆ, ಜಗದೊಡೆಯ ಮೆಚ್ಚ'' ಎಂಬ ಮಾತನ್ನು ಓದುಗರು ನೆನಪಿನಲ್ಲಿಟ್ಟಿರಬೇಕು.

ಅಕ್ರೂರನು ಧೃತರಾಷ್ಟ್ರನ ಮನದ ಇಂಗಿತವನ್ನು ಅರಿತು ನಿನಗೆ ಮಕ್ಕಳಿಂದ ಗತಿಯಿಲ್ಲ ಎಂದು ಹೇಳಿ ಹೊರಟುಹೋದನು.

ಭೀಮಾರ್ಜುನರು ಶ್ರೀಕೃಷ್ಣ, ಬಲರಾಮರಿಂದ ವಿದ್ಯೆಗಳನ್ನು ಕಲಿತರು. ನಕುಲ ಸಹದೇವರುಗಳು ಉದ್ಧವನಿಂದ ಆರ್ಯನೀತಿಗಳನ್ನು ತಿಳಿದುಕೊಂಡರು.

ಭೀಮನು ಶ್ರೀಕೃಷ್ಣನಿಂದ ಗದಾಯುದ್ಧದ ಕಲೆಯನ್ನು ಕಲಿಯಲಿಲ್ಲ. ಏಕೆಂದರೆ, ಕಲಿಯುವಾಗ ಗದೆಯನ್ನು ಪ್ರಯೋಗಕ್ಕಾಗಿಯಾದರೂ ಶ್ರೀಕೃಷ್ಣನ ಮೇಲೆ ಉಪಯೋಗಿಸಬೇಕಾಗುತ್ತದೆ. ಅದಕ್ಕೆ ಭೀಮನ ಮನಸ್ಸು ಒಪ್ಪಲಿಲ್ಲ. ಕಾರಣ ಆತನು ನೆಪಮಾತ್ರಕ್ಕಾಗಿ ಬಲರಾಮನಿಂದ ಗದೆಯ ಪ್ರಯೋಗಗಳನ್ನು ಅರಿತಂತೆ ಮಾಡಿದನು. ನಿಜವಾಗಿ ಬಲರಾಮನು ಭೀಮನಿಗೆ ವಿದ್ಯೆ ಕಲಿಸಲು ಅರ್ಹನಲ್ಲ. ಮೇಲಾಗಿ ಭೀಮನು ಎಲ್ಲವನ್ನೂ ಬಲ್ಲವನಾಗಿದ್ದನು. ಬಲರಾಮನು ಕೇವಲ ತನ್ನ ವಿದ್ಯೆಯನ್ನು ಅರ್ಪಿಸಿದನು ಎಂದೇ ತಿಳಿಯಬೇಕು ಎಂಬುದು ಆಚಾರ್ಯರ ಅಭಿಪ್ರಾಯ. ಕೊನೆಯಲ್ಲಿ ಶ್ರೀಕೃಷ್ಣನು ಉದ್ಧವನನ್ನು ಗೋಕುಲಕ್ಕೆ ಕಳಿಸುತ್ತಾನೆ. ನಂದ-ಯಶೋದೆಯರಿಗೆ, ಗೋಪಾಲಕ, ಗೋಪಿಕಾಸ್ತ್ರೀಯರಿಗೆ, ಇತರ ಪೌರಜನರಿಗೆ ಶ್ರೀಕೃಷ್ಣನ ಅಗಲಿಕೆಯಿಂದ ಉಂಟಾದ ನೋವನ್ನು ಕಳೆಯಲು, ಅವರನ್ನು ಸಂತೈಸಲು ಹೇಳುತ್ತಾನೆ. ಹಿಂದಿನ ಅನೇಕ ಘಟನೆಗಳನ್ನು ನೆನಪು ಮಾಡಿ- ನಾನು ಮಾನವನಲ್ಲ, ಸರ್ವರ ಹೃದಯದಲ್ಲಿ ಇದ್ದೇನೆ. ಅವರ ಹೃದಯದಲ್ಲೂ ಇದ್ದೇನೆ. ಸರ್ವಸ್ಥಳಗಳಲ್ಲಿದ್ದೇನೆ. ಅಲ್ಲಿಯೂ ಇದ್ದೇನೆ, ಭಕ್ತಿಯಿಂದ ನೆನೆದರೆ ಅಲ್ಲಿಯೇ ಇರುತ್ತೇನೆ ಎಂದು ತಿಳಿಸಿ ಅವರಿಗೆ ಸಮಾಧಾನ ಮಾಡು ಎಂದು ಹೇಳಿಕಳಿಸುತ್ತಾನೆ.

ಇಲ್ಲಿಯೇ "ಭಾಗವತದ ಭ್ರಮರ ಗೀತೆಯು ಹುಟ್ಟುತ್ತದೆ'' ಎಂಬುದನ್ನು ಓದುಗರು ಸ್ಮರಿಸಬೇಕು.

---0---

## ಶ್ರೀ ಗುರುಭ್ಯೋ ನಮಃ

# ಅಧ್ಯಾಯ ಹದಿನೈದು

ಹಿಂದಿನ ಅಧ್ಯಾಯದಲ್ಲಿ ಭೀಮ, ಅರ್ಜುನ, ನಕುಲ ಮತ್ತು ಸಹದೇವ ಶ್ರೀಕೃಷ್ಣನ ಮನೆಯಲ್ಲಿಯೇ ಇದ್ದರು. ಭೀಮನ ಗದಾವಿದ್ಯೆಯನ್ನು ವಿವರಿಸಿ ಆಗಿದೆ. ಬಲರಾಮನು ಭೀಮನಿಗೆ ಕಲಿಸಿದನೇ? ಎಂಬುದು ಕೂಡ ತಿಳಿಸಿ ಆಗಿದೆ. ಅರ್ಜುನನು ಬಿಲ್ಲುವಿದ್ಯೆಯನ್ನು ಕೃಷ್ಣನಿಂದ ಕಲಿತನು. ನಕುಲ ಮತ್ತು ಸಹದೇವರು ಉದ್ಧವನಿಂದ ನೀತಿ ಧರ್ಮ ಇತ್ಯಾದಿಗಳನ್ನು ತಿಳಿದುಕೊಂಡರು ಎಂದು ಕೂಡ ಹೇಳಿ ಆಗಿದೆ.

ಈ ಅಧ್ಯಾಯದಲ್ಲಿಯೂ, ಶ್ರೀಮದಾಚಾರ್ಯರು ಪಾಂಡವರ ವಿದ್ಯಾಭ್ಯಾಸ ಯಾರಲ್ಲಿ ಆಯಿತು? ಹೇಗೆ ಮುಂದುವರಿತು? ಇತ್ಯಾದಿಗಳನ್ನು ತಿಳಿಸುತ್ತಿದ್ದಾರೆ.

**ಹರಿಃ ಓಂ। ಏವಂ ಪ್ರಶಾಸತಿ ಜಗತ್ ಪುರುಷೋತ್ತಮೇಽಸ್ಮಿನ್**
**ಭೀಮಾರ್ಜುನೌ ತು ಸಹದೇವ ಯುತಾವನುಜ್ಞಾಮ್ ।**
**ಕೃಷ್ಣಾದವಾಪ್ಯ ವರ್ಷತ್ರಿತಯಾತ್ ಪುರಂ ಸ್ವ**
**ಮಾಜಗ್ಮತು ರ್ಹರಿಸುತೇನ ವಿಶೋಕ ನಾಮ್ನಾ ॥೧॥**

ಪುರುಷೋತ್ತಮನಾದ ಶ್ರೀಕೃಷ್ಣನು ಜಗತ್ತನ್ನು ಒಳ್ಳೆಯ ರೀತಿಯಿಂದ ಪ್ರಕಾಶನ ಮಾಡುತ್ತಿರುವಾಗ, ಭೀಮಾರ್ಜುನರಿಗೆ ಕೃಷ್ಣನ ಮನೆಯಲ್ಲಿ ಮೂರು ವರ್ಷ ಕಳೆಯಿತು. ಒಂದು ದಿನ ಭೀಮ, ಅರ್ಜುನ, ನಕುಲ ಮತ್ತು ಸಹದೇವ ಎಲ್ಲರು ಶ್ರೀಕೃಷ್ಣನ ಅಪ್ಪಣೆಯನ್ನು ಪಡೆದು, ಕೃಷ್ಣನ ಮಗನಾದ 'ವಿಶೋಕ' ನನ್ನು ಕೂಡಿಕೊಂಡು ತಮ್ಮ ಪಟ್ಟಣವಾದ ಹಸ್ತಿನಾಪುರಕ್ಕೆ ಬಂದರು.

ಈ ವಿಶೋಕ ನಾರು?

**ಸೈರಂಧ್ರಿ ಕೊದರಭವ ಸ ತು ನಾರದಸ್ಯ**
**ಶಿಷ್ಯೋ ವೃಕೋದರ ರಥಸ್ಯ ಬಭೂವ ಯಂತಾ ।**

**ಯಾ ಪಿಂಗಲಾನ್ಯ ಭವ ಆತ್ಮನಿ ಸಂಸ್ಥಿತಂ ತಂ**

**ಸಂಸ್ಕೃತ್ಯ ಕಾಂತ ಮುರುಗಾಯ ಮಭೂತ್ತ್ರಿವಕ್ರಾ ॥೨॥**

ಈ ವಿಶೋಕನು ಸೈರಂಧ್ರಿಯಾರು? ಹಿಂದೆ ಭಾಗವತದಲ್ಲಿ ಬಂದಿರುವ 'ಪಿಂಗಲಾ' ಎಂಬ ಸ್ತ್ರೀಯೇ ಇಂದು ಸೈರಂಧ್ರಿಯಾಗಿದ್ದಾಳೆ. ಶ್ರೀಕೃಷ್ಣನು ಮಥುರಾ ಪಟ್ಟಣಕ್ಕೆ ಬಂದಾಗ ಗಂಧವನ್ನು ಲೇಪಿಸಿ ಸತ್ಕರಿಸಿದ ಸ್ತ್ರೀ ತ್ರಿವಕ್ರೆಯನ್ನು ತಾವು ಸ್ಮರಿಸಬಹುದು. ಅವಳೇ ಇಂದು ಸೈರಂಧ್ರಿ.

ಪಿಂಗಳೆಯ ಜೀವನದ ಹಿನ್ನಲೆ. ಪಿಂಗಳೆ ಒಬ್ಬ ವೇಶ್ಯೆ. ಅವಳು ತನ್ನ ಜೀವನವನ್ನು ಸಾಗಿಸುತ್ತಿರುವಾಗ ಉದ್ಧಾರದ ಕಾಲ ಬಂದಿತು. ಅವಳಿಗೆ ತನ್ನ ಜೀವನ ಮತ್ತು ದೇಹದಲ್ಲಿ ಜೇಸಿಕೆ ಹುಟ್ಟಿತು. ಸಂಸಾರದಲ್ಲಿ ವೈರಾಗ್ಯ ಹೆಚ್ಚಿತು. ವಿರಕ್ತಳಾದಳು. ಶ್ರೀಕೃಷ್ಣನೇ ತನಗೆ ಪತಿಯಾಗಬೇಕೆಂದು ಬಯಸಿ ತಪಸ್ಸು ಮಾಡಹತ್ತಿದಳು. ಅದೇ ಧ್ಯಾನದಲ್ಲಿಯೇ ತನ್ನ ಶರೀರವನ್ನು ತ್ಯಜಿಸಿದಳು. 'ಅಂತ್ಯಕಾಲೇ ವಿಶೇಷತಃ' ಎಂಬಂತೆ ಆ ಸಂಕಲ್ಪ ಪರಮಾತ್ಮನಿಗೆ ಸ್ವೀಕೃತವಾಯಿತು, ಇಂದು ಅವಳೇ ಸೈರಂಧ್ರಿ. ಅವಳ ಹೊಟ್ಟೆಯಲ್ಲಿ ವಿಶೋಕನು ಹುಟ್ಟಿದ್ದಾನೆ.

ವಿ.ವಿ. ಪರಮಾತ್ಮನ ಅನುಗ್ರಹಕ್ಕೆ ಜಾತಿ, ಕಸಬುಗಳು ಅಡ್ಡ ಬರಲಾರವು. ಮಾಡಿದ ತಪ್ಪಿಗೆ ಪಶ್ಚಾತ್ತಾಪ (ಪ್ರಾಯಶ್ಚಿತ್ತ) ಮತ್ತು ನಿಶ್ಚಲವಾದ ಭಕ್ತಿ, ಇವುಗಳೇ ಮುಖ್ಯ ಎಂಬುದಕ್ಕೆ ಈ ದೃಷ್ಟಾಂತ ಸಾಕು.

**ತಂ ಪಂಚರಾತ್ರ ವಿದ ಮಾಪ್ಯ ಸುಸಾರಥಿಂ ಸ**

**ಭೀಮೋ ಮುಮೋದ ಪುನರಾಪ ಪರಾತ್ಮ ವಿದ್ಯಾಮ್ ।**

**ವ್ಯಾಸಾತ್ ಪರಾತ್ಮತ ಉವಾಚ ಚ ಫಲ್ಗುನಾದಿ –**

**ದೈವೇಷು ಸರ್ವವಿಜಯಾ ಪರವಿದ್ಯ ಯೈಷಃ ॥೩॥**

ಆ ವಿಶೋಕನು ಪಂಚರಾತ್ರವನ್ನು ಚೆನ್ನಾಗಿ ಬಲ್ಲವನಾಗಿದ್ದನು. ಅಂಥವನು ಭೀಮನಿಗೆ ಒಳ್ಳೆಯ ಸಾರಥಿಯಾಗಿ ಕೆಲಸ ಮಾಡಿದನು. ಅದರಿಂದ ಭೀಮನೂ ಸಂತುಷ್ಟನಾಗಿದ್ದನು. ಇಲ್ಲಿಗೆ ಬಂದ ನಂತರ ಭೀಮನು ವ್ಯಾಸರಿಂದ ಪರತತ್ವ ವಿದ್ಯೆಗಳನ್ನು ಚೆನ್ನಾಗಿ ಅರಿತನು. ಅದನ್ನು ಅರ್ಜುನಾದಿಗಳೂ ಅರಿತುಕೊಂಡರು. ಕೇವಲ ಆ ಪರಾತ್ಮ ವಿದ್ಯೆಯಿಂದಲೇ ಸಕಲ ಜಗತ್ತನ್ನು ಗೆಲ್ಲಬಹುದು. ಪರಮಾತ್ಮನಿಂದ

ಇನ್ನೊಬ್ಬರಿಗೆ ಉಪದೇಶ ಪಡೆಯುವ ಅಧಿಕಾರ ಇಲ್ಲ. ಕಾರಣ ಭೀಮ (ವಾಯು) ಪಡೆದು ನಂತರ ಇತರರಿಗೆ ಉಪದೇಶಿಸಿದನು ಎಂಬ ಸಿದ್ಧಾಂತವನ್ನು ನೆನಪಿಡಬೇಕು.

**ಸರ್ವಾನ ಭಾಗವತ ಶಾಸ್ತ್ರ ಪಥಾನ್ ವಿಧೂಯ**
**ಮಾರ್ಗಂ ಚಕಾರ ಸತು ವೈಷ್ಣವ ಮೇವ ಶುಭ್ರಮ್ ।**
**ಕ್ರೀಡಾರ್ಥಮೇವ ವಿಜಿಗಾಯ ತಥೋ ಭಯೋತ್ಮ**
**ಯುದ್ಧೇ ಬಲಂ ಚ ಕರವಾ ಕ್ಯಭವೇಽಮಿತಾತ್ಮಾ ॥೪॥**

ಭಾಗವತ ಶಾಸ್ತ್ರಕ್ಕೆ ವಿರುದ್ಧವಾದ ಎಲ್ಲ ಮಾರ್ಗ ಮತ್ತು ಧರ್ಮಗಳನ್ನು ತ್ಯಜಿಸಿ, ವಿಷ್ಣುವೇ ಸರ್ವೋತ್ತಮನೆಂಬ ಪರಿಶುಭ್ರವಾದ ವೈಷ್ಣವ ಧರ್ಮಗಳನ್ನೇ ಅನುಸರಿಸುತ್ತಿದ್ದನು. ಎಲ್ಲ ಆಟಗಳಲ್ಲೂ ಅವನಿಗೆ ಜಯವಾಗುತ್ತಿತ್ತು. ಬಾಹು ಯುದ್ಧದಲ್ಲೂ ಇವನ ಬಲವೇ ಅಧಿಕವಾಗಿತ್ತು. ಇವನ ವಾಕ್ಪ್ರಭೆಗೂ ಮಿತಿಯಿರಲಿಲ್ಲ. ಮಾತಿನಲ್ಲೂ ಚತುರನಾಗಿದ್ದನು.

**ನಿತ್ಯ ಪ್ರಭೂತ ಸುಶುಭೋ (ಭ) ಪ್ರತಿಭೋಽಪಿ ವಿಷ್ಣೋಃ**
**ಶ್ರುತ್ವಾ ಪರಾಂ ಪುನರಪಿ ಪ್ರತಿಭಾಮ ವಾಪ ।**
**ಕೋ ನಾಮ ವಿಷ್ಣುನುಪಜೀವಕ ಆಸ ಯಸ್ಯ**
**ನಿತ್ಯಾಶ್ರಯಾದಭಿ ಹಿತಾಪಿ ರಮಾ ಸದಾ ಶ್ರೀ ॥೫॥**

ಪರಮ ಮಂಗಲ ಮತ್ತು ಶುಭಪ್ರದವಾದ ಶ್ರೀ ವಿಷ್ಣುವಿನ ಜ್ಞಾನವು ಭೀಮಸೇನನಲ್ಲಿ ದಿನನಿತ್ಯವು ಪ್ರವೃದ್ಧಿಯಾಗುತ್ತು. ಪರಮಾತ್ಮನ ನಾಮಸ್ಮರಣೆಯಾದಂತೆಲ್ಲ ಭೀಮಸೇನನ ಜ್ಞಾನ ಪ್ರತಿಭಾನ್ವಿತವಾಗುತ್ತಿತ್ತು.

ವಿಷ್ಣುವಿನ ನಾಮಕ್ಕೆ ಯಾರು ತಾನೆ ಉಪಜೀವಕರಾಗಿಲ್ಲ? ಸದಾ ಶ್ರೀಯುಳ್ಳ ರಮಾದೇವಿಯಂಥವರೇ ಶ್ರೀಹರಿಯ ಅಧೀನರಾಗಿದ್ದಾರೆ. ಅಂದಮೇಲೆ ಉಳಿದವರ ಪಾಡೇನು?

ಆದುದರಿಂದ ಪರಮಾತ್ಮ (ವಿಷ್ಣು) ಸರ್ವೋತ್ತಮನು.

ಭೀಮಸೇನನು ಧರ್ಮರಾಜನಿಗೂ ವಿದ್ಯೆಯನ್ನು ಕಲಿಸಿದನೇ? ಎಂಬ ಸಂಶಯಕ್ಕೆ ಪರಿಹಾರ.

**ವ್ಯಾಸಾದವಾಪ ಪರಮಾತ್ಮ ಸು (ಸ) ತತ್ವವಿದ್ಯಾಂ**
**ಧರ್ಮಾತ್ಮಜೋSಪಿ ಸತತಂ ಭಗವತ್ಪ್ರಪನ್ನಾಃ ।**
**ತೇ ಪಂಚ ಪಾಂಡುತನಯಾ ಮುಮು ದುರ್ನಿತಾಂತಂ**
**ಸದ್ಧರ್ಮ ಚಾರಿಣ ಉರುಕ್ರಮ ಶಿಕ್ಷಿತಾರ್ಥಾ: ॥೬॥**

ಧರ್ಮರಾಜನು ಕೂಡ ಶ್ರೀ ವೇದವ್ಯಾಸರಲ್ಲಿಯೇ ಒಳ್ಳೆಯ ತತ್ವಗಳನ್ನು ಅರಿತನು. ಧರ್ಮನು ಕೂಡ ಪರಮಾತ್ಮನಿಗೆ ಬಹು ಪ್ರಿಯನಾಗಿದ್ದನು. ಎಲ್ಲ ಪಾಂಡವರು ಈ ರೀತಿಯಾಗಿ ವಿದ್ಯೆ ಕಲಿತು, ಸಧರ್ಮಾಚರಣೆಯಲ್ಲಿ ನಿರತರಾಗಿ, ಶಿಕ್ಷಣವನ್ನು ಯಾರಿಂದ ಪಡೆಯಬೇಕು, ಹೇಗೆ ಪಡೆಯಬೇಕು ಎಂಬುದನ್ನು ತಮ್ಮ ಆಚರಣೆಗಳಿಂದ ತೋರುತ್ತ ಆನಂದದಿಂದ ಕಾಲಕಳೆಯುತ್ತಿದ್ದರು.

ವಿ.ವಿ. ಧರ್ಮರಾಜನು ವ್ಯಾಸರಿಂದ ನೇರವಾಗಿ ಉಪದೇಶ ಪಡೆಯಲು ಅರ್ಹನಾದನೇ? ಮೂಲತಃ ಇಲ್ಲ, ಆದರೆ, ಈಗ ಅವರು ಮಾನವರಾಗಿ ಬಂದಿದ್ದಾಗಲೆ. ಧರ್ಮನು ಅಣ್ಣನಾಗಿದ್ದಾನೆ, (ವಾಯು) ಅರ್ಹತೆಯೂ ಮಿಗಿಲಾಗಿದ್ದರೂ ತಮ್ಮನಾದ ಪ್ರಯುಕ್ತ ಅಣ್ಣನಿಗೆ ಬೋಧಿಸುವಂತಿಲ್ಲ. ಅಂತೆಯೆ ಧರ್ಮನು ಭಗವಂತನಿಂದ ತತ್ವಗಳನ್ನು ಅರಿತಿದ್ದಾನೆ. ಮಾನವನಾಗಿ ಬಂದಮೇಲೆ ಮಾನವನಂತೆ ನಡೆಯುವುದೂ ಒಂದು ಧರ್ಮವೇ.

ಈ ತೊಡಕನ್ನು ತಪ್ಪಿಸುವುದಕ್ಕಾಗಿಯೇ ಮುಂದಿನ ಶ್ಲೋಕವನ್ನು ನೋಡಿ.

**ಯದಾ ಭರದ್ವಾಜಸನು ತಸ್ತ ಸಂಚಯೀ**
**ಪ್ರತಿ ಗ್ರಹೋಜ್ಝೋ ನಿಜಧರ್ಮ ವರ್ತೀ ।**
**ದ್ರೌಣಿಸ್ತದಾ ಧಾರ್ತರಾಷ್ಟ್ರೈಃ ಸಮೇತ್ಯ**
**ಕ್ರೀಡನ್ ಪಯಃ ಪಾತು ಮುಪೈತಿ ಸದ್ಮ ॥೭॥**

ಆ ಕಾಲದಲ್ಲಿ ಭರದ್ವಾಜ ಋಷಿಗಳ ಮಕ್ಕಳಾದ ದ್ರೋಣಾಚಾರ್ಯರು, ಶಿಲೋಂಛವೃತ್ತಿಯ ತಮ್ಮ ನಿಜವಾದ ಧರ್ಮವನ್ನು ಪಾಲಿಸುತ್ತ ಆಶ್ರಮದಲ್ಲಿರುತ್ತಿದ್ದರು. ಒಂದು ದಿನ ದ್ರೋಣಾಚಾರ್ಯರ ಮಕ್ಕಳು ಅಶ್ವತ್ಥಾಮಾಚಾರ್ಯರು ಧೃತರಾಷ್ಟ್ರನ ಮಕ್ಕಳೊಂದಿಗೆ

ಆಟವಾಡುತ್ತಿರುವಾಗ ಮಧ್ಯದಲ್ಲಿ, ಹಾಲು ಕುಡಿಯುವ ಉದ್ದೇಶದಿಂದ ತಮ್ಮ ಮನೆಗಳಿಗೆ ಹೋದರು.

'ಶಿಲೋಂಛವೃತ್ತಿ' ಜೀವನ ನಡೆಸುವುದಲ್ಲಿ ಯಾರನ್ನೂ, ಏನನ್ನೂ ಬೇಡಬಾರದು. ಯಾವ ಪದಾರ್ಥದ ಸಂಗ್ರಹಣೆ ಮಾಡುವಂತಿಲ್ಲ. ಅಂದರೆ ಜೀವನ ನಾಗಿಸುವುದು ಹೇಗೆ? ರಾಶಿಯನ್ನು ಮನೆಗೆ ಒಯ್ಯುವಾಗ ದಾರಿಯಲ್ಲಿ ಬಿದ್ದ ಕಾಳುಗಳನ್ನು ಆಯ್ದು ತರುವುದು ಅಥವಾ ರಾಶಿಯನ್ನು ಮಾಡಿ ತೆರವಾದ ಮೇಲೆ ಕಣದಲ್ಲಿ ಅಲ್ಲಲ್ಲಿ ಬಿದ್ದ ಕಾಳುಗಳನ್ನು ಆಯ್ದು ತರುವುದು. ಅಂಥವುಗಳಿಂದ ಜೀವನವನ್ನು ಸಾಗಿಸುವುದು. ಇದು ಬಹಳ ಕಠಿಣ ವ್ರತ. ಎಲ್ಲರಿಗೂ ಸಾಧಿಸುವುದಿಲ್ಲ. ದ್ರೋಣರು ಮಾತ್ರ ಅದನ್ನು ಕೈಕೊಂಡು ನಡೆಸಿದರು. ಅವರಿಗೂ ಜೀವನದಲ್ಲಿ ಪೂರೈಸುವುದಾಗಲಿಲ್ಲ. ಮುಂದೆ ನೋಡಿ.

**ತಸ್ಮೈ ಮಾತಾ ಪಿಷ್ಟಮಾ ಲೋಡ್ಯ ಪಾತುಂ**
**ದದಾತಿ ಪೀತ್ವೈತಿ ತದ್ವೈ (ದೇ) ಷ ನಿತ್ಯ ಮ್ ।**
**ಪೀತ ಕ್ಷೀರಾನ್ ಧಾರ್ತರಾಷ್ಟ್ರಾನ್ ಸಮೇ(ಕ್ಷ್ಯ)ತ್ಯ**
**ಮಯಾಪೀತಂ ಕ್ಷೀರ ಮಿತ್ಯಾಹ ನಿತ್ಯಮ್ ॥೮॥**

ಮನೆಗೆ ಹೋದಾಗ ಅಶ್ವತ್ಥಾಮನ ತಾಯಿಯು ಹಿಟ್ಟು ಕಲಿಸಿದ ನೀರನ್ನು ಕುಡಿಯಲು ಕೊಡುತ್ತಿದ್ದಳು. ಅದನ್ನೇ ಕ್ಷೀರವೆಂದು ಗ್ರಹಿಸಿ ನಿತ್ಯವೂ ಆ ಬಾಲಕನು ಕುಡಿಯುತ್ತಿದ್ದನು. 'ನಾನೂ ದಿನಾಲು ಹಾಲು ಕುಡಿಯುತ್ತೇನೆ' ಎಂದು ಆ ಬಾಲಕನು ಕೌರವರಿಗೆ ಹೇಳುತ್ತಿದ್ದನು.

**ನೃತ್ಯಂತಮೇನಂ ಪಾಯಯಾ ಮಾ ಸುರೇತೇ**
**ಪಯಃ ಕದಾಚಿದ್ರ ಸಮಸ್ಯ ಸೋವ್ಯೆ (ವೇ) ತ್ ।**
**ಪುನಃ ಕದಚಿತ್ ಸ ತು ಮಾತೃದತ್ತೇ**
**ಪಿಷ್ಟೇ ವೇದಂ ಕ್ಷೀರ ಮಿತ್ಯಾರುರಾವ ॥೯॥**

ಆಟವಾಡುವಾಗ ಮಧ್ಯದಲ್ಲಿ ಅವರು ತಮ್ಮ ತಮ್ಮ ಮನೆಗಳಲ್ಲಿ ಹಾಲು ಕುಡಿಯುತ್ತಿದ್ದರು. ಒಂದು ದಿನ ಕೌರವರು ಅಶ್ವತ್ಥಾಮನನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ತಾವು ಕುಡಿಯುವ ಹಾಲನ್ನೇ ಕೊಟ್ಟರು.

(ಅಶ್ವತ್ಥಾಮನು ಆಗ ನಿಜವಾದ ಹಾಲಿನ ರುಚಿಯನ್ನು ಕಂಡನು) ಪುನಃ ಒಂದು ದಿನ ತಾಯಿಯಿತ್ತ ಹಾಲನ್ನು ಕಂಡು, ಅಶ್ವತ್ಥಾಮನು, ಇದು ಹಿಟ್ಟಿನ ಹಾಲು, ನಿಜವಾದ ಹಾಲಲ್ಲ ಎಂದು ಗಟ್ಟಿಯಾಗಿ ಅರಚಿದನು.

**ದೃಷ್ಟ್ವಾ ರುವಂತಂ ಸುತಮಾತ್ಮಜಸ್ಯ**
**ಸ್ನೇಹಾ ನಿಯತ್ಯೈವ ಜನಾರ್ದನಸ್ಯ**
**ಸಂಪ್ರೇರಿತಃ ಕೃಪಯಾ ಚಾರ್ತರೂಪೋ**
**ದ್ರೋಣೋ ಯಯಾ ಪಾರ್ಜಯಿತುಂ ತದಾ ಗಾಮ್ ॥೧೦॥**

ತನ್ನ ಮಗನು ಅಳುತ್ತಿರುವುದನ್ನು ದ್ರೋಣಾಚಾರ್ಯರು ನೋಡಿದರು. ಮಗನ ಮೇಲಿನ ಮಮತೆಯಿಂದಲೂ, ಹೆಂಡತಿಯಾದ ಕೃಪೆಯ ಪ್ರೇರಣೆಯಿಂದಲೂ ಅಪರ ಆರ್ತ(ರೂಪ) ಸ್ಥಿತಿಯನ್ನು ಕಂಡು, ಪರಮಾತ್ಮನ ಪ್ರೇರಣೆಯಿಂದಲೇ ದ್ರೋಣಾಚಾರ್ಯರು ಆಕಳನ್ನು ಸಂಪಾದಿಸಿ ತರಲೇಬೇಕೆಂದು ಆಗ ಹೊರಟೇ ಬಿಟ್ಟರು.

ವಿ.ವಿ. ಇಲ್ಲಿ ಆಚಾರ್ಯರು 'ಆರ್ತ' ಶಬ್ದವನ್ನು ಬಹಳ ಚಮತ್ಕಾರಿಕವಾಗಿ ಬಳಸಿದ್ದಾರೆ.

೧. ಮಗನ ಮೇಲಿನ ಮೋಹದಿಂದ ದ್ರೋಣಾಚಾರ್ಯರು ದುಃಖಿತರಾದರು.

೨. ಇದುವರೆಗೆ ನಡೆಸಿಕೊಂಡು ಬಂದ ಶ್ರೇಷ್ಠವಾದ ಶಿಲೋಂಛವೃತ್ತಿ ಬಿಡಬೇಕಾಗಿ ಬಂದಿತಲ್ಲ. ಆಕಳಿಗಾಗಿ ಅನ್ಯರನ್ನು ಯಾಚಿಸ ಬೇಕಾಯಿತಲ್ಲ ಎಂದು ದುಃಖಿತರಾದರು.

೩. ಮಗನ ಮಮತೆಯಿಂದ ತಾಯಿಯಾದ ಕೃಪೆಯೂ ದುಃಖಿತಳಾದಳು.

೪. ತಾಯಿ ಮಕ್ಕಳ ಆರ್ತಸ್ಥಿತಿಯನ್ನು ಕಂಡು ದ್ರೋಣಾಚಾರ್ಯರು ಮರುಕಗೊಂಡರು.

ಅದೇ ರೀತಿಯಾಗಿ 'ಸಂಪ್ರೇರಿತಃ' ಪದದ ಬಳಕೆ

ಇಲ್ಲಿ ದ್ರೋಣನಂಥವರಿಗೆ ಈ ಸ್ಥಿತಿವುಂಟಾಗುವುದಕ್ಕೆ ಕೃಪಿಯ ಪ್ರೇರಣೆಯೇ ಕಾರಣ ಎಂದು.

'ಪ್ರೇರಿತಃ ಜನಾರ್ದನಸ್ಯ 'ಶ್ರೀ ಹರಿಯ ಇಚ್ಛೆ.

ಸರ್ವಕಾರ್ಯಗಳಿಗೂ ಪರಮಾತ್ಮನ ಪ್ರೇರಣೆಯೇ ಮುಖ್ಯ.

ದ್ರೋಣಾಚಾರ್ಯರ ಈ ಒಂದು ಮೋಹವೇ ಭಾರತದ ಕಥೆ ಬೆಳೆಯಲು 'ಬೀಜಾಂಕುರವಾಯಿತು' ಎಂದು ಹೇಳಿದರೆ ಸತ್ಯಕ್ಕೆ ಅಪಚಾರವಾಗಲಾರದು.

**ಪ್ರತಿಗ್ರಹಾತ್ ಸನ್ನಿವೃತ್ತಃ ಸ ರಾಮಂ**
**ಯಯೌನ ವಿಷ್ಣೋರ್ಹಿ ಭವೇತ್ ಪ್ರತಿಗ್ರಹಃ ।**
**ದೋಷಾಯ ಯಸ್ಮಾತ್ ಸ ಪಿತಾಖಿಲಸ್ಯ**
**ಸ್ವಾಮೀ ಗುರುಃ ಪರಮಂ ದೈವತಂ ಚ ॥೧೧॥**

ದ್ರೋಣಾಚಾರ್ಯರು 'ಬೇಡಿ ತರಲೇಬೇಕು' ಎಂದು ನಿಶ್ಚಯಿಸಿ, ಅವರು ಪರಶುರಾಮನ ಹತ್ತಿರ ನಡೆದರು. ಭಗವಂತನನ್ನು ಬೇಡಿದರೆ 'ಪ್ರತಿ ಗ್ರಹದ' ದೋಷವು ಬರಲಾರದು. ಏಕೆಂದರೆ ಆತನು ಸಕಲ ಜಗತ್ತಿಗೆ ತಂದೆಯಾಗಿದ್ದಾನೆ. ಒಡೆಯನಾಗಿದ್ದನೆ. ಗುರುವೂ ಅಹುದು. ಮೇಲಾಗಿ ಎಲ್ಲ ದೇವತೆಗಳಲ್ಲಿ ಸರ್ವೋತ್ತಮನು ಕೂಡ..

ಇದು ದ್ರೋಣರ ಮನಸ್ಸಿಗೆ ಸಮಾಧಾನ. ಪುರಂದರದಾಸರು ಕೂಡ ಒಂದು ಸಮಯದಲ್ಲಿ 'ಅನ್ಯರಲ್ಲಿ ಬೇಡದಂತೆ ಮಾಡು' ಅದನ್ನೇ ನಾನು ನಿನ್ನಲ್ಲಿ ಬೇಡುತ್ತೇನೆ ಎಂದಿದ್ದಾರೆ. ಇದು ಮಾನವನ ಸಹಜ ಸ್ವಭಾವ.

**ದೃಷ್ಟ್ವಾ ಚೈ (ಷ್ಟ್ವೈ ವೈ) ನಂ ಜಾಮದಗ್ನ್ಯೋಽಪ್ಯ ಚಿಂತಯತ್**
**ದ್ರೋಣಂ ಕರ್ತುಂ ಕ್ಷಿತಿ ಭಾರಾಪನೋದೇ ।**
**ಹೇತುಂ ಸುರಾಣಾಂ ನರಯೋನಿಜಾನಾಂ**
**ಹಂತಾ ಚಾಯಂ ಸ್ಯಾತ್ ಸಹ ಪುತ್ರೇಣ ಚೇತಿ ॥೧೨॥**

ಬರುತ್ತಿರುವ ದ್ರೋಣಾಚಾರ್ಯರನ್ನು ಕಂಡು, ಪರಶುರಾಮರು ಯೋಚಿಸಿದರು, ಭೂಭಾರರಾದ ಅಸುರರನ್ನು ಕೊಲ್ಲಲು ದ್ರೋಣಾಚಾರ್ಯರನ್ನೇ ಕರ್ತೃಗಳನ್ನಾಗಿ ಮಾಡಬಹುದಲ್ಲ, ಎಂದು ಮನಗಂಡು, 'ದೇವ ಮಾನವನಾಗಿ ಹುಟ್ಟಿದ ಈ ದ್ರೋಣನು ಮಗನ ಸಹಿತನಾಗಿ ಸಾಯಲಿ' ಎಂದು ಸಂಕಲ್ಪಿಸಿದರು.

ಏಕೆ ಈ ಸಂಕಲ್ಪ?

**ತೇಷಾಂ ವೃದ್ಧಿಃ ಸ್ಯಾತ್ ಪಾಂಡವಾರ್ಥೋ ಹತಾನಾಂ**
**ಮೋಕ್ಷೇಽಪಿ ಸೌಖ್ಯಾಸ್ಯ ನ್ತ್ರ ಸಂತತಿಶ್ಚ ।**
**ಯೋಗ್ಯಾಸುರಾಣಾಂ ಕಲಿಜಾ ಸುಪಾಪಾಃ**
**ಪ್ರಯೋಯಸ್ಮಾತ್ ಕಲಿಜಾಃ ಸಂಭವಂತಿ ॥೧೩॥**

ಅವರೆಲ್ಲರೂ ಪಾಂಡವರಿಗಾಗಿಯೇ, ಪಾಂಡವರಿಂದಲೇ ಸಾಯಲಿ. ಅಂಥವರ ಸಂತತಿ ಬೆಳೆಯಲಿ. ಮೋಕ್ಷದಲ್ಲಿ ಅವರಿಗೆ ಒಳ್ಳೆಯದಾಗಲಿ. ಅವರ ಸಂತತಿಗೂ ಅದೇ ಲಭಿಸಲಿ. ಏಕೆ ಹೀಗೆ? ಯೋಗ್ಯರಾದ ದೇವತೆಗಳು ಕಲಿಯುಗದಲ್ಲಿ ಬಹಳ ದಿನ ಇರಬಾರದು. ಪ್ರಾಯಃ ಕಲಿಯ ಪ್ರಭಾವದಿಂದ ಅವರೆಲ್ಲರೂ ಪಾಪಿಗಳಾಗುತ್ತಾರೆ. (ಇದು ಅವರಿಗೆ ಒಳ್ಳೆಯದಲ್ಲ)

**ನ ದೇವಾನಾಮಾಶತಂ ಪುರುಷಾ ಹಿ**
**ಸಂತಾನಾಜಾಃ ಪ್ರಾಯಶಂ ಪಾಪಯೋಗ್ಯಾಃ ।**
**ನಾ ಕಾರಣಾತ್ ಸಂತತೇ ಅಪ್ಯಭಾವೋ**
**ಯೋಗ್ಯಃ ಸುರಾಣಾಂ ಸದಮೋಘರೇತಸಾಮ್ ॥೧೪॥**

ದೇವತೆಗಳ ಸಂತಾನ ನೂರು ವರ್ಷಗಳವರೆಗೆ ನಾಶವಾಗುವುದಿಲ್ಲ. ಏಕೆಂದರೆ, ಯೋಗ್ಯ ದೇತೆಗಳ ರೇತಸ್ಸು ಎಂದೂ ವ್ಯರ್ಥವಾಗಲಾರದು. ಪಾಪಿಗಳಾದ ಕೆಲವರಿಗೆ ಸಂತಾನ ಅಭಾವವಾಗಬೇಕಾದರೆ, ಅವರಿಗೆ ನಿರ್ದುಷ್ಟ ಶಾಪ ಇತ್ಯಾದಿ ಏನಾದರೂ ಕಾರಣಗಳು ಇರಲೇಬೇಕು.

**ಅವ್ಯುಚ್ಛಿನ್ನೇ ಸಕಲಾನಾಂ ಸುರಾಣಾಂ**
**ತಂತೌ ಕಲಿರ್ನೋ ಭವಿತಾ ಕಥಂ ಜಿತ್ ।**
**ತಸ್ಮಾದುತ್ಪಾದ್ಯಾಃ ಸರ್ವ ಏತೇ ಸರಾಂಶಾ**
**ಏತೇನ ಸಾಕಂ ತನಯೇನ ವೀರಾಃ ॥೧೫॥**

ದೇವತೆಗಳ ಅಂಶವು (ವಂಶವು) ಅವಿಚ್ಛಿನ್ನವಾಗಿ ಮುಂದುವರಿದರೆ, ಕಲಿಯು ಬಂದು ಏನು ಮಾಡಿದ ಹಾಗಾಯಿತು? ಏಕೆಂದರೆ ಅವನ ಆಟ ಏನೂ ನಡೆಯುವುದಿಲ್ಲ. ಕಲಿಯ ಪ್ರಭಾವ ದುಸ್ಸಾಧ್ಯವಾಗುವುದು. ಕಾರಣ ಈ ದ್ರೋಣಾಚಾರ್ಯ, ಈತನ ಮಗನು, ಜೊತೆಯಲ್ಲಿ ಇದೇ ರೀತಿಯಾಗಿ ಬಂದ ಎಲ್ಲದೇವತೆಗಳು ನಾಶಕ್ಕೆ ಅರ್ಹರು.

**ಏವಂ ವಿಚಿಂತ್ಯಾಪ್ರತಿಮಃ ಸ ಭಾರ್ಗವೋ**
**ಬಭಾಷ ಈಷತ್ಸ್ಮಿತಶೋಚಿಷಾ ಗಿರಾ ।**
**ಅನಂತ ಶಕ್ತಿಃ ಸಕಲೇಶ್ವರೋऽಪಿ**
**ತ್ಯಕ್ತಂ ಸರ್ವಂ ನಾದ್ಯ ವಿತ್ತಂ ಮಮಾಸ್ತಿ ॥೧೬॥**

ಮೇಲಿನಂತೆ ಯೋಚಿಸಿ, ಅಪ್ರತಿಮರಾದ ಆ ಭಾರ್ಗವರು, ತಾವು ಅನಂತ ಶಕ್ತಿಯುಳ್ಳವರು, ಸಕಲರಿಗೂ ಒಡೆಯಗಾದ್ದರೂ ಕೂಡ ಬರುತ್ತಿರುವ ದ್ರೋಣಾಚಾರ್ಯರನ್ನು ಕಂಡು ಮಂದಸ್ಮಿತರಾಗಿ ಈ ರೀತಿ ಹೇಳಿದರು.

ನಾನು ಎಲ್ಲವನ್ನು ತ್ಯಜಿಸಿದ್ದೇನೆ. ಈಗ ನನ್ನ ಹತ್ತಿರ ಧನ, ಕನಕ ಇತ್ಯಾದಿ ಏನೂ ಉಳಿದಿಲ್ಲ, ನನ್ನ ಆಸ್ತಿ ಎಂಬುದು ಯಾವುದೂ ಇಲ್ಲ,

ಈಗ ನನ್ನ ಹತ್ತಿರ ಇರುವುದು.

**ಆತ್ಮಾ ವಿದ್ಯಾ ಶಸ್ತ್ರಮೂತಾವದಸ್ತಿ**
**ತೇಷಾಂ ಮಧ್ಯೇ ರುಚಿತಂ ತ್ವಂ ಗೃಹಾಣ ।**
**ಉಕ್ತಃ ಸ ಇತ್ಥಂ ಪ್ರವಿಚಿಂತ್ಯ ವಿಪ್ರೋ**
**ಜಗಾದ ಕಸ್ತ್ವದ್ ಗ್ರಹಣೇ ಸಮರ್ಥಃ ॥೧೭॥**

"ಈಗ ನನ್ನ ಹತ್ತಿರ ಈ ಶರೀರ, ವಿದ್ಯೆ ಮತ್ತು ಅಸ್ತ್ರ ಇವು ಮೂರು ಮಾತ್ರ ಇವೆ. ಇವುಗಳ ಮಧ್ಯದಲ್ಲಿ ನಿನಗೆ ಯಾವುದು ಇಷ್ಟವೋ ಅದನ್ನು ತೆಗೆದುಕೊ" ಎಂದು ಪರಶುರಾಮರು ನಿರ್ದುಷ್ಟವಾಗಿ ಹೇಳಿದಾಗ, ದ್ರೋಣಾಚಾರ್ಯರು ಚೆನ್ನಾಗಿ ವಿಚಾರಿಸಿ "ನಿಮ್ಮನ್ನು ಗ್ರಹಿಸಲು ಯಾರು ಸಮರ್ಥರಿದ್ದಾರೆ" ಎಂದರು.

ಪಿ.ಪಿ. ಏಕೆಂದರೆ ನೀನು ಸರ್ವೋತ್ತಮ. ಸರ್ವಸಮರ್ಥ, ಸರ್ವವ್ಯಾಪಿ ಮತ್ತು ಅವ್ಯಕ್ತ. ನಿನಗಿಂತ ಶ್ರೇಷ್ಠರು ಮತ್ತಾರು ಇಲ್ಲ.

ಮುಂದುವರಿಸಿ,

ಸರ್ವೇಶಿತಾ ಸರ್ವಪರಃ ಸ್ವತಂತ್ರ
ಸ್ತ್ವಮೇವ ಕೋಽನ್ಯಃ ಸದೃಶಸ್ತವೇಶ ।
ಸಾ(ಸ್ವಾ)ಮ್ಯಂ ತವೇಚ್ಛನ್ ಪ್ರತಿಯಾತ್ಯಧೋ ಹಿ
ಯಸ್ಮಾನ್ನ ಚೋತ್ಥಾತುಮಲಂ ಕದಾಚಿತ್ ॥೧೮॥

ಹೇ ಸ್ವಾಮಿ! ನೀನು ಸರ್ವರಿಗೂ ಈಶನು. ಸರ್ವರಿಗೂ ಶ್ರೇಷ್ಠನು. ಸ್ವತಂತ್ರನೆಂಬವನು ನೀನೊಬ್ಬನೆ. ಹೇ ಈಶ! ನಿನಗೆ ಸದೃಶರಾದವರು ಮತ್ತಾರಿದ್ದಾರೆ? ಯಾರಾದರು ನಿನಗೆ ಸಮ ಎಂದು ಹೇಳಿಕೊಂಡರೆ, ನಿನ್ನ ಮೇಲೆ ಸ್ವಾಮಿತ್ವವನ್ನು ತೋರಿದರೆ, ಅಥವಾ ಕೇವಲ ಅವರು ಆ ರೀತಿ ಇಚ್ಛಿಸಿದರೆ, ಅಂಥವರು ಅಧೋಲೋಕಕ್ಕೆ ಹೋಗುತ್ತಾರೆ. ಅಂಥವರು ಪರಿಶುದ್ಧರಾಗಿ ಮತ್ತೆ ಮೇಲೆ ಬರುವುದೇ ಇಲ್ಲ.

ಸರ್ವೋತ್ತ ಮಸ್ಯೇಶ ತವೋಚ್ಚ ಶಸ್ತ್ರೈಃ
ಕಾರ್ಯಂ ಧಮಸ್ಮಾಕಮನುದ್ಬಲಾನಾಮ್ ।
ವಿದ್ಯೈವ ದೇಯಾ ಭವತಾ ತತೋಽಜ
ಸರ್ವಪ್ರಕಾಶಿನ್ಯಮ(ಚ)ಲಾ ಸುಸೂಕ್ಷ್ಮಾ ॥೧೯॥

ಎಲೈ ಸರ್ವೋತ್ತಮನಾದ ಈಶನೆ, ನಿನ್ನ ಅಸ್ತ್ರವು ಅತಿ ಮಹತ್ವವಾದದ್ದು, ತಪಸ್ಸಿನಿಂದ ಕೂಡಿದ್ದು, ಬಹು ಸಮರ್ಥವಾದ್ದು. ಅದನ್ನು [illegible]ಬಲಹೀನನಾದ ನನ್ನಂಥವನಿಂದ ಧರಿಸಲು ಹೇಗೆ ಸಾಧ್ಯವಾದೀತು? ಹೇ ಉತ್ಪತ್ತಿರಹಿತನಾದ ಪರಮಾತ್ಮನೆ, ಅತಿಸೂಕ್ಷ್ಮವಾದ, ಅತೀಂದ್ರಿಯ ಮತ್ತು ಪರಿಶುದ್ಧವಾದ ನಿನ್ನ ವಿದ್ಯೆಯನ್ನೇ ನನಗೆ ದಯಪಾಲಿಸು! ಎಂದು ದ್ರೋಣಾಚಾರ್ಯರು ಪರಶುರಾಮ ದೇವರನ್ನು ಪ್ರಾರ್ಥಿಸಿಕೊಂಡರು.

ಇತೀರಿತಸ್ತತ್ಸ ವಿದ್ಯಾದಿಕಾಃ ಸ ವಿದ್ಯಾಃ
ಸರ್ವಾಃ ಪ್ರದದೌ ಸಾಸ್ತ್ರ ಶಸ್ತ್ರಾಃ ।

**ಅಬ್ದದ್ವಿಷಟ್ಕೇನ ಸಮಾಪ್ಯ ತಾಃ ಸ**

**ಯಯೌ ಸಖಾಯಂ ದ್ರುಪದಂ ಮಹಾತ್ಮಾ ॥೨೦॥**

ದ್ರೋಣಾಚಾರ್ಯರಿಂದ ಈ ರೀತಿ ಪ್ರಾರ್ಥಿಸಿಕೊಂಡನಂತರ, ವಿದ್ಯೆಗಳಲ್ಲಿಯೇ ಅತ್ಯುತ್ತಮವಾದ ತತ್ವವಿದ್ಯೆ, ಬ್ರಹ್ಮವಿದ್ಯೆ ಅಲ್ಲದೆ ಅಸ್ತ್ರಶಸ್ತ್ರಗಳನ್ನೊಳಗೊಂಡ ಇನ್ನಿತರ ವಿದ್ಯೆಗಳನ್ನು ಭಾರ್ಗವರು ದ್ರೋಣಾಚಾರ್ಯರಿಗೆ ಕಲಿಸಿಕೊಟ್ಟರು. ದ್ರೋಣಾಚಾರ್ಯರು ಹನ್ನೆರಡು ವರ್ಷ ಅಲ್ಲಿದ್ದು ಸಕಲ ವಿದ್ಯೆಗಳನ್ನು ಪೂರ್ತಿಗೊಳಿಸಿದರು. ನಂತರ ಅವರು ಗೆಳೆಯನಾದ ದ್ರುಪದ ರಾಜನ ಹತ್ತಿರ ಬಂದರು.

ಏಕೆ?

**ದಾನೇऽರ್ಧರಾಜ್ಯಸ್ಯ ಹಿ ತತ್ಪ್ರತಿಜ್ಞಾಂ**

**ಸಂಸ್ಮೃತ್ಯ ಪೂರ್ವಾಮುಪಯಾತಂ ಸಖಾಯಮ್ ।**

**ಸಖಾ ತವಾಸ್ಮೀತಿ ತದೋದಿತೋऽಪಿ**

**ಜಗಾದ ವಾಕ್ಯಂ ದ್ರುಪದೋऽತಿ ದರ್ಪಾತ್ ॥೨೧॥**

ಅರ್ಧರಾಜ್ಯವನ್ನು ಕೊಡುವುದಾಗಿ ದ್ರುಪದರಾಜನು ಒಂದೆ ಪ್ರತಿಜ್ಞೆ ಮಾಡಿದ್ದನು. ಅದನ್ನು ಸ್ಮರಿಸಿಕೊಂಡು ದ್ರೋಣಾಚಾರ್ಯರು ಹಳೆಯಗೆಳೆಯನಾದ ದ್ರುಪದ ರಾಜನ ಹತ್ತಿರ ಬಂದರು. "ನಾನು ನಿನ್ನ ಗೆಳೆಯನು ಬಂದಿದ್ದೇನೆ" ಎಂದು ಹೇಳಿಕಳಿಸಿದನು. ಆ ಮಾತನ್ನು ಕೇಳಿ ಗರ್ವಿಷ್ಠನಾದ ದ್ರುಪದರಾಜನು ದರ್ಪದಿಂದ ಹೀಗೆ ಹೇಳಿದನು:

**ನ ನಿರ್ಧನೋ ರಾಜಸಖೋ ಭವೇತ**

**ಯಥೇಷ್ಟತೋ ವಿಪ್ರಗಚ್ಛೇ (ಗಚ್ಛವಿಪ್ರೇ) ತಿದೈವಾತ್ ।**

**ಇತೀರಿತೋऽ(ತ)ಸ್ಯಾಶು ಬಭೂವಕೋಪೋ**

**ಜಿತೇಂದ್ರಿಯಸ್ಯಾಪಿ ಮುನೇರ್ಹರೀಚ್ಛಯಾ ॥೨೨॥**

ದರಿದ್ರನಿಗೂ ರಾಜನಿಗೂ ಸಖ್ಯವಾಗಲಾರದು. ಕಾರಣ "ಹೇ ವಿಪ್ರನೇ, ಹೇಗೆ ಬಂದಿರುವಿಯೋ ಹಾಗೆಯೇ ಹಿಂದಿರುಗು" ಎಂದು ಪರಿಹಾಸವನ್ನು ಮಾಡಿದನು. ಇದನ್ನು ಕೇಳಿದ ದ್ರೋಣಾಚಾರ್ಯರು

ಜಿತೇಂದ್ರಿಯರಾಗಿದ್ದಾಗ್ಯೂ ಕೂಡಲೆ ಕೋಪಾವಿಷ್ಟರಾದರು. ಇದಕ್ಕೆ ದೈವೇಚ್ಛೆಯೇ ಕಾರಣ.

ವಿ.ವಿ. ಸಾಮಾನ್ಯವಾಗಿ ಇಂದ್ರಿಯಗಳನ್ನು ಗೆದ್ದವರು ಅರಿಷ್ಡ್ವರ್ಗಗಳಿಗೆ ಒಳಗಾಗುವುದಿಲ್ಲ. ಇದು ನಿಯಮ.

ಇಲ್ಲಿ ಶ್ರೀಮದಾಚಾರ್ಯರು ದ್ರೋಣ–ದ್ರುಪದರ ವಿದ್ಯಾಭ್ಯಾಸದ ಕಾಲದ ಘಟನೆಯನ್ನು ಒಂದೇ ವಾಕ್ಯದಲ್ಲಿ ಹೇಳಿ, ಹಿಂದಿನ ಕಥೆಯನ್ನು ಓದುಗರಿಗೆ ನೆನಪಿಗೆ ತಂದು ಕೊಡುತ್ತಾರೆ. ಇದು ಇವರ ಶೈಲಿಯ ವೈಶಿಷ್ಟ್ಯ. ಅಲ್ಲವೇ,

**ಪ್ರತಿಗ್ರಹಾತ್ ಸನ್ನಿವೃತ್ತೇನ ಸೋSಯಂ**
**ಮಯಾ ಪ್ರಾಪ್ತೋ ಮತ್ಪಿತುಃ ಶಿಷ್ಯಕತ್ವಾತ್ ।**
**ಪಿತುಃ ಶಿಷ್ಯೋSಹ್ಯಾತ್ಮ ಶಿಷ್ಯೋ ಭವೇತ**
**ಶಿಷ್ಯಾರ್ಥಃ ಸ್ವೀಯ ಏವೇತಿ ಮತ್ವಾ ॥೨೩॥**

ಎಲೋ ದ್ರುಪದ, ನೀನು ನನ್ನ ತಂದೆಯ ಶಿಷ್ಯನು. ಕಾರಣ ನನಗೂ ನೀನು ಶಿಷ್ಯನೇ. ಶಿಷ್ಯನ ಹತ್ತಿರ ಇದ್ದದ್ದು ನನ್ನದಿದ್ದಂತೆ. ಅದನ್ನು ತೆಗೆದುಕೊಂಡರೆ ಇತರರನ್ನು ಬೇಡಿ ತೆಗೆದುಕೊಂಡಂತೆ ಆಗುವುದಿಲ್ಲ, ಇದನ್ನು ತಿಳಿದೇ ನಾನು ನಿನ್ನ ಹತ್ತಿರ ಬಂದಿದ್ದೆ. ನೀನು ನನಗೆ ಅಪಮಾನ ಮಾಡಿದೆ'' ಎಂದು ಆಚಾರ್ಯರು ರೇಗಿದರು.

**ಸೋSಯಂ ಪಾಪೋ ಮಾಮವಜ್ಞಾಯ ಮೂಢೋ**
**ದುಷ್ಟಂ ವಚೋ ಶ್ರಾವಯದಸ್ಯ ದರ್ಪಮ್ ।**
**ಹನಿಷ್ಯ ಇತ್ಯೇವ ಮತಿಂ ವಿ(ನಿ)ಧಾಯ**
**ಯಯೌ ಕುರೂನ್ ಶಿಷ್ಯತಾಂ ನೇತುಮೇತಾನ್ ॥೨೪॥**

ಈಗ, ಈ ಪಾಪಿ ಮತ್ತು ಮೂಢನಾದ ದ್ರುಪದನು ನನ್ನನ್ನು ಮರೆತಿದ್ದಾನೆ. ಕೆಟ್ಟ ಮಾತುಗಳನ್ನು ಕೇಳುವಂತೆ ಮಾಡಿದ್ದಾನೆ. ಅಪಮಾನಿಸಿದ್ದಾನೆ. ಇವನ ದರ್ಪವನ್ನು ನಾನು ನಾಶಮಾಡುತ್ತೇನೆ ಎಂದು ಮನದಲ್ಲಿ ನಿಶ್ಚಯಿಸಿ ಕೌರವರನ್ನು ಶಿಷ್ಯರನ್ನಾಗಿ ಮಾಡಿಕೊಳ್ಳುವ ಉದ್ದೇಶದಿಂದ ಕುರುದೇಶದತ್ತ ನಡೆದನು.

ಪಿ.ಪಿ. ದ್ರುಪದನ ಮೇಲೆ ಸೇಡು ತೀರಿಸುವುದಕ್ಕಾಗಿ ದ್ರೋಣಾಚಾರ್ಯರು ಕೌರವರ ಆಶ್ರಯವನ್ನು ಪಡೆಯಬೇಕಾಯಿತು. ಇದು ವಿಚಿತ್ರವಾದ ವಿಧಿಲಿಖಿತ.

**ಪ್ರತಿಗ್ರಹಾದ್ವಿನಿವೃತ್ತಸ್ಯ ಚಾರ್ಥ**
**ಸ್ಯಾಚ್ಛಿಷ್ಯೇಭ್ಯಃ ಕೌರವೇಭ್ಯೋ ಮಮಾತ್ರ ।**
**ಏವಂ ಮನ್ವಾನಃ ಕ್ರೀಡತಃ ಪಾಂಡವೇಯಾನ್**
**ಸ ಧಾರ್ತ ರಾಷ್ಟ್ರಾನ್ ಪುರಬಾಹ್ಯತೋಽಖ್ಯ(ಸ್ಯ)ತ್ ॥೨೫॥**

ಕೌರವರನ್ನು ನಾನು ಶಿಷ್ಯರನ್ನಾಗಿ ಮಾಡಿಕೊಂಡರೆ, ನನಗೆ ಪ್ರತಿಗ್ರಹದ ಉದ್ದೇಶವೂ ಸಾಧಿಸುವುದು ಜೊತೆಯಲ್ಲಿ ದ್ರುಪದರಾಜನ ನಿಗ್ರಹಕ್ಕೂ ಅನುಕೂಲವಾಗುವುದು ಎಂದು ಮನದಲ್ಲಿ ಯೋಚಿಸಿ ಪುರದ ಹೊರವಲಯದಲ್ಲಿ ಆಡುತ್ತಿರುವ ಪಾಂಡವರ ಮತ್ತು ಕೌರವರ ಹತ್ತಿರ ಬಂದನು.

**ವಿಕ್ರೀಡತೋ ಧರ್ಮಸೂತೋಸ್ತದೈವ**
**ಸಹಾಂಗುಲೀಯೇನ ಚ ಕಂದುಕೋಽಪತತ್ ।**
**ಕೂಪೇ ನ ಶೇಕುಃ ಸಹಿತಾಃ ಕುಮಾರಾ**
**ಉದ್ಧರ್ತುಮೇನಂ(ತಂ) ಪವನಾತ್ಮಜೋಽವದತ್ ॥೨೬॥**

ಆ ಬಾಲಕರು ಆಟವಾಡುತ್ತಿರುವಾಗ, ಧರ್ಮರಾಜನ ಕೈಯಲ್ಲಿಯ ಮುದ್ರೆಯುಂಗುರವು ಚೆಂಡಿನ ಸಹಿತವಾಗಿ ಭಾವಿಯಲ್ಲಿ ಬಿದ್ದಿತ್ತು. ರಾಜಕುಮಾರರು ಭಾವಿಯಿಂದ ಅದನ್ನು ಮೇಲೆ ತರಲು ಅಶಕ್ತರಾಗಿದ್ದರು. ಆಗ ಭೀಮನು, 'ನಾನು ಎತ್ತಿ ತರುತ್ತೇನೆ' ಎಂದನು.

**ನಿಷ್ಪತ್ಯ ಚೋದ್ಧೃತ್ಯ ಸಮುತ್ಪತಿಷ್ಯೇ**
**ಕುಪಾದ ಮುಷ್ಮಾದ್ಧೃನೀ ಚಾದಪಿ ಸ್ಮ ।**
**ಸಕಂದುಕಾಂ ಮುದ್ರಿಕಾಂ ಪಶ್ಯ ತಾದ್ಯ**
**ಸರ್ವೇ ಕುಮಾರಾ ಇತಿ ವೀರಸಂಶ್ರಯಾತ್ ॥೨೭॥**

ಈ ಭಾವಿಯು ಎಷ್ಟೇ ಆಳವಾಗಿದ್ದರೂ ಚಿಂತೆಯಿಲ್ಲ. ನಾನು ಧೈರ್ಯದಿಂದ ಭಾವಿಯಲ್ಲಿಳಿದು ಉಂಗುರ ಮತ್ತು ಚೆಂಡು ಎರಡನ್ನೂ ಮೇಲೆ ತರುತ್ತೇನೆ. ನೀವು ನೋಡುವಿರಂತೆ ಎಂದು ಭೀಮ ಎಲ್ಲ ರಾಜಕುಮಾರರಿಗೆ ಹೇಳಿದನು.

ತದಾ ಕುಮಾರಾನವದತ್ಸ ವಿಪ್ರೋ
ಧಿಗಸ್ತು ಬಾಹ್ವಾಂ ಭವತಾಂ ಪ್ರವೃತ್ತಿಮ್ ।
ಜಾತಾಃ ಕುಲೇ ಭಾ(ಭ) ರತಾನಾಂ ನ ವಿತ್ಥ
ದಿವ್ಯಾನಿ ಚಾಸ್ತ್ರಾಣಿ ಸುರಾರ್ಚಿತಾನಿ ॥೨೮॥

ಆಗ ಆ ದ್ರೋಣಾಚಾರ್ಯರು, ರಾಜಕುಮಾರರನ್ನು ಕುರಿತು, "ನೀವೆಲ್ಲರೂ ಭರತರಾಜನ ಮನೆತನದವರು, ಭಾರತದಲ್ಲಿ ಹುಟ್ಟಿದವರು. ಆದರೂ ದೇವತೆಗಳಿಂದ ಪೂಜೆಗೊಳ್ಳುವ ಉತ್ತಮ ಅಸ್ತ್ರವಿದ್ಯೆಗಳನ್ನು ಕಲಿಯಲಿಲ್ಲ! ಇಂತಹ ನಿಮ್ಮ ಜನ್ಮಕ್ಕೆ ಧಿಕ್ಕಾರವಿರಲಿ" ಎಂದು ಮೂದಲಿಸಿದರು.

ಇತೀರಿತಾ ಅಸ್ತ್ರವಿದಂ ಕುಮಾರಾ
ವಿಜ್ಞಾಯ ವಿಪ್ರಂ ಸುರಪೂಜ್ಯಪೌತ್ರಮ್ ।
ಸಂ ಪ್ರಾರ್ಥಯಾಮಾಸು ರಥೋದ್ಧೃತಿಂ ಪ್ರತಿ-
ಪ್ರಧಾನಮುದ್ರಾಯುತ ಕಂದುಕಸ್ಯ ॥೨೯॥

ಈ ಬಗೆಯ ಮಾತನ್ನು ಕೇಳಿದ ಆ ರಾಜಕುಮಾರರು, ಸುರರಿಗೆ ಪೂಜ್ಯನಾದ ಬೃಹಸ್ಪತ್ಯಾಚಾರ್ಯರ ಮೊಮ್ಮಗನು, ಅಸ್ತ್ರವಿದ್ಯೆಗಳಲ್ಲಿ ಪಾರಂಗತನಾದ ಬ್ರಾಹ್ಮಣ ದ್ರೋಣಾಚಾರ್ಯರನ್ನು, ಪ್ರಧಾನ ಮುದ್ರೆಯುಂಗುರ ಮತ್ತು ಚೆಂಡನ್ನು ಮೇಲೆ ತಂದು ಕೊಡಬೇಕೆಂದು ವಿನಯದಿಂದ ಪ್ರಾರ್ಥಿಸಿಕೊಂಡರು.

ಸ ಚಾಶ್ಚಿಷೀಕಾಭಿರಥೋತ್ತರೋತ್ತರಂ
ಸಂಪ್ರಾಸ್ಯ ದಿವ್ಯಾಸ್ತ್ರ ಬಲೇನ ಕಂದುಕಮ್ ।
ಉದ್ಧೃತ್ಯ ಮುದ್ರೋದ್ಧರಣಾರ್ಥಿನಃ ಪುನಃ
ಜಗಾದ ಭುಕ್ತಿ ರ್ಮಮ ಕಲ್ಪ್ಯ ಕಾಮಿತಿ ॥೩೦॥

ಆಗ ದ್ರೋಣಾಚಾರ್ಯರು ದರ್ಭೆ (ವಿಶಿಷ್ಟವಾದ ಹುಲ್ಲು) ತಂದು ದಿವ್ಯಾಸ್ತ್ರ ಮಂತ್ರಬಲದಿಂದ ಅದರ ಕೊನೆಗಳನ್ನು ಜೋಡಿಸಿ ಹಗ್ಗದಂತೆ ಮಾಡಿ ಭಾವಿಯಲ್ಲಿ ಇಳಿಬಿಟ್ಟು ಚೆಂಡನ್ನು ತೆಗೆದು ಕೊಟ್ಟನು. ಆಗ ಸಂತುಷ್ಟರಾದ ಆ ಬಾಲಕರು ಮುದ್ರೆಯ ಉಂಗುರವನ್ನು ತಂದು ಕೊಡಲು ಮತ್ತೊಮ್ಮೆ ಪ್ರಾರ್ಥಿಸಿದರು. ನನಗೆ ಊಟದ ವ್ಯವಸ್ಥೆ, ಜೀವನೋಪಾಯವನ್ನು ಒದಗಿಸಿರಿ ಎಂದು ದ್ರೋಣರು ನುಡಿದರು.

ವಿ.ಪಿ. ದ್ರೋಣಾಚಾರ್ಯರ ಅಂತಸ್ತು ಮತ್ತು ಯೋಗ್ಯತೆಯ ದೃಷ್ಟಿಯಿಂದ ಕ್ಷುಲ್ಲಕ ಯೋಚನೆಯೇ ಸರಿ. ಒಮ್ಮೆ ಪರಶುರಾಮರಲ್ಲಿ ಬೇಡಿದರು. ನಂತರ ದ್ರುಪದ ರಾಜನಿಗೆ ಕೇಳಿದರು. ಈ ಈ ರಾಜಕುಮಾರರಿಗೆ, ಇದು ಕಲಿಯ ಮಹಿಮೆಯೆಂದೇ ತಿಳಿಯಬೇಕು.

ಕೂಡಲೇ ಧರ್ಮರಾಜನು,

**ಯಥೇಷ್ಟ ವಿತ್ತಾಶನ ಪಾನಮಸ್ಯ**
**ಧರ್ಮಾತ್ಮಜಃ ಪ್ರತಿಜಜ್ಞೇ ಸುಶೀಘ್ರಮ್ ।**
**ತಥೈವ ತೇನೋದ್ಧೃತಮಂಗುಲೀಯಂ**
**ತ್ರಿವರ್ಗಮುಖ್ಯಾತ್ಮಜ ವಾಕ್ಯ ತೋಽಸನು ॥೩೧॥**

ದ್ರೋಣಾಚಾರ್ಯರ ಮಾತನ್ನು ಕೇಳಿದ ಕೂಡಲೇ ಧರ್ಮರಾಜನು, ಸಾಕಷ್ಟು ಹಣ, ಅನ್ನ, ವಸತಿ ಇವುಗಳನ್ನು ಶೀಘ್ರದಲ್ಲಿಯೇ ಪೂರೈಸಲಾಗುವುದು ಎಂದು ಪ್ರತಿಜ್ಞೆಯನ್ನೇ ಮಾಡಿದನು. ಮಾತು ಕೊಟ್ಟನು. ತ್ರಿವಿಧ ಪುರುಷಾರ್ಥಗಳಲ್ಲಿ ಮುಖ್ಯವಾದ (ಅಂದರೆ ಧರ್ಮ, ಅರ್ಥ, ಕಾಮ ಇವುಗಳಲ್ಲಿ ಮೊದಲನೆಯದು ಧರ್ಮ) ಅಂತಹ ಧರ್ಮನ ಮಾತಿಗೆ ಸಂತುಷ್ಟರಾದ ದ್ರೋಣರು ಮುದ್ರೆಯುಂಗುರವನ್ನು ಮೇಲೆ ತಂದು ಕೊಟ್ಟರು.

**ಪಪ್ರಚ್ಛುರೇನಂ ಸಹಿತಾಃ ಕುಮಾರಾಃ**
**ಕೋಽಸೀತಿ ಸೋಽಸ್ಯಾಹ ಪಿತಾಮಹೋಽವಃ ।**
**ವಕ್ತೇ ತೇ ದುದ್ರುವುರಾಶು ಭೀಷ್ಮಂ**
**ದ್ರೋಣೋಽಯಮಿತ್ಯೇವ ಸ ತಾಂಸ್ತದೋಚೇ ॥೩೨॥**

ಎಲ್ಲ ರಾಜಕುಮಾರರು ಕೂಡಿ, ನೀವು ಯಾರು ಎಂದು ಕೇಳಿದಾಗ, ನಿಮ್ಮ ಪಿತಾಮಹರನ್ನೇ 'ನಾನು ಯಾರು' ಎಂಬುದನ್ನು ಕೇಳಿರಿ. ಅವರೇ ಹೇಳುವರು ಎಂದಾಗ ಎಲ್ಲರೂ ಓಡಿ ಬಂದು ಭಿಷ್ಮರನ್ನು ವಿಚಾರಿಸಿದರು. ಆಗ ಭೀಷ್ಮರು, 'ಅವರು ದ್ರೋಣಾಚಾರ್ಯರು' ಎಂದು ಉತ್ತರಿಸಿದರು.

ದ್ರೋಣಾಚಾರ್ಯರು ಹಸ್ತಿನಾವತಿಯಲ್ಲಿಯೇ ಇದ್ದರೂ, ರಾಜಕುಮಾರರು ನೋಡಿರಲಿಲ್ಲವೇ? ಇಲ್ಲ. ಕಾರಣ

**ನ ರಾಜಗೇಹಂ ಸ ಕದಾಚಿದೇತಿ–**
**ತೇನಾದೃಷ್ಟಃ ಸ ಕುಮಾರ್ಕೈ ಪುರಾತಃ ।**
**ಭೀಷ್ಮೋ ವಿದ್ಯಾಸ್ತೇನ ಸಹೈಯ ಚಿಂತಯ**
**ನ್ನಸ್ತ್ರ ಪ್ರಾಪ್ತಿಂ ತಸ್ಯ ಶುಶ್ರಾವ ರಾಮಾತ್ ॥೩೩॥**

ದ್ರೋಣಾಚಾರ್ಯರು ರಾಜನ ಮನೆಗೆ ಎಂದೂ ಹೋದವರಲ್ಲ. ಕಾರಣ ರಾಜಕುಮಾರರು ದ್ರೋಣರನ್ನು ನೋಡಿರಲಿಲ್ಲ. ಭೀಷ್ಮರು ದ್ರೋಣರ ಜೊತೆಯಲ್ಲಿಯೇ ತತ್ವ ವಿದ್ಯೆಗಳನ್ನು ಕುರಿತು ಚರ್ಚಿಸುತ್ತಿದ್ದರು. ಕಾರಣ ಅವರಿಗೆ ಚೆನ್ನಾಗಿ ಪರಿಚಯವಿದ್ದಿತು. ಆದರೆ ಅಸ್ತ್ರ ವಿದ್ಯೆ ಪ್ರಾಪ್ತಿಗಾಗಿ ದ್ರೋಣರು ಪರಶುರಾಮರ ಹತ್ತಿರ ಹೋಗಿದ್ದಾರೆ ಎಂದು ಭೀಷ್ಮರು ಕೇಳಿದ್ದರು.

ವಿವಿ. "ಶಿಲೋಂಛ ವೃತ್ತಿಯಿಂದಿದ್ದವರಿಗೆ ಯಾರಿಂದಲೂ ಏನನ್ನೂ ಕೇಳುವ ಅವಶ್ಯಕತೆಯೇ ಇರಲಿಲ್ಲ." ಕಾರಣ ಅವರು ಎಲ್ಲಿಯೂ ಹೋಗುತ್ತಿರಲಿಲ್ಲ.

**ಶ್ರುತ್ವಾ ವೃದ್ಧಂ ಕೃಷ್ಣವರ್ಣಂ ದ್ವಿಜಂ ತಂ**
**ಮಹಾಸ್ತ್ರ ವಿದ್ಯಾಮಪಿ ತಾಂ ಮಹಾಮತಿಃ ।**
**ದ್ರೋಣಂ ಜ್ಞಾತ್ವಾ ತಸ್ಯ ಶಿಷ್ಯತ್ವ ಏತಾನ್**
**ದದೌ ಕುಮಾರಾಂಸ್ತತ್ರ ಗತ್ವಾಸ್ವಯಂ ಚ ॥೩೪॥**

"ಅತನು ವೃದ್ಧನು, ಕೃಷ್ಣ (ಕಪ್ಪು) ವರ್ಣದವನು, ಮಹಾಸ್ತ್ರ ವಿದ್ಯೆಗಳನ್ನು ಬಲ್ಲವನು, ಅಲ್ಲದೆ ಬಹು ಬುದ್ಧಿವಂತನು" ಎಂದು ಮಕ್ಕಳ ಬಾಯಿಂದ ಕೇಳಿದ ಭೀಷ್ಮರು, ಅವರೇ ದ್ರೋಣಾಚಾರ್ಯರು ಎಂದು ನಿಶ್ಚಯಿಸಿದರು.

ಭೀಷ್ಮರು, ಮಕ್ಕಳನ್ನು ಕರೆದುಕೊಂಡು ತಾವೇ ಅಲ್ಲಿಗೆ ಹೋಗಿ ರಾಜಕುಮಾರರನ್ನು ಅವರಿಗೆ ಶಿಷ್ಯರನ್ನಾಗಿ ಒಪ್ಪಿಸಿದರು.

ವಿ.ವಿ. ಇಲ್ಲಿ ಭೀಷ್ಮರ ಸೌಜನ್ಯವೂ, ಗುರುವಿನ ಬಗೆಗೆ ಗೌರವವೂ ಎದ್ದು ಕಾಣುತ್ತದೆ. ಇದು ಆರ್ಯ ಸಂಸ್ಕೃತಿ. ಇಲ್ಲದಿದ್ದಲ್ಲಿ ಭೀಷ್ಮರು ಹಿರಿಯರು, ಅಧಿಕಾರಿಗಳು, ಯಾರನ್ನಾದರೂ ಕಳುಹಿಸಿ ದ್ರೋಣರನ್ನು ಕರೆಯಿಸಬಹುದಾಗಿದ್ದಿತು. ಹಾಗೆ ಮಾಡಿಲ್ಲ, ಇದೇ ದೊಡ್ಡವರ ಲಕ್ಷಣ.

ಶ್ರೀಮದಾಚಾರ್ಯರು ನಾಲ್ಕಾರು ಪದಗಳಲ್ಲಿಯೇ ದ್ರೋಣಾಚಾರ್ಯರ ವ್ಯಕ್ತಿತ್ವ ಮತ್ತು ಚಿತ್ರವನ್ನು ಚಿತ್ರಿಸಿದ್ದಾರೆ. ಇದು ಅವರ ಶೈಲಿಗೆ ಒಂದು ಮಾದರಿ.

**ದ್ರೋಣೋಽಥ ತಾನವದದ್ಯೋ ಮದಿಷ್ಟಂ**
**ಕರ್ತುಂ ಪ್ರತಿಜ್ಞಾಂ ಪ್ರಥಮಂ ಕರೋತಿ ।**
**ತಂ ಧನ್ವಿನಾಂ ಪ್ರವರಂ ಸಾಧಯಿಷ್ಯ**
**ಇತ್ಯರ್ಜುನಸ್ತಾಮ ಕರೋತ್ ಪ್ರತಿಜ್ಞಾಮ್ ॥ ೩೫॥**

ಆಗ ದ್ರೋಣರು, "ನನ್ನ ಇಷ್ಟವನ್ನು ಪೂರ್ತಿಮಾಡಲು ಯಾರು ಪ್ರತಿಜ್ಞೆಯನ್ನು ಮಾಡುವರೋ, ಅವನನ್ನು ನಾನು ಬಿಲ್ಲಿವಿದ್ಯೆಯಲ್ಲಿ ಮೊದಲಿಗನನ್ನಾಗಿ ಮತ್ತು ಶ್ರೇಷ್ಠನನ್ನಾಗಿ ಮಾಡುತ್ತೇನೆ" ಎಂದು ಹೇಳಿದನು. ಆ ಅರ್ಜುನನು "ನಾನು ಮಾಡುತ್ತೇನೆ" ಎಂದು ಪ್ರತಿಜ್ಞೆಗೈದನು.

ವಿ.ವಿ. ಇಲ್ಲಿ ದುರ್ಯೋಧನನು ಪ್ರತಿಜ್ಞೆಗೈಯಬಹುದಾಗಿದ್ದಿತಲ್ಲ? ಗೈಯಲಿಲ್ಲ. ಅದು ಅವನ ಸ್ವಾರ್ಥಗುಣ. ಅವರು ಯಾವಾಗಲೂ ತಮ್ಮ ಲಾಭವನ್ನೇ ಹುಡುಕುತ್ತಾರೆ. ಅವರಲ್ಲಿ ಗುರುನೇಮ, ಗುರುಭಕ್ತಿ, ಜ್ಞಾನಾರ್ಜನೆ ಇತ್ಯಾದಿಗಳ ಕಡೆಗೆ ಗಮನ ಕೊಡುವುದಿಲ್ಲ. ಅವನ ಈ ಭಾವನೆ ದೂರ್ವಾಸರ ಆತಿಥ್ಯದಲ್ಲಿ ವ್ಯಕ್ತವಾಗುತ್ತದೆ.

ಭೀಮನು ಏಕೆ ಮಾಡಲಿಲ್ಲ? ಅದಕ್ಕೆ ಆಚಾರ್ಯರ ಸಮಾಧಾನ

**ಉನ್ಮಾದನಾದೀನಿ ಸವೇದ ಕೃಷ್ಣಾ-**
**ದಸ್ತ್ರಾಣ್ಯನಾಪತ್ಸು ನ ತಾನಿ ಮುಂಚೇತ್ ।**

**ಇತ್ಯಾಜ್ಞಯಾ ಕೇಶವಸ್ಯಾ ಪರಾಣಿ**
**ಪ್ರಯೋಗಯೋಗ್ಯಾನಿ ಸದೇಚ್ಛತಿ ಸ್ಮ ॥೩೬॥**

'ಉನ್ಮಾದ' ಮೊದಲಾದ ಅಸ್ತ್ರಗಳನ್ನು ಆಪತ್ತು ಇಲ್ಲದೆ ಅವುಗಳನ್ನು ಉಪಯೋಗಿಸಬಾರದು ಎಂದು ಭೀಮನು ಮೊದಲೇ ಶ್ರೀಕೃಷ್ಣನ ಅಪ್ಪಣೆ ಪಡೆದು ಕಲಿತಿದ್ದನು. ಇಂತಹ ವಿಚಿತ್ರವಾದ ಅಸ್ತ್ರಗಳನ್ನು ಕಲಿಯಬೇಕೆಂದು ಅರ್ಜುನನು ಇಚ್ಛಿಸಿದ್ದನು. ಅಲ್ಲದೆ

**ಭೀಷ್ಮಾದಿಭಿರ್ಭವಿತಾ ಸಂಗರೋ ನ**
**ಸ್ತದಾ ನಾಹಂ ಗುರುಭಿರ್ನಿತ್ಯಯೋದ್ಧಾ।**
**ಭವೇಯಮೇಕಃ ಫಲ್ಗುನೋಽಸ್ತ್ರಜ್ಞ ಏಷಾಂ**
**ನಿವಾರಕಶ್ಚೇನ್ಮಮ ಧರ್ಮಲಾಭಃ ॥೩೭॥**

ಮುಂದೆ ಭೀಷ್ಮಾಗಳೊಡನೆ, ಭವಿಷ್ಯದಲ್ಲಿ ಯುದ್ಧಮಾಡುವ ಪ್ರಸಂಗ ಬಂದಾಗ, ನನಗೆ ಗುರುಗಳೊಡನೆ ಅಸ್ತ್ರಗಳಿಂದ ಹೋರಾಡುವುದು ಸರಿಯಲ್ಲ, ಆಗ ಅಸ್ತ್ರಜ್ಞನಾದ ಈ ಅರ್ಜುನನು ಅವರನ್ನು ತಡೆದರೆ ಸಾಕು. ಇದರಿಂದ ನನಗೆ ಧರ್ಮದ ಲಾಭ ಮತ್ತು ಅರ್ಜುನನಿಗೆ ತೃಪ್ತಿ.

ಇದೂ ಅಲ್ಲದೆ,

**ನ ಬುದ್ಧಿ ಪೂರ್ವಕಂ ವರ ಇಂದಿರಾಪತೇ-**
**ರನ್ಯತ್ರ ಮೇ ಗರಾಹ್ಯ ಇತಶ್ಚ ಜಿಷ್ಣುಃ ।**
**ಕರೋತು ಗುರ್ವರ್ಥ ಮಿತಿ ಸ್ಮ ಚಿಂತಯನ್**
**ಭೀಮಃ ಪ್ರತಿಜ್ಞಾಂ ನ ಚಕಾರ ತತ್ರ ॥೩೮॥**

ಬುದ್ಧಿ ಪೂರ್ವಕ ಇಂದಿರಾಪತಿಯ ಹೊರತು ಬೇರೊಬ್ಬರನ್ನು ನಾನು ಶ್ರೇಷ್ಠರೆಂದು ತಿಳಿಯುವುದಿಲ್ಲ. ಈ ಮಹತ್ತರವಾದ ವಿಚಾರಗಳನ್ನು ಮನದಂದು ಭೀಮನು ಪ್ರತಿಜ್ಞೆಯನ್ನು ಮಾಡಲಿಲ್ಲ.

(೧) ತಮ್ಮನ ಕೀರ್ತಿ, (೨) ಗುರುಭಕ್ತಿ (೩) ತಾರತಮ್ಯ ಜ್ಞಾನ ಮತ್ತು ಸರ್ವಜ್ಞತ್ವ ಇವು ಭೀಮನಲ್ಲಿ ಮುಖ್ಯವಾಗಿದ್ದವು.

ತತ್ಪ್ರೇರಿತೇ ನಾರ್ಜುನೇನ ಪ್ರತಿಜ್ಞಾ
ಕೃತಾ ಯದಾ ವಿಪ್ರವರಸ್ತತಃ ಪರಮ್ ।
ಸ್ನೇಹಂ ನಿತಾಂತಂ ಸುರರಾಜ ಸೂನೌ
ಕೃತ್ವಾಮಹಾಸ್ತ್ರಾಣಿ ದದೌ ಸ ಸತ್ಯ ॥೩೯॥

ಭೀಮನ ಪ್ರೇರಣೆಯಿಂದಲೇ ಅರ್ಜುನನು ಪ್ರತಿಜ್ಞೆಯನ್ನು ಮಾಡಿದನು. ಆಗ ವಿಪ್ರಶ್ರೇಷ್ಠರಾದ ದ್ರೋಣಾಚಾರ್ಯರು ಬಹು ಪ್ರೀತಿಯಿಂದ ಇಂದ್ರಸುತ ಅರ್ಜುನನಿಗೆ ಮಹಾಸ್ತ್ರಗಳ ಉಪದೇಶಗಳನ್ನಿತ್ತು ತಮ್ಮ ಮಾತನ್ನು ಸತ್ಯ ಮಾಡಿದರು. ಇತ್ಯಾದಿಗಳ ಕಡೆಗೆ ಗಮನ ಕೊಡುವುದಿಲ್ಲ, ಅವನ ಈ ಭಾವನೆ ದೂರ್ವಾಸರ ಆತಿಥ್ಯದಲ್ಲಿ ವ್ಯಕ್ತವಾಗುತ್ತದೆ.

ಸ ಪಕ್ಷಪಾತಂ ಚ ಚಕಾರ ತಸ್ಮಿನ್
ಕರೋತಿ ಚಾಸ್ಯೋ ರುತರಾಂ ಪ್ರಶಂಸಾಮ್ ।
ರಹಸ್ಯ ವಿದ್ಯಾಶ್ಚ ದದಾತಿ ತಸ್ಯ
ನಾನ್ಯಸ್ಯ ಕಸ್ಯಾಪಿ ತಥಾ ಕಥಂಚಿತ್ ॥೪೦॥

ಇದರಿಂದ "ದ್ರೋಣಾಚಾರ್ಯರು ಪಕ್ಷಪಾತಿಗಳು, ಸದಾ ಅರ್ಜುನನನ್ನೆ ಪ್ರಶಂಸಿಸುತ್ತಾರೆ. ಅವನ ಶ್ರೇಷ್ಠತೆಯನ್ನೇ ಹೊಗಳುತ್ತಾರೆ, ರಹಸ್ಯ ವಿದ್ಯೆಗಳೆನ್ನೆಲ್ಲ ಅವನಿಗೆಯೇ ಕಲಿಸುತ್ತಾರೆ. ಇನ್ಯಾರಿಗೂ ಅವರು ಈ ರೀತಿ ಮಾಡುವುದಿಲ್ಲ" ಎಂಬ ಅಭಿಪ್ರಾಯ ಪ್ರಸಿದ್ಧವಾಯಿತು.

ಭೀಮನು ಅರ್ಜುನನಿಗಿಂತಲೂ ಶ್ರೇಷ್ಠನಲ್ಲವೇ? ಎಂಬುದಕ್ಕೆ

ಭೀಮಃ ಸಮಸ್ತಂ ಪ್ರತಿಭಾ ಬಲೇನ
ಜಾನನ್ ಸ್ನೇಹಂ ತ್ವದ್ವಿತೀಯಂ ಕನಿಷ್ಠೇ ।
ದ್ರೋಣಸ್ಯ ಕೃತ್ವಾ ಸಕಲಾಸ್ತ್ರ ವೇದಿನಂ
ಕರ್ತುಂ ಪಾರ್ಥಂ ನಾರ್ಜುನಪಚ್ಚಕಾರ ॥೪೧॥

ಭೀಮನು ಸ್ವಪ್ರತಿಭೆಯಿಂದಲೇ ಎಲ್ಲ ವಿದ್ಯೆಗಳನ್ನು ಬಲ್ಲವನಾಗಿದ್ದನು. ತನ್ನ ತಮ್ಮನಲ್ಲಿ ದ್ರೋಣರಿಗೆ ಅಧಿಕ ಸ್ನೇಹವುಂಟಾಗಲಿ, ಅನುಗ್ರಹ ಹೆಚ್ಚಲಿ,

ಎಲ್ಲ ಅಸ್ತ್ರಗಳ ಬೋಧೆ(ವುಂಟಾಗಲಿ), ಲಭಿಸಲಿ, ಎಂಬುದೇ ಭೀಮನ ಮುಖ್ಯ ಉದ್ದೇಶವಾಗಿತ್ತು..

ನೈವಾತಿ-ಯತ್ನೇನ ದದರ್ಶಲಕ್ಷ್ಯಂ
ಶುಶ್ರೂಷಾಯಂ ಪಾರ್ಥಮಗ್ರೇ ಕರೋತಿ ।
ಸ್ವಬಾಹುವೀರ್ಯಾದ್ಧಗವತ್ಪ್ರಸಾದಾ-
ನ್ನಿಹನ್ಮಿ ಶತ್ರೂನ್ ಕಿಮನೇನ ಚೇತಿ ॥೬೨॥

ಭೀಮಸೇನನು, ಪ್ರಯತ್ನಪೂರ್ವಕವಾಗಿ ಹೆಚ್ಚು ಲಕ್ಷ್ಯಕೊಡಲಿಲ್ಲ. ಗುರುಗಳ ಸೇವೆಯಲ್ಲಿ ಯಾವಾಗಲೂ ಅರ್ಜುನನೇ ಮುಂದಾಗುತ್ತಿದ್ದನು. ಸ್ವಬಾಹು ಬಲದಿಂದ, ಸ್ವಸಾಮರ್ಥ್ಯದಿಂದ, ಮತ್ತು ಶ್ರೀಹರಿಯ ಕೃಪೆಯಿಂದ ಎಲ್ಲ ಶತ್ರುಗಳನ್ನು ಸಂಹರಿಸುತ್ತೇನೆ. ನನಗೆ ಇನ್ನೊಬ್ಬರಿಂದ ಏನಾಗಬೇಕಾಗಿದೆ ಎಂಬುದು ಭೀಮನ ಅಭಿಪ್ರಾಯ.

ಇಲ್ಲಿಯೂ ತಾರತಮ್ಯ ಸ್ಪಷ್ಟವಾಗಿ ಎದ್ದು ಕಾಣುತ್ತದೆ.

ತದಾ ಸಮೀಯುಃ ಸಕಲಾಃ ಕ್ಷಿತೀಶ
ಪುತ್ರಾ ದ್ರೋಣಾನ್ ಸಕಲಾಸ್ತ್ರಾಣ್ಯವಾಪ್ತುಮ್ ।
ದದೌ ಸ ತೇಷಾಂ ಪರಮಾಸ್ತ್ರಾಣಿ ವಿಪ್ರೋ
ರಾಮಾದವಾಪ್ತಾನ್ಯಗತಾನಿ ಚಾನ್ಯೈಃ ॥೬೩॥

ಆ ಕಾಲದಲ್ಲಿಯ ಸಕಲ ರಾಜರ ಪುತ್ರರು ದ್ರೋಣಾಚಾರ್ಯರ ಹತ್ತಿರ ಬಂದು ಅಭ್ಯಾಸ ಮಾಡಿದರು. ತಾವು ಗುರುಗಳಾದ ಪರಶುರಾಮರ ಹತ್ತಿರ ಕಲಿತ ಸಕಲ ಅಸ್ತ್ರಗಳನ್ನು ಇತರ ಶ್ರೇಷ್ಠವಾದವುಗಳನ್ನು ಕೂಡ ರಾಜಕುಮಾರರಿಗೆ ಹೇಳಿಕೊಟ್ಟರು.

ಅಸ್ತ್ರಾಣಿ ಚಿತ್ರಾಣಿ ಮಹಾಂತಿದಿವ್ಯಾ
ನ್ಯನ್ಯೈರ್ನೃಪೈರ್ಮನಸಾಪ್ಯಸ್ಮೃತಾನಿ ।
ಅವಾಪ್ಯ ಸರ್ವೇ ತನಯಾ ನೃಪಾಣಾಂ
ಶಕ್ತಾ ಬಭೂವುರ್ನ ಯಥೈವ ಪೂರ್ವೇ ॥೬೪॥

ರಾಜಕುಮಾರರು, ಕನಸು–ಮನಸುಗಳಲ್ಲಿಯೂ ಕಾಣದಿರುವ, ಎಲ್ಲೆಲ್ಲಿಯೂ ಕೇಳರಿಯದ, ದಿವ್ಯವಾದ, ವಿಚಿತ್ರವಾದ ಅಸ್ತ್ರಗಳನ್ನು ಪಡೆದು ಪ್ರಸಿದ್ಧರಾದರು. ಪೂರ್ವದಲ್ಲಿ ಯಾರೂ ಇಂತಹ ಅಸ್ತ್ರಗಳನ್ನು ಪಡೆದಿರಲಿಲ್ಲ.

**ನೈತಾದೃಶಾಃ ಪೂರ್ವಮಾಸನ್ನರೇಂದ್ರಾ**
**ಅಸ್ತ್ರೇ ಬಲೇ ಸರ್ವವಿದ್ಯಾಸು ಚೈವ ।**
**ದೌಷ್ಯಂತಿ ಮಾಂಧಾತೃಮರುತ್ತ ಪೂರ್ವಾ**
**ಶ್ಚೈ ತತ್ಸಮಾ ನಾಸು (ನಾಃ ಸ್ಯು) ರುದಾರ ವೀರ್ಯಾಃ ॥೪೫॥**

ದ್ರೋಣಾಚಾರ್ಯರ ಕಾಲದ ರಾಜಕುಮಾರರು, ಅಸ್ತ್ರವಿದ್ಯೆಯಲ್ಲೂ, ಬಲಪ್ರದರ್ಶನ ಮುಂತಾದ ಸರ್ವ ವಿದ್ಯೆಗಳಲ್ಲೂ ಹಿಂದಿನ ದುಷ್ಯಂತನ ಮಗ ಭರತ, ಮಾಂಧಾತ, ಮರುತ್ತ ಮೊದಲಾದ ಎಲ್ಲ ರಾಜರನ್ನೂ ಮೀರಿಸಿದ್ದರು.

**ತದಾ ಕರ್ಣೋಽಥೈಕಲವ್ಯಶ್ಚ ದಿವ್ಯಾ–**
**ನ್ಯಸ್ತ್ರಾಣ್ಯಾಪ್ತುಂ ದ್ರೋಣ ಸಮೀಪಮೀಯತುಃ ।**
**ಸೂತ್ರೋ ನಿಷಾದ ಇತಿ ನೈತಯೋರದಾ**
**ದಸ್ತ್ರಾಣಿ ವಿಪ್ರಃ ಸ ತು ರಾಮಶಿಷ್ಯಃ ॥೪೬॥**

ಅದೇ ಕಾಲದಲ್ಲಿ ಕರ್ಣ, ಮತ್ತು ಏಕಲವ್ಯ ದಿವ್ಯಾಸ್ತ್ರಗಳ ಪ್ರಾಪ್ತಿಗಾಗಿ ದ್ರೋಣಾಚಾರ್ಯರ ಸಮೀಪಕ್ಕೆ ಬಂದರು. ವಿದ್ಯೆಗಾಗಿ ವಿನಂತಿಸಿಕೊಂಡರು. ಆಗ ದ್ರೋಣಾಚಾರ್ಯರು 'ನೀನು–ಸೂತ, ನೀನು–ನಿಷಾದ' ಎಂದು ಹೇಳಿ ಉಪದೇಶಿಸಲು ನಿರಾಕರಿಸಿದರು. ಪರಶುರಾಮರ ಶಿಷ್ಯರಾದ ದ್ರೋಣರು ಆ ನಿಯಮಗಳಿಗೆ ಕಟಿಬದ್ಧರಾಗಿದ್ದರು.

**ಕರ್ಣೋಽನವಾಪ್ಯ ನಿಜಮೀಪ್ಸಿತಮುಚ್ಚಮನೋ–**
**ಯಸ್ಮಾದವಾಪ ಪುರುಷೋತ್ತಮತೋಽಸ್ತ್ರ ಬೃಂದಮ್ ।**
**ವಿಪ್ರೋಽಪ್ಯಯಂ ತಮಜಮೋಮಿ ಭೃಂಗೋಃ ಕುಲೋತ್ತ**
**ಮಿತ್ಥಂ ವಿಚಿಂತ್ಯ ಸಯಯೌ ಭೃಗುಪಾಶ್ರಮಾಯ ॥೪೭॥**

ಕರ್ಣನ ಮನದ ಇಚ್ಛೆಯು ತೃಪ್ತಿಯಾಗಲಿಲ್ಲ. ಕಾರಣ, ನಾನು ಪುರುಷೋತ್ತಮನಾದ ಪರಶುರಾಮನ ಬಳಿಯಲ್ಲಿಯೇ ಹೋಗುತ್ತೇನೆ. ವಿಪ್ರನೆಂದು ಹೇಳಿ ಅಸ್ತ್ರಗಳ ಸಮೂಹವನ್ನೇ ಪಡೆಯುತ್ತೇನೆ ಎಂದು ಯೋಚಿಸಿ ಪರಶುರಾಮರ ಆಶ್ರಮಕ್ಕೆ ಬಂದನು.

ಇಲ್ಲಿ ಪ್ರತಿಭಟನೆ ಮತ್ತು ಅಧರ್ಮ ಎರಡೂ ಪ್ರಾರಂಭವಾದವು.

ವಿ.ವಿ. ದ್ರೋಣಾಚಾರ್ಯರು, ಕರ್ಣ ಮತ್ತು ಏಕಲವ್ಯ ಇಬ್ಬರೂ ಶಿಷ್ಯರಾಗಿ ಬಂದಾಗ ಏಕೆ ಸ್ವೀಕರಿಸಲಿಲ್ಲ? ಅವರಿಗೆ ಅಸ್ತ್ರವಿದ್ಯೆಯನ್ನು ಕೊಡಲು ಏಕೆ ನಿರಾಕರಿಸಿದರು? ಅವರು .. ಜಾತಿವಾದಿಗಳೇ? ಪಕ್ಷಪಾತಿಗಳೇ? ಎಂದು ಇಂದಿನ ಯುವಕರಲ್ಲಿ ಅನೇಕ ಬಗೆಯ ವಿಚಾರಗಳು ಬರಬಹುದು. ಇದನ್ನೇ ಬಂಡವಾಳವನ್ನಾಗಿಸಿ ಅನೇಕರು ತಮ್ಮ ಕೈಚಳಕ ತೋರಿದ್ದಾರೆ. ಭಾವೈಕ್ಯತೆಗೆ, ಪ್ರಶ್ನೆಚಿಹ್ನೆಯಾಗಿದ್ದಾರೆ. (ಅವರಿಗೆ ಸಮಾಧಾನ). ಊಹಾ ಲೋಕದಲ್ಲಿ ಸಂಚರಿಸಿದ್ದಾರೆ.

ಕೆಲವರು ಸಮಾಧಾನಕ್ಕಾಗಿ ಈ ರೀತಿ ಹೇಳಿದ್ದೂ ಉಂಟು.

೧. ದ್ರೋಣಾಚಾರ್ಯರು ಏಕಲವ್ಯನಿಗೆ ನೀನು ಇನ್ನು ಚಿಕ್ಕ ಬಾಲಕ ಅಸ್ತ್ರವಿದ್ಯೆಗೆ ನೀನು ಅರ್ಹನಲ್ಲ. ಶಸ್ತ್ರವಿದ್ಯೆ ನಿನಗೆ ಸಲ್ಲ. ನಿನ್ನ ಕೈಬೆರಳು ಬಹು ಮೃದು. ಅವು ಬಿಲ್ಲನ್ನು ಧರಿಸಲಾರವು. ಅದಕ್ಕಾಗಿ ಈಗ ಬೇಡ. ಹಿಂದಿರುಗು.

೨. ಏಕಲವ್ಯ ನಿಷಾಧನ ಮಗನು. ತಂದೆ ನಿಷಾಧರ ರಾಜ. ಹಿಂಸೆಯೇ ಅವರ ವೃತ್ತಿ. ಬೇಟೆಯಾಡುವುದೇ ಅವರ ಧರ್ಮ. ಪಶು, ಪಕ್ಷಿಗಳನ್ನು ಕೊಲ್ಲುವುದರಲ್ಲಿ ಅವರಿಗೆ ಆನಂದ. ಇಂಥವನಿಗೆ ಬಿಲ್ಲುವಿದ್ಯೆಯನ್ನು ಕಲಿಸಿದರೆ, ಅವನು ಸಮಾಜಘಾತುಕನಾಗಬಹುದು ಎಂದು ಬಗೆದು ದ್ರೋಣರು ಒಪ್ಪಲಿಲ್ಲ.

೩. ಕೆಲವರ ವಿಚಾರದಲ್ಲಿ ಏಕಲವ್ಯನು ಹಿಂದೆ ಮಣಿಮಂತನೆಂಬ ದೈತ್ಯನಾಗಿದ್ದ. ಇಂದು ಮಾನವ ರೂಪದಲ್ಲಿ ಬಂದಿದ್ದಾನೆ. ಸುಜನರಿಗೆ ಕಿರುಕುಳ ಕೊಡುವುದೇ ಅವನ ಮುಖ್ಯ ಪ್ರವೃತ್ತಿ. ಇದನ್ನು ತಿಳಿದ ದ್ರೋಣರು ನಿರಾಕರಿಸಿದರು.

೪. ಶ್ರೀಮದಾಚಾರ್ಯರು ಮಾತ್ರ ತಾತ್ಪರ್ಯ ನಿರ್ಣಯದಲ್ಲಿ ಸೂತ, ನಿಷಾದ (ವ್ಯಾಧ) ಎಂಬ ಎರಡು ಸ್ಪಷ್ಟ ಪದಗಳನ್ನು ಬಳಸಿ ಬೆಳಕು ಚೆಲ್ಲಿದ್ದಾರೆ.

ಇವು ಎಷ್ಟರಮಟ್ಟಿಗೆ ಸಮಂಜಸ ಎಂದು ವಿವೇಚಿಸಬೇಕಾಗಿದೆ. ಇದನ್ನು ವಿಮರ್ಶಿಸುವಾಗ ನಾವು ಕಲಿಯುಗದಿಂದ ದ್ವಾಪರಕ್ಕೆ ಹೋಗಬೇಕು. ಅಂದಿನ ಸಮಾಜದ ರೀತಿ ನೀತಿಗಳನ್ನು ಅರಿಯಬೇಕು. ಸಂಸ್ಕೃತಿಯನ್ನು ಆಳವಾಗಿ ಅಭ್ಯಸಿಸಬೇಕು.

೧. ಅದು ಸಾರ್ವಜನಿಕ ಶಾಲೆಯಾಗಿರಲಿಲ್ಲ. ಕೇವಲ ರಾಜಪುತ್ರರಿಗಾಗಿಯೇ ಮೀಸಲಾಗಿತ್ತು. ಕ್ಷತ್ರಿಯರಿಗಾಗಿ ನಿರ್ಮಿಸಲ್ಪಟ್ಟಿತು. ಭೀಷ್ಮರು ಕೇವಲ ಪಾಂಡವ-ಕೌರವರಿಗೆಂದೇ ಯೋಜಿಸಿದ್ದರು. ನಂತರ ಇತರ ರಾಜಕುಮಾರರೂ ಬಂದರು. ಅಂತೆಯೇ ದ್ರೋಣರು ಸೂತ, ನಿಷಾದ ಎಂಬ ಪದಗಳನ್ನು ಹೇಳಿ ಅವರಿಗೆ ಪ್ರವೇಶವಿಲ್ಲವೆಂದು ಸ್ಪಷ್ಟೀಕರಿಸಿದ್ದಾರೆ. ಇಲ್ಲಿ ಜಾತಿವಾದಕ್ಕೆ ಆಸ್ಪದವಿಲ್ಲ. ಶಾಲೆಯ ನಿಯಮಗಳ ಅನುಷ್ಠಾನವೇ ಮುಖ್ಯ.

೨. ಅಸ್ತ್ರ ವಿದ್ಯೆಗಳಿಗೆ ಆಧಾರ ಮಂತ್ರಗಳು. ಅವು ಸಿದ್ಧಿಸಬೇಕಾದರೆ ಗಾಯತ್ರಿ ಮಂತ್ರ ಮೂಲ. ಅದನ್ನು ಕಲಿಯಬೇಕಾದರೆ ವೇದಾಧ್ಯಯನ ಅಗತ್ಯ. ಅದನ್ನು ಸಾಧಿಸಬೇಕಾದರೆ ಉಪನಯನ ಸಂಸ್ಕಾರ ಅನಿವಾರ್ಯ. ಅಂದಿನ ಸಮಾಜದಲ್ಲಿ ಸೂತನಿಗಾಗಲಿ, ನಿಷಾದನಿಗಾಗಲಿ ಆ ಅಧಿಕಾರವಿರಲಿಲ್ಲ. ಅದಕ್ಕಾಗಿ ದ್ರೋಣರು ನಿರಾಕರಿಸಿದರು.

ದ್ರೋಣರು ಪಕ್ಷಪಾತಿಗಳೂ ಅಲ್ಲ. ಏಕೆಂದರೆ ಅವರು ಕೇವಲ ಕೌರವ ಪಾಂಡವರಿಗೆ ಮಾತ್ರ ಬಿಲ್ಲುವಿದ್ಯೆ ಕಲಿಸಲಿಲ್ಲ. ಇತರ ದೇಶಗಳಿಂದ (ಪ್ರಾಂತಗಳಿಂದ) ಬಂದ ರಾಜಕುಮಾರರಿಗೂ ಅಷ್ಟೇ ಪ್ರೀತಿಯಿಂದ ಕಲಿಸಿ ವೀರರನ್ನಾಗಿ ಮಾಡಿದ್ದಾರೆ.

ಈ 'ಪಕ್ಷಪಾತ' ಎಂಬ ಶಬ್ದ ಆಗಲೇ ಬಳಕೆಗೆ ಬಂದದ್ದನ್ನು ನಾವು ಶ್ಲೋಕದಲ್ಲಿ ಕಾಣುತ್ತೇವೆ. ಅದನ್ನು ನಾವು 'ಗುಣಪಕ್ಷಪಾತ' ಎಂಬ ವಿದ್ಯಾರ್ಥಿ, ಉಚ್ಚದೃಷ್ಟಿಯಿಂದ ಕಾಣಬೇಕು. ಯಾವ ವಿದ್ಯಾರ್ಥಿ ಕಲಿಯುವಾಗ ಶ್ರದ್ಧೆಯಿಟ್ಟು, ಶ್ರಮವಹಿಸಿ, ಗುರುಗಳ ಆಜ್ಞೆಗಳನ್ನು ಮನ್ನಿಸಿ, ಭಕ್ತಿಪೂರ್ವಕವಾಗಿ ಸೇವೆಗೈಯುತ್ತಾನೇ, ಅಂಥವನಲ್ಲಿ ಗುರುಗಳ

ಪ್ರೀತಿ ಹೆಚ್ಚುವುದು ಸ್ವಾಭಾವಿಕ. ಇದು ನಿಸರ್ಗದತ್ತವಾದದ್ದು. ಗುರುಗಳು ಇದನ್ನು ಪಾಲಿಸದಿದ್ದರೆ ಗುರುಧರ್ಮಕ್ಕೆ ಚ್ಯುತಿಯೆಂದೇ ಭಾವಿಸಬೇಕು. ಇದನ್ನು ಸಹಿಸದ ಇತರರು ಇದನ್ನೆ ಪಕ್ಷಪಾತ ಎಂದು ಬಗೆದರೆ ಅದು ಅವರ ತಪ್ಪು ಭಾವನೆ ಅಷ್ಟೆ.

ಜಾತಿವಾದಿಗಳಂತೂ ಅಲ್ಲವೇ ಅಲ್ಲ. ಆಗಿನ ಕಾಲದಲ್ಲಿ ಈ ವಾದವೇ ಇರಲಿಲ್ಲ. ಎಲ್ಲರು ತಮ್ಮ ತಮ್ಮ ವರ್ಣಾಶ್ರಮಧರ್ಮ, ಕರ್ಮಗಳಲ್ಲಿಯೇ ನಿರತರಾಗಿರುತ್ತಿದ್ದರು. ಅವುಗಳಲ್ಲಿಯೇ ಅವರು ತೃಪ್ತಿಯನ್ನು ಪಡೆಯುತ್ತಿದ್ದರು. ಅವುಗಳನ್ನು ಮೀರಿ ಅವರು ಎಂದೂ ನಡೆಯುತ್ತಿರಲಿಲ್ಲ. ಉದಾಹರಣೆಗೆ– ವಿದುರ, ಉದ್ಧವ ಮುಂತಾದವರ ಅನೇಕರ ಹೆಸರುಗಳನ್ನು ಹೆಸರಿಸಬಹುದು. ಈ ಕಾಲದ ಕನಕದಾಸರನ್ನೇ ತೆಗೆದುಕೊಳ್ಳಿ. ಅವರು ಮಹಾಜ್ಞಾನಿಗಳು, ಯೋಗ್ಯತೆಯಲ್ಲಿ ಬಹು ಹೆಚ್ಚಿನವರು. ಆದರೂ ಅವರು ವರ್ಣಾಶ್ರಮಗಳ ಎಲ್ಲೆಯನ್ನು ಮೀರಿಲ್ಲ. ಇದರಿಂದ ಅವರ ಗೌರವಕ್ಕೇನು ಚ್ಯುತಿ ಬರಲಿಲ್ಲ. ವ್ಯಾಸರಾಜರು ಪುರಂದರದಾಸರು ಅವರನ್ನು ಬಹು ಗೌರವದಿಂದ ಕಾಣುತ್ತಿದ್ದರು. ಸಮಾಜವು ಅವರನ್ನು ಅಷ್ಟೇ ಗೌರವಿಸಿದೆ.

ಸ ಸರ್ವವೇತ್ತುಶ್ಚ ವಿಭೋರ್ಭಯೇನ
ವಿಪ್ರೋಽಹಮಿತ್ಯವದದಸ್ತ್ರ ವರಾತಿ ಲೋಭಾತ್ ।
ಜಾನನ್ನಪಿ ಪ್ರದದಾವಸ್ಯ ರಾಮೋ
ದಿವ್ಯಾನ್ಯಸ್ತ್ರಾಣ್ಯಖಿಲ್ಯವ್ಯಯಾತ್ಮಾ ॥೪೮॥

ಸರ್ವಜ್ಞರಾದ ಪರಶುರಾಮರಲ್ಲಿ, ಶ್ರೇಷ್ಠ ಅಸ್ತ್ರಗಳನ್ನು ಪಡೆಯುವ (ಗಳಿಸುವ) ಲೋಭದಿಂದಲೂ, ಮತ್ತು ಭೀತಿಯಿಂದಲೂ ಕರ್ಣನು 'ನಾನು ವಿಪ್ರನೆಂದು' ಹೇಳಿಕೊಂಡನು. ಪರಶುರಾಮರು ಸಕಲವನ್ನು ತಿಳಿದವರಾದ ಕಾರಣ ಕರ್ಣನಾರು ಎಂದು ಅವರಿಗೆ ತಿಳಿದಿತ್ತು. ಆದರೂ ಕರ್ಣನಿಗೆ ಎಲ್ಲ ಅಸ್ತ್ರಗಳನ್ನು ಮಂತ್ರಪೂರ್ವಕವಾಗಿ ಹೇಳಿಕೊಟ್ಟರು.

ತಿಳಿದಿದ್ದರೂ ಏಕೆ ಹೇಳಿಕೊಟ್ಟರು?

ಅಸ್ತ್ರಜ್ಞ ಚೂಡಾಮಣಿಮಿಂದ್ರ ಸೂನುಂ
ವಿಶ್ವಸ್ಯ ಹಂತುಂ ಧೃತರಾಷ್ಟ್ರ ಪುತ್ರಃ ।

**ಏನಂ ಸಮಾಶ್ರಿತ್ಯ ದೃಢೋ ಭವೇತೇ**
**ತ್ವದಾಜ್ಞಾ ತ್ವೈವಾಸ್ತ್ರಮಸ್ಮೈ ರಮೇಶ: ॥೪೯॥**

ಅಸ್ತ್ರಜ್ಞರಲ್ಲಿ ಅರ್ಜುನನು ಶ್ರೇಷ್ಠನು ಎಂಬುದು ಎಲ್ಲರಿಗೂ ಅರಿವಾಗಿದೆ. ಆ 'ಅರ್ಜುನನನ್ನು ಕೊಲ್ಲುವ ಉದ್ದೇಶಕ್ಕಾಗಿ ಕೌರವರಿಗೆ ಕರ್ಣನಲ್ಲಿ ದೃಢವಾದ ವಿಶ್ವಾಸ ಹುಟ್ಟಲಿ' ಎಂಬ ಹೇತುವಿನಿಂದಲೇ ರಮೇಶನ ಇಚ್ಛೆಯಂತೆಯೇ ಪರಶುರಾಮರು ಕರ್ಣನಿಗೆ ಕಲಿಸಿದರು.

**ಜ್ಞಾನಂ ಚ ಭಾವಗತಮಾಪ್ಯ (ಮಪ್ಯ) ಪರಾಖ್ಯವಿದ್ಯಾ**
**ರಾಮಾದವಾಪ್ಯ ವಿಜಯಂ ಧನುರಗ್ರ್ಯ ಯಾನಮ್ ।**
**ಅಬ್ದೈಶ್ಚತುರ್ಭಿರಥ ಚ ನ್ಯವಸತ್ತ ದಂತೇ**
**ಹಾತುಂ ನ ಶಕ್ತ ಉರುಗಾಯಮಿಮಂ ಸ ಕರ್ಣ: ॥೫೦॥**

ಕರ್ಣನು ಧನುರ್ವಿದ್ಯೆಯ ಜೊತೆಯಲ್ಲಿ ಭಾಗವತ ಧರ್ಮದ ಜ್ಞಾನವನ್ನು ಅರಿತನು. ಪರತತ್ತ್ವದ ವಿಷಯವನ್ನೂ ತಿಳಿದುಕೊಂಡನು. ವಿಜಯಪ್ರದನಾಗಲು ಉಗ್ರಬಿಲ್ಲುಗಾರಿಕೆಯನ್ನು ಪಡೆಯಲು ಪರಶುರಾಮರಲ್ಲಿ ನಾಲ್ಕು ವರ್ಷಗಳ ಕಾಲವಿದ್ದನು. ಆದರೂ ಗುರುಗಳನ್ನು ಅಗಲಲು ಶಕ್ತನಾಗದೆ ಕೆಲವು ಕಾಲ ಅಲ್ಲಿಯೇ ಉಳಿದನು. (ಇದೆಲ್ಲವೂ ದೈವ ರೀತಿಯೆ)

**ಅಂಕೇ ನಿಧಾಯ ಸ ಕದಾಚಿದಮುಷ್ಯ ರಾಮ:**
**ಶಿಷ್ಯೇ ಶಿರೋ ವಿಗತ ನಿದ್ರ ಉದಾರ ಬೋಧ: ।**
**ಸಂ ಸುಪ್ತ ವತ್ಸುರವರ: ಸುರಕಾರ್ಯಹೇತೋ**
**ರ್ದಾತುಂ ಚ ವಾಲಿನಿಧನಸ್ಯ ಫಲಂ ತಪಸ್ಯ ॥೫೧॥**

ಪರಶುರಾಮರು ನಿದ್ರೆಯನ್ನು ಗೆದ್ದವರಾಗಿದ್ದರೂ, ನಿದ್ರೆ ಬಂದವರಂತೆ ನಟಿಸಿ, ಶಿಷ್ಯನ ತೊಡೆಯ ಮೇಲೆ ತಲೆಯನ್ನಿಟ್ಟು ಮಲಗಿಕೊಂಡರು. ರಹಸ್ಯವಾದ ದೇವತಾಕಾರ್ಯ ನೆರವೇರಲಿ ಮತ್ತು ಇವನಿಗೆ ವಾಲಿಯ ನಿಧನದ ಫಲ ದೊರೆಯಲಿ ಎಂಬುದೇ ರಾಮರ ಉದ್ದೇಶವಾಗಿತ್ತು.

'ವಾಲಿಯನನ್ನು ವಧಿಸಿದ ಫಲ' ಅಂದರೆ ಹಿಂದೆ ರಾಮವತಾರದಲ್ಲಿ ಸೂರ್ಯನೇ ಸುಗ್ರೀವನಾಗಿ ಇಂದ್ರಾವತಾರನಾದ ವಾಲಿಯನ್ನು ಕೊಲ್ಲಿಸಿದ್ದಾನೆ. ಇಂದು ಅದೇ ಇಂದ್ರನೇ ಅರ್ಜುನನಾಗಿ ಕರ್ಣನನ್ನು ಕೊಲ್ಲಬೇಕಾಗಿದೆ.

ಅಲ್ಲದೆ ರಾಮಾವತಾರದಲ್ಲಿ ಸುಗ್ರೀವನಾಗಿ ರಾಮರ ಸೇವೆ ಸಲ್ಲಿಸಿ ಬಹಳಷ್ಟು ಪುಣ್ಯ ಸಂಪಾದಿಸಿದ್ದಾನೆ. ಅದು ಯೋಗ್ಯತೆಗೆ ಮೀರಿದೆ. ಅದು ಹ್ರಾಸವಾಗಬೇಕಾಗಿದೆ.

ಯೋಗ್ಯತೆಗೆ ಮೀರಿದ ಪುಣ್ಯವನ್ನು ಕಳೆಯುವುದು ಶ್ರೀಹರಿಯ ಇಚ್ಛೆ ಮತ್ತು ಧರ್ಮವೂ ಕೂಡ.

ತತ್ರಾಸ ರಾಕ್ಷಸವರಃ ಸ ತು ಹೇತಿನಾಮಾ
ಕಾಲೇ ಮಹೇಂದ್ರ ಮನುಪಾಸ್ಯ ಹಿ ಶಾಪತೋಽಸ್ಯ ।
ಕೀಟಸ್ತಮಿಂದ್ರ ಉತ ತತ್ರ ಸಮಾವಿವೇಶ
ಕರ್ಣಸ್ಯ ಶಾಪ ಮುಪಪಾದಯಿತುಂ ಸುತಾರ್ಥೇ ॥೫೨॥

ಅಲ್ಲಿ 'ಹೇತಿ' ಎಂಬ ರಾಕ್ಷಸ ಶ್ರೇಷ್ಠನಿರುತ್ತಿದ್ದನು. ಇಂದ್ರನನ್ನು ಉಪಾಸಿಸದೆ ಇದ್ದ ಪ್ರಯುಕ್ತ ಅವನಿಗೆ ಕೀಟ ಜನ್ಮ ಬಂದಿತ್ತು. 'ಕರ್ಣನಿಗೆ ಶಾಪ ದೊರೆಯಬೇಕು, ತನ್ನ ಮಗನಾದ ಅರ್ಜುನನಿಗೆ ಜಯವಾಗಬೇಕು, ಅಲ್ಲದೆ ಕೀಟ ಜನ್ಮದ ಉದ್ಧಾರವಾಗಬೇಕು' ಎನ್ನುವ ಉದ್ದೇಶದಿಂದ ಇಂದ್ರನೇ ಕೀಟದಲ್ಲಿ ಪ್ರವೇಶಿಸಿದನು.

ಕರ್ಣಃ ಸ ಕೀಟತನುಗೇನ ಕಿರೀಟನೈವ
ಹ್ಯರೋ ರಥಸ್ಥಲತ ಔಪರಿಗಾತ್ರಚಶ್ಚ ।
ವಿದ್ಧಃ ಶರೇಣ ಸಯಥಾರುಧಿರಸ್ಯ ಧಾರಾಂ
ಸುಸ್ರಾವ ತಂ ವಿಗತನಿದ್ರ ಇವಾಹ ರಾಮಃ ॥೫೩॥

ಆ ಕೀಟವು ದೇವೇಂದ್ರನೊಡಗೂಡಿ, ಕರ್ಣನ ತೊಡೆಯ ತಳಭಾಗವನ್ನು ಚೆನ್ನಾಗಿ ಕೊರೆಯಹತ್ತಿತು. ಒಂದು ಬಾಣದ ಆಘಾತದ ಪರಿಣಾಮದಂತೆ ಕರ್ಣನ ತೊಡೆಯಿಂದ ರಕ್ತ ಪ್ರವಾಹ ಹರಿಯಹತ್ತಿತು. ವಿಗತನಿದ್ರರಾದ ಪರಶುರಾಮರು ನಿದ್ರೆಯಿಂದ ಎಚ್ಚೆತ್ತವರಂತೆ ನಟಿಸಿ ಅದನ್ನು ನೋಡಿದರು.

**ಕಿಂ ತ್ವಂ ನ ಚಾಲಯಸಿ ಮಾಮ ರುಧಿರಪ್ರಸೇಕೇ**
**ಪ್ರಾಪ್ತೇಽಪಿ ಪಾವನ ವಿರೋಧಿನಿ ಕೋಽಸಿ ಚೇತಿ ।**
**ತಂ ಪ್ರಾಹ ಕರ್ಣ ಇಹನ್ನೈವ ಮಯೊ ವಿಧೇಯೋ**
**ನಿದ್ರಾವಿರೋಧ ಇತಿ ಕೀಟ ಉಪೇಕ್ಷಿತೋ ಮೇ ॥೫೪॥**

"ನನ್ನನ್ನು ನೀನು ಏಕೆ ಎಬ್ಬಿಸಲಿಲ್ಲ? ಇಂತಹ ಪವಿತ್ರ ರಕ್ತವು ನನ್ನ ಹತ್ತಿರದವರೆಗೆ ಹರಿದು ಬಂದರೂ ನೀನು ಏಕೆ ಸುಮ್ಮನೆ ಕುಳಿತೆ? ನೀನಾರು? ನಿಜವಾಗಿ ಹೇಳು" ಎಂದು ಪರಶುರಾಮರು ಕರ್ಣನನ್ನು ಕೇಳಿದರು. 'ತಮ್ಮ ನಿದ್ರಾಭಂಗವಾಗಬಾರದೆಂಬ ಉದ್ದೇಶದಿಂದ ಕೀಟದ ಬಾಧೆಯನ್ನು ಉಪೇಕ್ಷಿಸಿದೆನು' ಎಂದು ಕರ್ಣನು ವಿಧೇಯನಾಗಿಯೇ ಉತ್ತರಿಸಿದನು.

**ಜಾತ್ಯಾಸ್ಮಿ ಸೂತ ಉತ ತೇ ತನಯೋಸ್ಮಿ ಸತ್ಯಂ**
**ತೇನಾಸ್ಮಿ ವಿಪ್ರ ಇತಿ ಭಾರ್ಗವ ವಂಶಜೋಹಮ್ ।**
**ಅಗ್ರೇಽಬ್ರುವಂ ಭವತೇ ಈಶ ನ ಹಿ ತ್ವದನ್ಯೋ**
**ಮಾತಾಪಿತಾಗುರುತರೋ ಜಗತೋಪಿ ಮುಖ್ಯಃ ॥೫೫॥**

ನಾನು ಜಾತಿಯಿಂದ ಸೂತ ನಿಜ. ನಾನು ನಿನ್ನ ಮಗನು ಇದೂ ಸತ್ಯ. ವಿಪ್ರನು ಇದೂ ಸತ್ಯ. ನಾನು ಭಾರ್ಗವ ವಂಶದವರು ಅಹುದು. ನೀನು ಎಲ್ಲರಿಗೂ ಸರ್ವೋತ್ತಮನು. ಇಲ್ಲರಿಗೂ ನೀನು ಸ್ವಾಮಿ. ಜಗತ್ತಿನಲ್ಲಿ ನಿನಗಿಂತ ತಾಯಿ, ತಂದೆ ಮತ್ತು ಗುರು ಯಾರಿದ್ದಾರೆ? ಎಲ್ಲರೂ ನಿನ್ನ ಮಕ್ಕಳು. ಆದ್ದರಿಂದ ನಾನು ನಿನ್ನ ಮಗನೇ ಅಹುದು.

ಇದು ಕರ್ಣನ ತಾತ್ವಿಕ ಸತ್ಯ.

**ಇತ್ಯುಕ್ತ ಮಾತ್ರ ವಚನೇ ಸತು ಕೀಟಕೋಽಸ್ಯ**
**ರಾಮಸ್ಯ ದೃಷ್ಟಿ ವಿಷಯತ್ವತ ಏವ ರೂಪಮ್ ।**
**ಸಂ ಪ್ರಾಪ್ಯ ನೈಜಮತಿಪೂರ್ಣಗುಣಸ್ಯ ತಸ್ಯ**
**ವಿಷ್ಣೋರನುಗ್ರಹತ ಆಪ ವಿಮಾನಗಃ ಸ್ವಃ ॥೫೬॥**

ಅವರು ಈ ರೀತಿ ಮಾತನಾಡುತ್ತಿರುವಾಗ, ಪರಶುರಾಮರು ಕಾಣುತ್ತಿರುವಂತೆಯೇ ಆ ಕೀಟವು ತನ್ನ ಮೂಲ ಸ್ವರೂಪದೊಂದಿಗೆ ವಿಮಾನದಲ್ಲಿ ಕುಳಿತು ಸ್ವರ್ಗವನ್ನು ಸೇರಿತು. ಇದಕ್ಕೆಲ್ಲ ಗುಣಪೂರ್ಣನಾದ ಶ್ರೀವಿಷ್ಣುವಿನ ಅನುಗ್ರಹವೇ ಮುಖ್ಯ ಕಾರಣ.

ಆಹಾಹ ರಾಮಸ್ತಮಸತ್ಯವಾಚಂ (ಚೋ)
ನ ತೇ ಸಕಾಶೇ ಮಮ ವಾಸ ಯೋಗ್ಯತಾ ।
ತಥಾಪಿ ತೇ ನೈವ ವೃಥಾಸ ಮದೀಯಾ
ಭಕ್ತಿರ್ಭವೇಜ್ಜೇಷ್ಯಸಿ ಸರ್ವಶತ್ರೂನ್ ॥೫೭॥

ಆ ಪರಶುರಾಮರು, ನೀನು ಸುಳ್ಳು ಮಾತನಾಡಿದೆ. ನಿನ್ನಂಥವನು ನನ್ನಲ್ಲಿ ವಾಸವಾಗಿರಲು ಯೋಗ್ಯನಲ್ಲ. ಆದರೂ ನೀನು ನನ್ನಲ್ಲಿ ಭಕ್ತಿ ಮಾಡಿರುವಿ, ಅದು ವ್ಯರ್ಥವಾಗಲಾರದು. ಅದರಿಂದ ನೀನು ಎಲ್ಲ ವೈರಿಗಳನ್ನು ಗೆಲ್ಲಬಲ್ಲೆ. ಆದರೆ,

ಅಸ್ಪರ್ಧ ಮಾನಂ ನ ಕಥಂಚನ ತ್ವಾಂ
ಜೇತಾ ಕಶ್ಚಿತ್ ಸ್ಪರ್ಧಮಾನಸ್ತು ಯಾಸಿ ।
ಪರಾಭೂತಿಂ ನಾತ್ರ ವಿಚಾರ್ಯ ಮಸ್ತಿ
ಪ್ರಮಾಧೀ ತ್ವಂ ಭವಿತಾ ಚಾಸ್ತ್ರಸಂಘೇ ॥೫೮॥

"ಸ್ಪರ್ಧೆಯಿಲ್ಲದೆ ಯುದ್ಧ ಮಾಡಿದರೆ, ನಿನ್ನನ್ನು ಯಾರೂ ಗೆಲ್ಲಲಾರರು. ಸ್ಪರ್ಧೆಯಿಂದ ಕೂಡಿದ್ದಾದರೆ, ಅಲ್ಲಿ ನಿನಗೆ ಪರಾಜಯ ನಿಶ್ಚಯ. ಅಷ್ಟೇ ಅಲ್ಲ ಸ್ಪರ್ಧೆಯ ಯುದ್ಧದಲ್ಲಿ ನಿನಗೆ ವಿಸ್ಮರಣೆಯಾಗಿ ಕಲಿತ ಅಸ್ತ್ರಗಳೂ ಮರೆತುಹೋಗುತ್ತವೆ. ಇದಕ್ಕೆ ಅನ್ಯ ವಿಚಾರವಿಲ್ಲ" ಎಂದು ಪರಶುರಾಮರು ಕರ್ಣನಿಗೆ ಹೇಳಿದರು.

ವಿ.ವಿ. ಗುರುಗಳ ಎದುರಿನಲ್ಲಿ ಸುಳ್ಳಾಡಿದ ತಪ್ಪಿಗೆ ಎಷ್ಟು ಅನರ್ಥ? ಎಂಬುದನ್ನು ವಾಚಕರು ಗಮನಿಸಲಿ.

**ಯಾಹೀತಿ ತೇನೋಕ್ತ ಉದಾರ ಕರ್ಮಣಾ**
**ಕರ್ಣೋ ಯಯೌ ತಂ ಪ್ರಣಮ್ಯೇಶಿತಾರಮ್ ।**
**ತಥೈಕಲವ್ಯೋಽಪಿ ನಿರಾಕೃತೋಽಮುನಾ**
**ದ್ರೋಣೇನ ತಸ್ಯ ಪ್ರತಿಮಾಂ ವನೇಽರ್ಚಯನ್ ॥೫೯॥**

ಉದಾರ ಹೃದಯಿಗಳಾದ ಪರಶುರಾಮರು ಹೀಗೆ ಹೇಳಿದ ಮೇಲೆ, ಕರ್ಣನು ಅವರಿಗೆ ನಮಸ್ಕರಿಸಿ ಅಲ್ಲಿಂದ ಹೊರಟುಹೋದನು. ಇತ್ತ ಏಕಲವ್ಯನು ಕೂಡ ದ್ರೋಣಾಚಾರ್ಯರಿಂದ ನಿರಾಕೃತನಾದ ಮೇಲೆ, ಅವರ ಪ್ರತಿಮೆಯನ್ನು ಸಿದ್ಧಮಾಡಿ ವನದಲ್ಲಿಯೇ ಪೂಜಿಸತೊಡಗಿದನು.

**ತತಃ ಕದಾಚಿದ್ಧೃತರಾಷ್ಟ್ರ ಪುತ್ರೈಃ**
**ಪಾಂಡೋಃ ಸುತಾ ಮೃಗಯಾಂ ಸಂಪ್ರಯಾತಾಃ ।**
**ಅಗ್ರೇ ಗಚ್ಛನ್ ಸಾರಮೇಯೋ ರುರಾವ**
**ಧರ್ಮಾತ್ಮಜಸ್ಯಾತ್ರವನೇ ಮೃಗಾರ್ಥೀ ॥೬೦॥**

ಒಂದು ದಿನ ಆಕಸ್ಮಾತ್ತಾಗಿ ಕೌರವರು ಪಾಂಡವರು ಕೂಡಿ ಬೇಟೆಗಾಗಿ ಅಡವಿಗೆ ಬಂದರು. ಧರ್ಮರಾಜನ ಬೇಟೆಯ ನಾಯಿಗಳು ಮುಂದೆ ಹೋಗಿ ಜೋರಾಗಿ ಬೊಗಳಹತ್ತಿದವು.

**ಶ್ರುತ್ವಾ ರಾವಂ ಸಾರಮೇಯಸ್ಯ ಕ್ರೂರಾ-**
**ಚ್ಛರೈರ್ಮುಖಂ ಶಬ್ದವೇದಿ ಪ್ರಪೂರೇ ।**
**ಸ ಏಕಲವ್ಯೋ ವ್ರಣಮಸ್ಯ ನಾಕರೋತ್**
**ಶ್ವಾ ಪೂರಿತಾಸ್ಯಃ ಪಾಂಡವಾ ನಭ್ಯಯಾತ್ಸಃ ॥೬೧॥**

ದೂರದಿಂದ ಆ ನಾಯಿಯ ಶಬ್ದವನ್ನು ಕೇಳಿದ ಏಕಲವ್ಯನು, ಶಬ್ದವೇದಿಯನ್ನು ಅರಿತವನಾದ ಕಾರಣ ಅದರ ಬಾಯಿಯನ್ನು ಬಾಣಗಳಿಂದ ತುಂಬಿಬಿಟ್ಟನು. ಆದರೆ ಅದರ ಮುಖಕ್ಕೆ ಯಾವ ಗಾಯವೂ ಆಗಿರಲಿಲ್ಲ. ಬಾಣಗಳಿಂದ ಬಾಯಿಯನ್ನು ತುಂಬಿಕೊಂಡ ಆ ನಾಯಿಯು, ಪಾಂಡವರ ಹತ್ತಿರ ಬಂದಿತು.

ದೃಷ್ಟ್ವಾ ಚಿತ್ರಂ ಕುರವಃ ಪಾಂಡವಾಶ್ಚ
ದೃಷ್ಟುಂ ಕರ್ತಾರಂ ಮಾರ್ಗಯಾಮಾಸುರತ್ರ ।
ದ್ರೋಣಾಕೃತಿಂ ಮೂರ್ತಿಕೀಂ ಪೂಜಯಂತಂ
ಸದೃಶುಶ್ಚೈನಂ ಧನುರೇವಾಭ್ಯ ಸಂತಮ್ ॥೬೨॥

ಈ ವಿಚಿತ್ರವಾದ ಕಾರ್ಯವನ್ನು ಕೌರವರು ಪಾಂಡವರು ನೋಡಿದರು. ಆ ಕಾರ್ಯ ಮಾಡಿದವನನ್ನು ಹುಡುಕುತ್ತ ಮುಂದೆ ನಡೆದರು. ಒಂದು ಸ್ಥಳದಲ್ಲಿ ದ್ರೋಣಾಚಾರ್ಯರ ಮೃತ್ತಿಕೆಯ ಪ್ರತಿಮೆಯನ್ನು ಮಾಡಿ, ಅದನ್ನು ಪೂಜಿಸುತ್ತ ಧನುರ್ವಿದ್ಯಾಭ್ಯಾಸ ಮಾಡುತ್ತಿರುವ ಒಬ್ಬ ಹುಡುಗನನ್ನು ಕಂಡರು.

ಪೈಶಾಚಮೇವೈಷ ಪಿಶಾಚಕೇಭ್ಯಃ
ಪೂರ್ವಂ ವಿವೇದಾಸ್ತ್ರಬೃಂದಂ ನಿಷಾದಃ ।
ದಿವ್ಯಾನ್ಯಸ್ತ್ರಾಣ್ಯಾಪ್ತುಮೇತಾಂ ಚ ಶಿಕ್ಷಾಂ
ದ್ರೋಣಂ ಸದಾ ಪೂಜಯತಿ ಸ್ಮ ಭಕ್ತ್ಯಾ ॥೬೩॥

ಅವನು ಪೈಶಾಚಿಕನಾದುದರಿಂದ ಪಿಶಾಚ ರೀತಿಯಲ್ಲಿಯೇ ಅಭ್ಯಸಿಸಿದನು. ಈ ನಿಷಾದನೇ ಪೂರ್ವದಲ್ಲಿ ದಿವ್ಯಾಸ್ತ್ರಗಳ ಪ್ರಾಪ್ತಿಗಾಗಿ ದ್ರೋಣಾಚಾರ್ಯರ ಹತ್ತಿರ ಬಂದಿದ್ದನು. ಇದನ್ನು ಶಿಕ್ಷೆಯೆಂದು ಭಾವಿಸಿದರೂ ದ್ರೋಣಾಚಾರ್ಯರ ಮೂರ್ತಿಯನ್ನು ಭಕ್ತಿಯಿಂದ ಪೂಜಿಸುತ್ತಿದ್ದನು.

ದೃಷ್ಟ್ವಾ ವಿಶೇಷಂ ತಮಮುಷ್ಯ ಪಾರ್ಥೋ
ದ್ರೋಣಾಯೋಚೇ ತ್ವದ್ವಚೋ (ರೊ) ಮೇ ಮೃಷಾಸೀತ್ ।
ಇತ್ಯುಕ್ತ ಏನಂ ತ್ವಭಿಗಮ್ಯ ದಕ್ಷಿಣಾಂ
ವಿಪ್ರೋ ಯಯಾಚೇ ದಕ್ಷಿಣಾಂಗುಷ್ಠಮೇವ ॥೬೪॥

ಅರ್ಜುನನು ಈ ವಿಚಿತ್ರ ಮತ್ತು ವಿಶೇಷವಾದ ವಿದ್ಯೆಯನ್ನು ನೋಡಿ ಚಕಿತನಾದನು. ದ್ರೋಣರ ಹತ್ತಿರ ಬಂದು, ತಾವು ನನಗೆ ಹೇಳಿದ ಮಾತು ಸುಳ್ಳಾಯಿತಲ್ಲ? ಎಂದು ವಿನಂತಿಸಿಕೊಂಡನು. ಈ ಮಾತನ್ನು ಕೇಳಿದ

ದ್ರೋಣರು ಏಕಲವ್ಯನ ಹತ್ತಿರ ಬಂದು ಗುರುದಕ್ಷಿಣೆಯಾಗಿ ದಕ್ಷಿಣಾಂಗುಷ್ಠವನ್ನೇ (ಬಲಗೈ ಹೆಬ್ಬೆರಳನ್ನೇ) ಕೇಳಿದರು.

ತಸ್ಯ ಪ್ರಸಾದೋಪಚಿತೋರು ಶಿಷ್ಯೋ
ನಿಷಾದೋऽದಾದ್ದಕ್ಷಿಣಾಗುಂಷ್ಠ ಮೆಸ್ಮೈ ।
ತತಃ ಪರಂ ನಾಸ್ಯ ಬಭೂವ ಶಿಕ್ಷಾ
ಸನ್ಮುಷ್ಟಿಹೀನಸ್ಯ ಸಮಾರ್ಜುನೇನ ॥೬೫॥

ಅವರ, (ದ್ರೋಣಾಚಾರ್ಯರ) ಪ್ರಸಾದದಿಂದಲೇ ಈ ಉರುತರವಾದ ವಿದ್ಯೆ ದೊರೆತಿದೆ ಎಂದು ತಿಳಿದು ಕೂಡಲೇ ತನ್ನ ಬಲಗೈಯ ಹೆಬ್ಬೆರಳನ್ನು ಕತ್ತರಿಸಿ ಕೊಟ್ಟನು. ಮುಷ್ಟಿಹೀನನಾದುದರಿಂದ ಅವನು ಅರ್ಜುನನಿಗಿಂತ ಮಿಗಿಲು ಆಗಲಿಲ್ಲ.

ಪುನಃ ಕೃಪಾಲೂ ರೈವತಪರ್ವತೇ ತಂ
ದ್ರೋಣಃ ಪ್ರಾ(ಣೋऽಸ್ಯಾ)ದಾದಸ್ತ್ರವರಾಣಿ ತಸ್ಮೈ ।
ಏಕಾಂತ ಏವಾಸ್ಯ ಭಕ್ತ್ಯಾ ಸುತುಷ್ಟೋ
ಧನ್ವಿಶ್ರೇಷ್ಠಂ ಕೃತವಾನರ್ಜುನಂ ಚ ॥೬೬॥

ಕೃಪಾಳುಗಳಾದ ದ್ರೋಣಾಚಾರ್ಯರು, ಪುನಃ ರೈವತ ಪರ್ವತಕ್ಕೆ ಹೋಗಿ, ಏಕಲವ್ಯನನ್ನು ಕಂಡು, ಅವನ ಏಕಾಂತ ಭಕ್ತಿಗೆ ಮೆಚ್ಚಿ ಸಂತುಷ್ಟರಾಗಿ ಬಿಲ್ಲುವಿದ್ಯೆಯನ್ನು ಕಲಿಸಿ ಶ್ರೇಷ್ಠನನ್ನಾಗಿ ಮಾಡಿದರು. ಆದರೂ ಧನುರ್ವಿದ್ಯೆಯಲ್ಲಿ ಅರ್ಜುನನೇ ಪ್ರಥಮನಾಗಿದ್ದನು.

ವಿ.ವಿ. ಕರ್ಣ ಮತ್ತು ಏಕಲವ್ಯ ಇಬ್ಬರ ಘಟನೆಗಳಿಂದ ನಾವು ಏನನ್ನು ಕಲಿಯಬಹುದು.

೧. ಗುರುಗಳ ಮುಂದೆ ಸುಳ್ಳಾಡಿದರೆ, ಅದರ ಪರಿಣಾಮ ಎಷ್ಟು ಅನರ್ಥಕಾರಿ!

೨. ದೊಡ್ಡವರ ಸೇವೆ ಎಂದಿಗೂ ವ್ಯರ್ಥವಾಗಲಾರದು. ಕರ್ಣನ ಕಪಟ ಮನದಿಂದ ಅದು ಪೂರ್ಣ ಫಲಕಾರಿಯಾಗಲಿಲ್ಲ.

೩. ದೈವದ ಮುಂದೆ ಯಾರ ಆಟವು ನಡೆಯಲಾರದು.

೪. ಏಕಲವ್ಯನು ಮಣ್ಣಿನ ಪ್ರತಿಮೆಯನ್ನಿಟ್ಟು ಪೂಜಿಸಿದರೂ, ಏಕಾಂತ ಭಕ್ತನಾದ ಕಾರಣ, ತನ್ನ ಶ್ರೇಷ್ಠ ಗುರಿಯನ್ನು ಸಾಧಿಸಿದನು. ನಿಶ್ಚಲವಾದ ಭಕ್ತಿಯಿಂದ ಬೇಕಾದುದನ್ನು ಪಡೆಯಬಹುದು. ದೃಢ ಭಕ್ತಿಯೇ ಹರಿ, ಗುರುಗಳ ಪ್ರಸಾದ (ಅನುಗ್ರಹಕ್ಕೆ)ಕ್ಕೆ ಮೂಲಕಾರಣ. ಗುರುಪ್ರಸಾದಕ್ಕೆ ಯಾವುದೂ ಅಲಭ್ಯವಾಗಲಾರದು.

೫. ಗುರುಗಳು ಕೇಳಿದ ಕೂಡಲೇ, ಏನೂ ಯೋಚಿಸದೆ ಏಕಲವ್ಯನು ತನ್ನ ಹೆಬ್ಬೆರಳನ್ನು ಕತ್ತರಿಸಿಕೊಟ್ಟನು. ಇದು ಆತನ ಉತ್ಕಟ ಭಕ್ತಿಯನ್ನು ವ್ಯಕ್ತಗೊಳಿಸುತ್ತದೆ. ಇದರಿಂದಲೇ ಆತನಿಗೆ ಕೀರ್ತಿ ಬಂದದ್ದು, ಹೆಸರು ಅಮರವಾದದ್ದು.

'ದೊಡ್ಡವರ ಹೃದಯ ವಜ್ರಕ್ಕಿಂತಲೂ ಕಠೋರವಾಗಿದ್ದರೂ, ಬೆಣ್ಣೆಗಿಂತ ಮೃದು' ಎಂಬುದನ್ನು ಮರೆಯಬಾರದು. ಗುರುಗಳು ಸಮಾಜದ ಕಟ್ಟಳೆಗಳಿಗೆ ಅಧೀನರಾಗಿ ಮೊದಲು ಕಠೋರವಾಗಿ ವರ್ತಿಸಿದರೂ. ಆದರೆ, ಏಕಲವ್ಯನ ಗುರುಭಕ್ತಿಗೆ ಮಾರುಹೋಗಿ, ಎಲ್ಲ ನಿಯಮಗಳನ್ನು ಮೀರಿ ಅವನಿದ್ದಲ್ಲಿಗೆ ಹೋಗಿ, ಅನುಗ್ರಹಿಸಿ ಅವನಿಗೆ ವಿದ್ಯೆಯನ್ನು ಕಲಿಸಿದರು. ಅಂತೆಯೇ ಅವರು ಕರುಣಾಳುಗಳು.

ಇಲ್ಲಿ ಕೆಲವು ಪ್ರಶ್ನೆಗಳು. ದ್ರೋಣಾಚಾರ್ಯರು ಏಕಲವ್ಯನಿಗೆ ವಿದ್ಯೆಯನ್ನು ಕಲಿಸಿಲ್ಲ. ಅಲ್ಲದೆ ನಿಷಾದ ಎಂದು ತಿರಸ್ಕರಿಸಿಯೂಬಿಟ್ಟಿದ್ದಾರೆ. ಅಂದಮೇಲೆ ಅವರು ಗುರುದಕ್ಷಿಣೆಯಾಗಿ ಏಕಲವ್ಯನಿಂದ ಹೆಬ್ಬೆರಳು ಪಡೆಯಬಹುದೇ? ಅವರಿಗೆ ಅಧಿಕಾರವಿದೆಯೇ? ಏಕಲವ್ಯನನ್ನು ಅಂಗವಿಕಲನನ್ನಾಗಿ ಮಾಡಬಹುದೇ?

ಇವು ಸಹಜವಾದ ಪ್ರಶ್ನೆಗಳೇ.

ಮೇಲಿನ ಘಟನೆಗಳನ್ನು ನೋಡಿದಾಗ, ಕರ್ಣ ಮತ್ತು ಏಕಲವ್ಯ ಇಬ್ಬರೂ ವಿದ್ಯೆಯನ್ನು ಕಲಿಯಲು ದ್ರೋಣರ ಹತ್ತಿರ ಬಂದರು. ದ್ರೋಣರು ತಿರಸ್ಕರಿಸಿದರು. ಅದಕ್ಕೆ ಕಾರಣಗಳನ್ನು ಈಗಾಗಲೆ ಕೊಟ್ಟಾಗಿದೆ. ಕರ್ಣನು ಪ್ರತಿಭಟಿಸಿ ಪರಶುರಾಮರ ಹತ್ತಿರ ಹೋದನು. ಅದರ ವಿವರ ಮೇಲೆ ವಿವರಿಸಿ ಆಗಿದೆ.

ಈಗ ಏಕಲವ್ಯನ ವಿಚಾರ.

ಏಕಲವ್ಯನು ದ್ರೋಣರನ್ನು ಗುರುಗಳನ್ನಾಗಿ ಒಪ್ಪಿಕೊಂಡಿದ್ದಾನೆ. ಅಂತೆಯೇ ಗುರುಗಳು ಕೇಳಿದಾಕ್ಷಣ ಹಿಂದು ಮುಂದು ನೋಡದೆ ಹೆಬ್ಬೆರಳನ್ನು ಕತ್ತರಿಸಿಕೊಟ್ಟಿದ್ದಾನೆ. ಅಲ್ಲಿಗೆ ಆ ಪ್ರಶ್ನೆ ಮುಗಿಯಿತು. ಇಲ್ಲದಿದ್ದಲ್ಲಿ ಇಂದಿನ ಪ್ರಶ್ನೆಗಳನ್ನು ಏಕಲವ್ಯನು ಅಂದೇ ಕೇಳಬಹುದಾಗಿದ್ದಿತು. ಗುರುಭಕ್ತಿಗೆ ತಕ್ಕ ಫಲವೂ ಲಭಿಸಿದೆ. ಅದನ್ನು ವಾಚಕರು ಬಲ್ಲರು.

ದ್ರೋಣರ ಮೇಲಿನ ಆಕ್ಷೇಪಗಳಿಗೆ ಸಮಾಧಾನ.

೧. ದ್ರೋಣರನ್ನು ಗುರುಗಳೆಂದು ಸ್ವೀಕರಿಸಿದ ಮೇಲೆ, ಶಿಷ್ಯರನ್ನು ಕೇಳುವುದು ಗುರುಗಳ ಅಧಿಕಾರ. ಅದಕ್ಕಾಗಿ ಕೇಳಿದರು. ದ್ರೋಣರ ಪ್ರತಿಮೆಯನ್ನೇ ಇಡದೆ, ಏಕಲವ್ಯನು ಅಭ್ಯಾಸ ಮಾಡಿದ ಪಕ್ಷದಲ್ಲಿ ದ್ರೋಣರಿಗೆ ಅಧಿಕಾರ ಇರುತ್ತಿರಲಿಲ್ಲ. ಅವರು ಕೇಳುತ್ತಲೂ ಇರಲಿಲ್ಲ.

ದ್ರೋಣರು ಏಕಲವ್ಯನ ಹೆಬ್ಬೆರಳನ್ನು ಕತ್ತರಿಸುವಂತೆ ಮಾಡಿ ಅವನಿಗೆ ಶಿಕ್ಷೆಯಿತ್ತರು. ಇದಕ್ಕೆ ಕಾರಣ.

ಏಕಲವ್ಯನು ಮೊದಲು ದ್ರೋಣರನ್ನು ವಿದ್ಯೆಯನ್ನು ಕೇಳಿದನು. ಅವರು ನಿರಾಕರಿಸಿದರೂ ಏಕಲವ್ಯನು ಬಿಡಲಿಲ್ಲ. ಅವರಿಗೆ ಹೇಳದೆಯೇ, ಅವರ ಅಪ್ಪಣೆಯನ್ನು ಪಡೆಯದೆಯೇ ವಿದ್ಯೆಯನ್ನು ಕಲಿತನು. ಇದು ನೈತಿಕ ದೃಷ್ಟಿಯಿಂದ ಕಳ್ಳತನ. ಕಳ್ಳನಿಗೆ ಶಿಕ್ಷೆ ಅನಿವಾರ್ಯ. ಗದಾಯುದ್ಧ, ಮಲ್ಲಯುದ್ಧ ಇವುಗಳನ್ನು ಕಲಿತಿದ್ದರೆ, ದ್ರೋಣರಿಗೆ ಅಧಿಕಾರವಿರುತ್ತಿರಲಿಲ್ಲ. ಅವರು ಕೇಳುತ್ತಲೂ ಇರಲಿಲ್ಲ.

ಒಬ್ಬ ಲೇಖಕನು ತನ್ನ ಪುಸ್ತಕವನ್ನು ಬರೆದಿರುವನೆಂದು ಭಾವಿಸಿ, ಅದರ ಮೇಲೆ ಅವನ ಸ್ವಾಮ್ಯ (ಅಧಿಕಾರ) Copyright ಇರುತ್ತದೆ. ಅದನ್ನು ಇನ್ನೊಬ್ಬ ಬಳಸಿದರೆ, ಕಾನೂನಿನ ದೃಷ್ಟಿಯಲ್ಲಿ, ಲೌಕಿಕ ದೃಷ್ಟಿಯಲ್ಲಿ ಅದು ಅಪರಾಧವಾಗುತ್ತದೆ. ಅದಕ್ಕೆ ಶಿಕ್ಷೆ ತಪ್ಪಿದ್ದಲ್ಲ.

ದ್ರೋಣರು ಅದನ್ನೆ ಮಾಡಿದ್ದಾರೆ. ದ್ವೇಷದಿಂದ ಮಾಡಿದ್ದಲ್ಲ. ತಪ್ಪಿಗೆ ತಕ್ಕ ಶಿಕ್ಷೆ ವಿಧಿಸಿದ್ದಾರೆ. ಯಾವ ಬೆರಳಿನಿಂದ ಅಪರಾಧವಾಗಿದೆಯೋ ಅದಕ್ಕೆ ಮಾತ್ರ ಶಿಕ್ಷೆಯನ್ನಿತ್ತಿದ್ದಾರೆ. ಅದರಿಂದ ಅವನು ಅಂಗವಿಕಲನಾಗಿಲ್ಲ. ಮುಂದೆ ಅದೇ ಏಕಲವ್ಯನು ಭಾರತದ ಯುದ್ಧದಲ್ಲಿ ಪಾತ್ರವಹಿಸಿದ್ದಾನೆ.

ಗುರುಗಳು, ಅರ್ಜುನನಿಗೆ, "ಧನುರ್ವಿದ್ಯೆಯಲ್ಲಿ ನಿನ್ನನ್ನು ಶ್ರೇಷ್ಠನನ್ನಾಗಿ ಮಾಡುತ್ತೇನೆ" ಎಂದು ಮೊದಲೇ ವಚನಕೊಟ್ಟಿದ್ದರು. ಅದನ್ನು ಪಾಲಿಸುವುದು ಅವರ ಕರ್ತವ್ಯವಾಗಿತ್ತು.

ಹಿಂದೆ ಶ್ರೀರಾಮಚಂದ್ರನು ಸುಗ್ರೀವನಿಗೆ ವಚನವಿತ್ತ ಕಾರಣ ವಾಲಿಯನ್ನು ಸಂಹರಿಸಲಿಲ್ಲವೇ? ವಚನ ಪರಿಪಾಲನೆ ಮುಖ್ಯ ಕರ್ತವ್ಯ.

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ ಪಂಚದಶೋಽಧ್ಯಾಯ ॥

ಇಲ್ಲಿಗೆ ಶ್ರೀಮದಾನಂದತೀರ್ಥರಿಂದ ರಚಿತವಾದ ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹದಿನೈದನೆಯ ಅಧ್ಯಾಯ ಮುಗಿದುದು

## ಹದಿನೈದನೆಯ ಅಧ್ಯಾಯದ ಚಿಂತನೆ

ಪಾಂಡವರು ಶ್ರೀಕೃಷ್ಣನಲ್ಲಿ ಕೆಲವು ದಿನ ಇದ್ದು, ಅಂದಿನ ಸಮಾಜಕ್ಕೆ ಬೇಕಾದ ಕೆಲವರು ವಿದ್ಯೆಗಳನ್ನು ಕಲಿತು ಕೃಷ್ಣನ ಅಪ್ಪಣೆ ಪಡೆದು ಹಸ್ತಿನಾವತಿಗೆ ಹಿಂದಿರುಗಿದನು.

ಭೀಮನ ಸಾರಥಿ ವಿಶೋಕ. ಅವನು ಸೈರಂಧ್ರಿಯ ಮಗನು. ಸೈರಂಧ್ರಿ ಹಿಂದೆ ಪಿಂಗಳಾ ಎಂಬ ವೇಶ್ಯೆ. ಈಕೆಯ ಚರಿತ್ರೆಯಿಂದ ಭಗವದ್ಭಕ್ತಿಗೂ ಒಂದು ಕಾಲಬೇಕಾಗುತ್ತದೆ. ಕಾಲ ಪಕ್ವವಾದಾಗ ಆ ವಿಚಾರ ತಾನೇ ಬರುತ್ತದೆ. ಅದಕ್ಕೆ ಅನುಕೂಲವೂ ಆಗುತ್ತದೆ ಎಂಬುದು ಶ್ರೀ ಶ್ರೀ ಜಯತೀರ್ಥರು, ಶ್ರೀ ಶ್ರೀ ವಿಷ್ಣುತೀರ್ಥರು, ಬಾಲಕ ಧ್ರುವ ಮೊದಲಾದವರ ಜೀವನ ಚರಿತ್ರೆಗಳಿಂದ ತಿಳಿಯುತ್ತದೆ. ಭಗವದ್ಭಕ್ತಿಗೆ ಕುಲ, ಗೋತ್ರ, ಜಾತಿ, ಮತ, ಲಿಂಗ ಇವು ಯಾವುವು ಅಡ್ಡವಾಗುವುದಿಲ್ಲ. ಪಿಂಗಳೆಯು ಕೇವಲ ಪಶ್ಚಾತ್ತಾಪದಿಂದ ಒಳ್ಳೆಯ ಗತಿಯನ್ನು ಪಡೆದಳು. ಮುಂದೆ ಒಳ್ಳೆಯ ಮಗನನ್ನು ಜಗತ್ತಿಗೆ ಕೊಟ್ಟಳು. ವಿಶೋಕನು ಒಳ್ಳೆಯವರ ಆಶ್ರಯದಲ್ಲಿದ್ದು ಒಳ್ಳೆಯ ವಿದ್ಯೆ ಬದ್ಧಿಗಳನ್ನು ಕಲಿತು ಹರಿಗುರುಗಳ ಕೃಪೆಗೆ ಪಾತ್ರನಾದನು.

ಭೀಮನು ಶುದ್ಧ ಭಾಗವತನು. ಆ ಧರ್ಮಗಳನ್ನು ಎಂದೂ ಮೀರಿದವನಲ್ಲ. ಪ್ರಾರಂಭದಲ್ಲಿ ಪಾಂಡವರಿಗೆ ಶ್ರೀ ವೇದವ್ಯಾಸರೇ ಗುರುಗಳಾದರು.

ಅದೇ ಕಾಲದಲ್ಲಿ ಭರದ್ವಾಜ ಋಷಿಗಳ ಮಕ್ಕಳು ದ್ರೋಣಾಚಾರ್ಯರು ಅದೇ ನಗರದ ಹೊರ ವಲಯದಲ್ಲಿ ಇರುತ್ತಿದ್ದರು. ದ್ರೋಣಾಚಾರ್ಯರ ಮಗ ಅಶ್ವತ್ಥಾಮ. ದ್ರೋಣರು ಅವರು 'ಶಿಲೋಂಛ' ವೃತ್ತಿಯಿಂದ ಜೀವಿಸುತ್ತಿದ್ದರು. ಯಾರಿಲ್ಲೂ ಬೇಡಿದವರಲ್ಲ. ಏನೂ ಸಂಗ್ರಹಿಸಿದವರಲ್ಲ. ಅಶ್ವತ್ಥಾಮನು ಕೌರವರ ಜೊತೆಯಲ್ಲಿ ಆಡುತ್ತಿದ್ದನು. ಮಧ್ಯದಲ್ಲಿ ಕೌರವರು ಮನೆಗೆ ಹೋಗಿ ಉಪಹಾರ ಮಾಡಿ ಹಾಲು ಕುಡಿದು ಬರುತ್ತಿದ್ದರು. ಅಶ್ವತ್ಥಾಮನು ಮನೆಗೆ ಹೋಗಿ ಹಾಲು ಕೇಳಿದಾಗ ತಾಯಿ ಹಿಟ್ಟು ಕಲಿಸಿದ ನೀರನ್ನು ಕೊಡುತ್ತಿದ್ದಳು. ಮಗು ಅದನ್ನೇ ಹಾಲು ಎಂದು ಕುಡಿಯುತ್ತಿತ್ತು. ಒಂದು ದಿನ ಕೌರವರ ಮನೆಗೆ ಹೋಗಿ ನಿಜವಾದ ರಾಜಮನೆತನಕ್ಕೆ ಯೋಗ್ಯವಾದ ಹಾಲನ್ನು ಕುಡಿದು ಹಟ ತೆಗೆಯಿತು. ತಾಯಿಗೂ ಕೆಡಕೆನಿಸಿತು. ಏನೂ ಮಾಡುವಂತಿರಲಿಲ್ಲ. ಇದನ್ನು ಕಂಡ

ದ್ರೋಣಾಚಾರ್ಯರ ಕರುಳು ಕೊರೆಯಿತು, ಮನ ಮರುಗಿತು. ವೃತ್ತಿ ತಪ್ಪಿತು. ಆಕಳನ್ನು ತರಬೇಕೆಂದು ಗುರುಗಳ ಹತ್ತಿರ ಹೋದರು. ಗುರುಗಳು ನನ್ನ ಹತ್ತಿರ ಏನೂ ಉಳಿದಿಲ್ಲ ಎಂದು ಹೇಳಿದಾಗ ಅವರಲ್ಲಿದ್ದ ವಿದ್ಯೆಯನ್ನೇ ಕಲಿತರು. ಗುರುಗಳು ಕೂಡ ಸರ್ವಜ್ಞರಿದ್ದ ಕಾರಣ ಮುಂದಾಲೋಚನೆಯಿಂದ ವಿದ್ಯೆ ಕಲಿಸಿದರು. ೧೨ ವರ್ಷ ಮುಗಿದವು. ಆಕಳು ದೊರೆಯಲಿಲ್ಲ.

ದ್ರುಪದರಾಯನು, ದ್ರೋಣಾಚಾರ್ಯರು ಒಂದೆಡೆ ಅಭ್ಯಾಸ ಮಾಡಿದ್ದರು. ಅವನು ಸ್ನೇಹದ ಭರದಲ್ಲಿ 'ನಾನು ನಿನಗೆ ಅರ್ಧ ರಾಜ್ಯವನ್ನೇ ಕೊಡುತ್ತೇನೆ' ಎಂದು ವಚನವಿತ್ತಿದ್ದ. ರಾಜ್ಯ ಬೇಡ ಒಂದು ಆಕಳನ್ನು ಕೇಳೋಣ ಎಂದು ಅಲ್ಲಿಗೆ ದ್ರೋಣರು ಬಂದರು. ರಾಜರಿಗೂ ಬಡವರಿಗೂ ಗೆಳೆತನವಾಗಲಾರದು ಎಂದು ಅವನು ಹೀಯಾಳಿಸಿ ಅಪಮಾನ ಮಾಡಿದನು. ಆಚಾರ್ಯರ ಸಿಟ್ಟು ನೆತ್ತಿಗೇರಿತು. ಸೇಡಿನ ಭಾವನೆ ಒಡಮೂಡಿತು. ಅವರು ನೇರವಾಗಿ ತಮ್ಮ ಮನೆಕಡೆಗೆ ತಿರುಗಿದರು. ರಾಜಕುಮಾರನನ್ನು ಶಿಷ್ಯರನ್ನಾಗಿ ಮಾಡಿಕೊಂಡರೆ ಉದ್ದೇಶವನ್ನು ಈಡೇರಿಸಬಹುದೆಂದು ಯೋಚಿಸುತ್ತ ಬರುತ್ತಿದ್ದರು.

ಪೊರವಲಯದಲ್ಲಿ ಕೌರವರು, ಪಾಂಡವರು ಆಟವಾಡುತ್ತಿದ್ದರು. ಆಡವಾಡುವಾಗ ಧರ್ಮನ ಮುದ್ರೆಯುಂಗುರ ಮತ್ತು ಚೆಂಡು ಬಾವಿಯಲ್ಲಿ ಬಿದ್ದವು. ತೆಗೆಯಲು ತೊಂದರೆಯಾಗಿತ್ತು. ಭೀಮನು ಮಾತ್ರ ಧೈರ್ಯದಿಂದ 'ನಾನು ಇಳಿದು ತರುತ್ತೇನೆ' ಎಂದು ಹೇಳುವಷ್ಟರಲ್ಲಿ ದ್ರೋಣರು ಅಲ್ಲಿಗೆ ಬಂದರು. ವಿಷಯ ತಿಳಿಯಿತು. 'ನೀವು ಕ್ಷತ್ರಿಯರಾಗಿ ಈ ವಿದ್ಯೆಯನ್ನು ಕಲಿಯಲಿಲ್ಲ, ನಿಮಗೆ ಧಿಕ್ಕಾರವಿರಲಿ' ಎಂದು ಮೂದಲಿಸಿದರು. ಮಂತ್ರದಿಂದ ಧರ್ಭೆಯ ತುದಿಗಳನ್ನು ಜೋಡಿಸಿ, ಬಾವಿಯಲ್ಲಿ ಬಿಟ್ಟು ಚೆಂಡನ್ನು ಮೇಲೆ ತೆಗೆದರು. ಉಂಗುರ ಉಳಿಯಿತು ಮಕ್ಕಳು ಪ್ರಾರ್ಥಿಸಿದರು. ನನಗೆ ಉಪಜೀವನದ ವ್ಯವಸ್ಥೆ ಮಾಡಿದರೆ ತೆಗೆದೇನು ಎಂದರು. ಧರ್ಮರಾಜನು ಒಪ್ಪಿದ, ಉಂಗುರವೂ ಬಂದಿತು.

ಬಾಲಕರು ಬಂದು ಭೀಷ್ಮರಿಗೆ ಈ ವಿಷಯ ತಿಳಿಸಿದರು. ಭೀಷ್ಮರು ಅವರೇ ದ್ರೋಣರು ಎಂದು ನಿಶ್ಚಯಿಸಿ, ಇವರಿಗೆ ಯೋಗ್ಯ ಗುರುಗಳು ಎಂದು ಭಾವಿಸಿ ಮಕ್ಕಳನ್ನು ಕರೆದುಕೊಂಡು ದ್ರೋಣರ ಹತ್ತಿರ ಬಂದರು. ನನ್ನ ಇಚ್ಛೆಯನ್ನು ಯಾರು ಪೂರ್ತಿ ಮಾಡುವಿರೋ ಅವರಿಗೆ ಶ್ರೇಷ್ಠ

ಬಿಲ್ಲುಗಾರನನ್ನಾಗಿ ಮಾಡುತ್ತೇನೆ ಎಂದು ಹೇಳಿದಾಗ, ಅರ್ಜುನನು ಪ್ರತಿಜ್ಞೆ ಮಾಡಿದನು. ಅಭ್ಯಾಸ ಪ್ರಾರಂಭವಾಯಿತು. ಸಕಲ ರಾಜಕುಮಾರರು ಬಂದು ಸೇರಿದರು. ಕರ್ಣ ಮತ್ತು ಏಕಲವ್ಯರೂ ವಿದ್ಯೆ ಕಲಿಯಲು ಬಂದರು. 'ನೀನು ನಿಷಧ, ನೀನು ಸೂತ' ಎಂದು ನಿರಾಕರಿಸಿದರು. ಇದು ಸರಿಯೇ ತಪ್ಪೇ? ಸಾಕಷ್ಟು ಚರ್ಚಿಸಿ ಆಗಿದೆ.

ಕರ್ಣನು ಪರಶುರಾಮರ ಹತ್ತಿರ ಹೋಗಿ 'ನಾನು ವಿಪ್ರ' ಎಂದು ಹೇಳಿ ವಿದ್ಯೆ ಕಲಿತನು. ಆದರೆ ಇಂದ್ರನ ಯುಕ್ತಿಯಿಂದ ಕರ್ಣನ ಬಣ್ಣ ಬಯಲಾಯಿತು. ಗುರುಗಳಿಂದ ಶಾಪಪಡೆದು ಹಿಂದಿರುಗಬೇಕಾಯಿತು?

ಇತ್ತ ಏಕಲವ್ಯನು ದ್ರೋಣರ ಮೂರ್ತಿಯನ್ನು ಮಾಡಿ ಪೂಜಿಸಿ ಭಕ್ತಿಯಿಂದ ವಿದ್ಯೆ ಕಲಿತ ಶ್ರೇಷ್ಠ ಬಿಲ್ಲುಗಾರನೂ ಆದನು. ಒಂದು ದಿನ ಪಾಂಡವರು ಬೇಟೆಗಾಗಿ ಅಡವಿಗೆ ಹೋದಾಗ ಅವರ ನಾಯಿಯ ಬಾಯಿಗೆ ಬಾಣಗಳನ್ನು ಬಿಟ್ಟಿ ಅದನ್ನು ಬೊಗಳದಂತೆ ಮಾಡಿದ್ದನು. ಅದರ ಮುಖಕ್ಕೆ ಒಂದು ಗಾಯವೂ ಆಗಿರಲಿಲ್ಲ. ಆಗ ಅವರು ಅದನ್ನು ಪತ್ತೆ ಹಚ್ಚಬೇಕೆಂದು ಅಡವಿಯಲ್ಲಿ ನಡೆದರು. ಏಕಲವ್ಯನನ್ನು ದ್ರೋಣರ ಮೂರ್ತಿಯನ್ನು ಕಂಡರು. ಅರ್ಜುನನು, ಏನು ಗುರುಗಳೇ ತಮ್ಮ ಪ್ರತಿಜ್ಞೆ ಸುಳ್ಳಾಯಿತಲ್ಲ. ಈ ಬಾಲಕನು ನನ್ನನ್ನು ಮೀರಿಸುತ್ತಾನೆ ಎಂದನು. ಕೂಡಲೇ ದ್ರೋಣರು ಬಾಲಕನ ಹತ್ತಿರ ಹೋಗಿ ಗುರುದಕ್ಷಿಣೆಯಾಗಿ ಹೆಬ್ಬೆರಳನ್ನು ಕೇಳಿದರು. ಆ ಬಾಲಕನು ಒಳ್ಳೆಯ ಭಕ್ತಿಯಿಂದ ಅದನ್ನು ಕತ್ತರಿಸಿ ಅರ್ಪಿಸಿಯೇಬಿಟ್ಟನು. ಈ ಘಟನೆಯನ್ನು ಕುರಿತು ಸಾಕಷ್ಟು ಚರ್ಚಿಸಿ ಆಗಿದೆ.

ದ್ರೋಣರು ಯಾವ ಉನ್ನತ ಮತ್ತು ಆದರ್ಶಮಟ್ಟದಲ್ಲಿದ್ದರು. ಕೇವಲ ಒಂದು ಮೋಹಕ್ಕೆ ವಶರಾಗಿ ಯಾವ ಮಟದಲ್ಲಿ ಇಳಿದರು ಎಂಬುದು ತಿಳಿದಾಗ ಅರಿಷಡ್ವರ್ಗಗಳಿಗೆ ವಶನಾದವನ ಪಾಡೇನು ಎಂಬುದು ಓದುಗರೇ ಊಹಿಸಬೇಕು. ಇವೆಲ್ಲಕ್ಕೂ ದೇವರ ಇಚ್ಛೆಯೇ ಮುಖ್ಯ ಕಾರಣ ಎಂದು ಹೇಳದೆ ಬೇರೆ ಮಾರ್ಗವೇ ಇಲ್ಲ.

---0---

# ಶ್ರೀ ಗುರುಭ್ಯೋ ನಮಃ
# ಅಧ್ಯಾಯ ಹದಿನಾರು

ಹಿಂದಿನ ಅಧ್ಯಾಯಗಳಲ್ಲಿ ಕಂಸನನ್ನು ಶ್ರೀ ಕೃಷ್ಣನು ಕೊಂದನು. ಅದರಿಂದ ಕಂಸನ ಹೆಂಡಿಂದಿರು ವಿಧವೆಯರಾದರು. ಅವರೇ ಜರಾಸಂಧನ ಮಕ್ಕಳು. ಮಕ್ಕಳ ದುಃಖವನ್ನು ಕೇಳಿದ ಜರಾಸಂಧನು ಸೇಡನ್ನು ತೀರಿಸಲು ಕೃಷ್ಣನ ಮೇಲೆ ಯುದ್ಧ ಸಾರಿದನು. ಅನೇಕ ಸಲ ಸೋತುಸುಣ್ಣವಾಗಿ ಹಿಂದಿರುಗಿದನು. ಅಲ್ಲದೆ ಯುದ್ಧದಲ್ಲಿ ಬಹಳ ನಷ್ಟವನ್ನೂ ಅನುಭವಿಸಿದನು. ಈಗ ತನಗೆ ಕಾಲ ಸರಿಯಲ್ಲ. ಕಾಲಬರುವವರೆಗೆ ಕಾಯುವುದೇ ಒಳಿತು ಎಂದು ಸುಮ್ಮನಾದನು. ಆದರೂ ಕೃಷ್ಣನ ಬಗೆಗೆ ದ್ವೇಷವು ಬೂದಿಮುಚ್ಚಿದ ಕೆಂಡವಾಗಿತ್ತು.

ಇತ್ತ ಕೌರವರು ಪಾಂಡವರು ಬೆಳೆಯ ಹತ್ತಿದರು. ಬಾಲ್ಯದಲ್ಲಿಯೇ ಕೌರವರು ಪಾಂಡವರನ್ನು ದ್ವೇಷಿಸಹತ್ತಿದರು. ಭೀಮನಲ್ಲಿ ಅವರಿಗೆ ದ್ವೇಷ ಅಧಿಕವಾಗಿತ್ತು. ಭೀಮನನ್ನು ಕೊಲ್ಲಲು ನಾನಾ ಉಪಾಯಗಳನ್ನು ಮಾಡಿದರೂ ಯಾವುವೂ ಫಲಿಸಲಿಲ್ಲ. ಕೊನೆಗೆ ಪಾಂಡವರಿಗೆ ಸಹಾಯಕನಾದ ಕೃಷ್ಣನನ್ನೇ ಸಂಹರಿಸಿದರೆ, ಪಾಂಡವರು ತಾವಾಗಿಯೇ ಶಕ್ತಿಹೀನರಾಗುತ್ತಾರೆ. ಆಗ ನಮ್ಮ ಉದ್ದೇಶ ಈಡೇರುತ್ತದೆ ಎಂದು ನಿಶ್ಚಯಿಸಿದರು. ಕೃಷ್ಣನನ್ನು ಕೊಲ್ಲುವುದು ಹೇಗೆ ಎಂದು ಯೋಚಿಸಿ, ಜರಾಸಂಧನ ಹತ್ತಿರ ಹೋದರು. ಜರಾಸಂಧನು ಅದನ್ನೆ ಕಾಯುತ್ತಿದ್ದನು. ಈಗ ಅವನಿಗೆ ರೆಕ್ಕೆ ಚಿಗುರಿದಂತಾದವು. ಪುನಃ ಅವನು ಕೃಷ್ಣನೊಡನೆ ಯುದ್ಧಕ್ಕೆ ಸಿದ್ಧನಾದನು. ಅಧ್ಯಾಯ ಹದಿನಾರು.

ಹರಿಃ ಓಂ. ಕಾಲೇ ತ್ವೇತಸ್ಮಿನ್ನುಯ ಏನಾಖಿಲೈಶ್ಚ  
ನೃಪೈರ್ಯುಕ್ತೋ ಮಾಗಧೋ ಯೋದ್ಧು ಕಾಮಃ ।  
ಪ್ರಾಯಾದ್ಯದೂಂಸ್ತತ್ರ ನಿತ್ಯವ್ಯಯಾತಿ  
ಬಲೈಶ್ಚಯೋಽಪೀಚ್ಛ ಯಾಗಾತ್ಸ ಕೃಷ್ಣಃ ॥೧॥

ಅದೇ ಕಾಲದಲ್ಲಿ ಮಗಧ ದೇಶದ ರಾಜ ಜರಾಸಂಧನು, ತನ್ನ ಅಧೀನರಾದ ರಾಜರನ್ನು ಕೂಡಿಕೊಂಡವನಾಗಿ, ಯುದ್ಧ ಕಾಮನೆಯಿಂದ ನಿತ್ಯನೂ, ಅವ್ಯಯನೂ, ಬಲ ಐಶ್ವರ್ಯಪೂರ್ಣನೂ ಆದ ಕೃಷ್ಣನ ಮೇಲೆ ದಂಡೆತ್ತಿ ಬಂದನು. ಅದನ್ನು ಕಂಡ ಶ್ರೀ ಕೃಷ್ಣನು ತಾನು ಸರ್ವ ಸಮರ್ಥನಾದರೂ ಲೋಕಕ್ಕೆ ನೀತಿ ಬೋಧಿಸುವ ನಿಮಿತ್ತದಿಂದ ಸ್ವಇಚ್ಛೆಯಿಂದಲೇ ನಗರವನ್ನು, ಯಾದವರನ್ನು ಬಿಟ್ಟು ದೂರ ಹೋದನು.

**ಸಂದರ್ಶಯನ್ನಲಿನಾ ಮಲ್ಪಸೇನಾ-**
**ದ್ಯುಪಸ್ಕರಾಣಾಂ ಬಹುಲೋಪಸ್ಕರ್ಶ್ಚ।**
**ಪ್ರಾಪ್ತೇ ವಿರೋಧೇ ಬಲಿಭಿರ್ನೀತಿಮಗ್ರ್ಯಾಂ**
**ಯಯೌ ಸರಾಮೋ ದಕ್ಷಿಣಾಂಶಾಂ ರಮೇಶಃ ॥೨॥**

"ಅಲ್ಪ ಸೇನೆಯುಳ್ಳವರ ಮೇಲೆ ಬಲಶಾಲಿಗಳು ಆಕ್ರಮಣ ಮಾಡಿದರೆ, ಸ್ಥಳಾಂತರಿಸುವುದು ಉತ್ತಮ" ಈ ನೀತಿಯನ್ನು ಜಗತ್ತಿಗೆ ತೋರಿಸಿಕೊಡುವುದಕ್ಕಾಗಿ ಶ್ರೀಕೃಷ್ಣನು ಬಲರಾಮನ ಸಹಿತನಾಗಿ ದಕ್ಷಿಣ ದಿಕ್ಕಿಗೆ ನಡೆದನು.

ವಿ.ವಿ. "ಶ್ರೀಕೃಷ್ಣನು ಅಂಜಿ ಹೋದವನಲ್ಲ. ಒಬ್ಬ ವ್ಯಕ್ತಿಯ ಕಾರಣದಿಂದ, ನಗರಕ್ಕೆ ಅನೇಕ ಜನರಿಗೆ ತೊಂದರೆಯಾಗಬಾರದು" ಎಂಬ ಉದ್ದೇಶದಿಂದ ಎಂದು ತಿಳಿಯತಕ್ಕದ್ದು.

**ಸೋಽನಂತ ವೀರ್ಯೋಃ ಪರಮೋಽಭಯೋಽಪಿ**
**ನೀತ್ಯೈ ಗಚ್ಛನ್ಭಾರ್ಗವ ಮದಗ್ನ್ಯಂ ದದರ್ಶ।**
**ಕ್ರೀಡಾರ್ಥಮೇಕೋಽಪಿ ತತೋಽತಿ ದುರ್ಗಂ**
**ಶ್ರುತ್ವಾ ಗೋಮಂತಂ ತತ್ರಯಯೌ ಸಹಾಗ್ರಜಃ ॥೩॥**

ಶ್ರೀ ಕೃಷ್ಣನು ಅನಂತವೀರ್ಯನು, ಸರ್ವೋತ್ತಮನು, ಭಯರಹಿತನು. ಆದರೂ ವಿಡಂಬನೆಗಾಗಿ ಜಮದಗ್ನಿಯ ಮಗನಾದ ಪರಶುರಾಮನಲ್ಲಿಗೆ ನಡೆದನು. ಇದೂ ಒಂದು ಲೀಲೆಯೇ. ಪರಶುರಾಮನು ಗೋಮಂತಕ

ಪರ್ವತದಲ್ಲಿರುತ್ತಿದ್ದನು. ಆ ಪರ್ವತವು ಅತಿ ದುರ್ಗಮವಾಗಿತ್ತು. ಶ್ರೀಕೃಷ್ಣನು ಅಣ್ಣನ್ನು ಕೂಡಿಕೊಂಡು ಅಲ್ಲಿಗೆ ಬಂದನು.

೧. ವಿ.ವಿ. ಪರಶುರಾಮನು ಬೇರೆಯಲ್ಲ. ನಾರಾಯಣನ ಒಂದು ರೂಪ ಕೃಷ್ಣನಾದರೆ, ಪರಶುರಾಮನದು ಮತ್ತೊಂದು ರೂಪ. ತತ್ತ್ವದಲ್ಲಿ ಇಬ್ಬರೂ ಒಂದೆ. 'ಅವತಾರಗಳಲ್ಲಿ ಭೇದವಿಲ್ಲ'. ಅಂದರೆ ಏಕೆ ಬಂದನು.

೨. ಒಬ್ಬರಿಗಿಂತ ಇಬ್ಬರು ಲೇಸು. ಅಂದರೆ ತನಗೆ ಎಷ್ಟು ತಿಳಿದರೂ ಇನ್ನೊಬ್ಬರೊಂದಿಗೆ ಆಲೋಚಿಸಿ ಕಾರ್ಯಮಾಡುವುದು ಉತ್ತಮ. ಇದು ನೀತಿ.

೩. ಪ್ರಸಂಗ ಬಂದಾಗ ಸುರಕ್ಷಿತವಾದ ಸ್ಥಳದಲ್ಲಿ ಆಶ್ರಯಪಡೆಯುವುದು ಹಿತಕರ. ಯುದ್ಧಪ್ರಸಂಗದಲ್ಲಿ ಇನ್ನೂ ಹೆಚ್ಚು ಲಾಭದಾಯಕ.

**ತದಾ ದುಗ್ಧಾಬ್ಧೌ ಸಂಸ್ಥಿತಿಸ್ಥೈಃ ಸುರಾದ್ಯೈಃ**
**ಪೂಜಾಂ ಪ್ರಾಪ್ತುಂ ಸ್ಥಾನಮೇಷಾಂ ಚ ಯೋಗ್ಯಮ್ ।**
**ಮುಕ್ತ ಸ್ಥಾನಾದಪ ನಾರಾಯೋಽಜೋ**
**ಬಲಶ್ಚಾಗಾತ್ರತ್ತ ಸಂದ್ರಷ್ಟು ಮೀಶಮ್ ॥೪॥**

ಆ ಸಮಯದಲ್ಲಿ ಕ್ಷೀರಸಮುದ್ರದಲ್ಲಿ ವಾಸಿಸಿರುವ ನಾರಾಯಣನು, ಆಯಾ ದೇವತೆಗಳ ಯೋಗ್ಯತೆಗಳಿಗನುಸಾರವಾಗಿ ಸ್ಥಾನಗಳನ್ನು ಕಲ್ಪಿಸಿ ಕೊಟ್ಟಿದ್ದನು. ಮುಕ್ತರಾದವರಿಗೂ ಸ್ಥಾನಗಳನ್ನು ಏರ್ಪಡಿಸಿದ್ದನು. ಎಲ್ಲರೂ ತಮ್ಮ ತಮ್ಮ ಅರ್ಹತೆಯಂತೆ ಪೂಜೆಗಳನ್ನು ಸಲ್ಲಿಸುತ್ತಿದ್ದರು. ಅಲ್ಲಿಗೆ ಬಲಿಚಕ್ರವರ್ತಿ ನಾರಾಯಣನ ಸಂದರ್ಶನಕ್ಕೆ ಬಂದನು.

ವಿ.ವಿ. ಇಲ್ಲಿ ದೇವತೆಗಳಲ್ಲೂ ತರತಮ ಭಾವವಿದೆ. ಪೂಜಿಸುವುದರಲ್ಲೂ ವ್ಯತ್ಯಾಸವಿದೆ ಎಂಬುದನ್ನು ಸೂಚ್ಯವಾಗಿ ಸೂಚಿಸಲಾಗಿದೆ.

**ತತ್ರಾಸುರಾವೇಶ ಮಮುಷ್ಯ ವಿಷ್ಣುಃ**
**ಸಂದರ್ಶಯನ್ ಸುಪ್ರಹೀಗೋಽಪಿ ನಿತ್ಯಮ್ ।**

**ಸಂಸುಪ್ತ ವಚ್ಛಶ್ಚ ಉದಾರ ಕರ್ಮಾ**
**ಸಂಚ್ಛಾಯೈ ದೇವಾನಾಂ ಮುಖಮೀಕ್ಷಾ ಪ್ರಮೇಯಃ ॥ ೫ ॥**

ಬಲಿಚಕ್ರವರ್ತಿಯಲ್ಲಿಯ ಅಸುರಾವೇಶವನ್ನು ಸಂದರ್ಶಿಸುವುದಕ್ಕಾಗಿ, ಶ್ರೀವಿಷ್ಣು, ತಾನು ಉದಾರ ಕರ್ಮಿಯಾಗಿಯೂ, ನಿತ್ಯನಾಗಿಯೂ, ನಿದ್ರಾಹೀನನಾಗಿದ್ದರೂ ಕೂಡ, ನಿದ್ರೆ ಬಂದವನಂತೆ ನಟಿಸಿದನು. ಅದರಂತೆ ದೇವತೆಗಳಿಗೂ ಸಂಜ್ಞೆಯಿತ್ತನು. (ಅವರೂ ಕಣ್ಣು ಮುಚ್ಚಿದರು.)

**ದೇವಾಶ್ಚ ತದ್ಭಾವವಿದೋಽ ಖಿಲಾಶ್ಚ**
**ನಿಮೀಲಿತಾಕ್ಷಾಃ ಶಯನೇಷು ಶಿಶ್ಯರೇ ।**
**ತದಾ ಬಲಿಸ್ತಸ್ಯ ವಿಷ್ಣೋಃ ಕಿರೀಟ–**
**ಮಾದಾಯಾಗಾಜ್ಜಹಸುಃ ಸರ್ವದೇವಾಃ ॥ ೬ ॥**

ಶ್ರೀಹರಿಯ ಭಾವನೆಯನ್ನು ಅರಿತವರಾಗಿ ಸಕಲ ದೇವತೆಗಳು ತಮ್ಮ ಕಣ್ಣುಗಳನ್ನು ಮುಚ್ಚಿ ಹಾಸಿಗೆಯಲ್ಲಿ ಮಲಗಿದ್ದವರಂತೆ ನಟಿಸಿದರು. ಆಗ ಬಲಿಚಕ್ರವರ್ತಿಯು ವಿಷ್ಣುವಿನ ಕಿರೀಟವನ್ನು ತೆಗೆದುಕೊಂಡು ಹೋದನು. ಇದನ್ನು ನೋಡಿದ ಎಲ್ಲಾ ದೇವತೆಗಳೂ ನಕ್ಕರು.

**ನಾರಾಯಣೇ ಸರ್ವದೇವೈಃ ಸಮೇತೇ**
**ಬ್ರಹ್ಮಾದಿಭಿರ್ಹಾಸಮಾನೇ ಸುಪರ್ಣಃ ।**
**ಗತ್ವಾ ಪಾತಾಲಂ ಯುಧಿಜಿತ್ವಾ ಬಲಿಂ ಚ**
**ಕಿರೀಟ ಮಾದಾಯಾಭ್ಯಯಾದ್ಯತ್ರ ಕೃಷ್ಣಃ ॥ ೭ ॥**

ನಾರಾಯಣನು, ಸಕಲ ದೇವತೆಗಳು, ಬ್ರಹ್ಮನು ಕೂಡ ಜೋರಾಗಿ ನಗಹತ್ತಿದರು. ಇದನ್ನು ಕಂಡ ಗರುಡನು, ಪಾತಾಳ ಲೋಕದವರೆಗೆ ಬೆನ್ನುಹತ್ತಿ, ಅಲ್ಲಿದ್ದ ಬಲಿಯೊಡನೆ ಯುದ್ಧ ಮಾಡಿ, ಅವನನ್ನು ಗೆದ್ದು ಆ ಕಿರೀಟವನ್ನು ತೆಗೆದುಕೊಂಡು ಶ್ರೀಕೃಷ್ಣನಿದ್ದಲ್ಲಿಗೆ ಬಂದನು.

**ತತ್ರಸ್ಯ ಶೀರ್ಷ್ಣಿ ಪ್ರತಿಮುಚ್ಯ ನತ್ವಾ**
**ಖಗಃ ಸ್ತುತ್ವಾ ದೇವದೇವಂ ರಮೇಶಮ್ ।**
**ಸ್ಮೃತ ಆಗಚ್ಛೇ ತ್ಯೇವ ವಿಸರ್ಜಿತೋಽಮುನಾ**
**ಯಯೌ ದುಗ್ಧಾಬ್ಧಿಂ ಯತ್ರನಾರಾಯಣೋಽಸೌ ॥೮॥**

ಆ ಕಿರೀಟವನ್ನು ಶ್ರೀಕೃಷ್ಣನ ತಲೆಯ ಮೇಲಿಟ್ಟಾಗ ಅದು ಆತನ ತಲೆಗೆ ಚೆನ್ನಾಗಿ ಹೊಂದಿಕೊಂಡಿತು. ಆಗ ಗರುಡನು, ದೇವತೆಗಳಿಗೆ ಒಡೆಯನಾದ ರಮೇಶನನ್ನು, ಸ್ತುತಿಸಿ, ನಮಿಸಿ ಪ್ರಾರ್ಥಿಸಿದನು. "ಸ್ಮರಿಸಿದಾಗ ಬಂದುಬಿಡು". ಈ ರೀತಿ ಕೃಷ್ಣನಿಂದ ಅಪ್ಪಣೆಯನ್ನು ಪಡೆದು ಕ್ಷೀರಸಮುದ್ರದಲ್ಲಿ ನಾರಾಯಣನು ಇದ್ದಲ್ಲಿಗೆ ಬಂದನು. ಅಲ್ಲಿಯೂ ಕಿರೀಟವು ಕಾಣಿಸಿಕೊಂಡಿತು.

**ಕಿರೀಟಂ ತತ್ಕೃಷ್ಣರಣಮೂರ್ಧ್ನಿ ಪ್ರವಿಷ್ಟಂ**
**ತತ್ತುಲ್ಯ ಮಾಸೀತ್ತಸ್ಯ ರೂಪೇಷ್ವಭೇದಾತ್ ।**
**ತದಿಚ್ಛಯಾ ಚೈವ ನಾರಾಯಣಸ್ಯ**
**ಶೀರ್ಷ್ಣ್ಯಾಪೀದ್ಯುಗ ಪದುಗ್ಧವಾರ್ಧೌ ॥ ೯ ॥**

ಶ್ರೀ ಕೃಷ್ಣನ ತಲೆಯಲ್ಲಿ ಕೂಡಿಸಿದ ಕಿರೀಟವು, ನಾರಾಯಣನ ತಲೆಯ ಮೇಲಿದ್ದ. ಕೀರಿಟಗಳು ಒಂದೇ ಆಗಿದ್ದವು. ಅಲ್ಲದೆ ಎರಡೂ ಕಿರೀಟಗಳು ಏಕಕಾಲಕ್ಕೆ ಒಂದೇ ರೀತಿಯಾಗಿ ಕಾಣಿಸಿಕೊಂಡವು.

ಇದರಿಂದ ಮೂಲರೂಪ ನಾರಾಯಣನಿಗೂ, ಆತನ ಅವತಾರ ರೂಪಗಳಿಗೂ ಭೇದವಿಲ್ಲ ಎಂದು ಸಿದ್ಧವಾಯಿತು.

ವಿ.ವಿ. ಶ್ರೀಮದಾಚಾರ್ಯರಿಗೆ ಈ ಪ್ರಸಂಗವನ್ನು ವಿವರಿಸಲು ಕಾರಣವೇನಿದ್ದಿತು? ಸಮಾಧಾನ.

ತ್ರೇತಾಯುಗದಲ್ಲಿಯೇ, ರಾಮಾವತಾರದ ಕಾಲಕ್ಕಾಗಲೇ ಕೆಲವು ಅಜ್ಞಾನಿಗಳಲ್ಲಿ 'ರಾಮನು ಬೇರೆ, ನಾರಾಯಣನು ಬೇರೆ' ಎಂಬ ಭಾವನೆಯ

ಬೀಜಾಂಕುರವಾಗಿತ್ತು. ಅದಕ್ಕಾಗಿಯೇ ಪರಶುರಾಮರು ಬಂದು ಶ್ರೀರಾಮನೊಡನೆ ಯುದ್ಧಮಾಡಿದಂತೆ ನಟಿಸಿ, ವಿಷ್ಣುಧನುಸ್ಸನ್ನು ರಾಮನಿಗೆ ಒಪ್ಪಿಸಿ, ಶ್ರೀರಾಮನೇ ನಾರಾಯಣನು ಎಂದು ಮನದಟ್ಟು ಮಾಡಿಕೊಟ್ಟಿದ್ದನು.

ದ್ವಾಪರದಲ್ಲಂತೂ ಕಲಿಯ ಪ್ರಭಾವದಿಂದ, ಆ ಭಾವನೆ ಅಂಕುರಿಸಿ ಮೇಲೆ ಬಂದಿತ್ತು. ಅನೇಕ ಮಂದಮತಿಗಳೂ, "ಶ್ರೀಕೃಷ್ಣನು ಒಬ್ಬ ಮಾನವ, ಈತನು ನಾರಾಯಣನ ಅವತಾರವಲ್ಲ" ಎನ್ನುವ ಮಟ್ಟಕ್ಕೆ ಬಂದಿದ್ದರು. ಕೆಲವು ಪಂಡಿತರು ಆ ರೀತಿಯ ಗ್ರಂಥಗಳನ್ನು ರಚಿಸಿದ್ದರು. ಅದನ್ನು ನೋಡಿದ ಆಚಾರ್ಯರು ಈ ಪ್ರಸಂಗವನ್ನು ಎತ್ತಿ ತೋರಿ, ಚೆನ್ನಾಗಿ ವಿವರಿಸಿ, ಜನರ ತಪ್ಪು ಕಲ್ಪನೆಯನ್ನು ದೂರ ಮಾಡಿದರು.

"ಈ ಘಟನೆಯಿಂದ, ಶ್ರೀಕೃಷ್ಣನು ಬೇರೆಯಲ್ಲ, ನಾರಾಯಣನು ಬೇರೆ ಯಲ್ಲ. ಅವತಾರ ರೂಪಕ್ಕೂ ಮೂಲರೂಪಕ್ಕೂ ಭೇದವನ್ನು ತಿಳಿಯ ಬಾರದು" ಎಂಬ ಸಿದ್ಧಾಂತವನ್ನು ಸ್ಥಿರಪಡಿಸಿದರು. ಅಷ್ಟೇ ಅಲ್ಲ,

"ನಾರಾಯಣನ ಆಭರಣಗಳು, ಆಭೂಷಣಗಳು ಜಡಪದಾರ್ಥ ಗಳಲ್ಲ, ಅವು ಅಂಶಿ, ಅಂಶ ಭಾವದಿಂದ ಕೂಡಿರುತ್ತವೆ. ಏಕಕಾಲದಲ್ಲಿ ಅನಂತವಾಗಬಲ್ಲವು" ಎಂಬ ತತ್ವವನ್ನೂ ಸ್ಪಷ್ಟಪಡಿಸಿದ್ದಾರೆ.

**ಪೂರ್ವಂ ಪ್ರಾಪ್ತಾನ್ಯೇವ ದಿವ್ಯಾಯುಧಾನಿ**
**ಪುನರ್ವೈಕುಂಠಂ ಲೋಕಮಿತಾನಿ ಭೂಯಃ ।**
**ತದಾವ ತೇರುೋ ರೌಹಿಣೇ ಯಸ್ಯ ಚೈವಂ**
**ಭಾರ್ಯಾಪ್ತ್ಯಾಗಾದ್ವಾರುಣೇ ನಾಮ ಪೂರ್ವಾ ॥೧೦॥**

ಮೊದಲು ವೈಕುಂಠದಿಂದ ಬಂದ ದಿವ್ಯಾಯುಧ ಇತ್ಯಾದಿಗಳು ಹಿಂದಿರುಗಿ ವೈಕುಂಠಕ್ಕೆ ಹೋಗಿದ್ದವು. ಅವೆಲ್ಲವೂ ಇಂದು ಭೂಲೋಕದಲ್ಲಿ ಈ ಪರ್ವತದ ಮೇಲೆ ಬಂದಿವೆ. ಬಲರಾಮನ ಆಯುಧಗಳು ಇಲ್ಲಿಗೆ

ಆಗಮಿಸಿವೆ. ಬಲರಾಮ ಮೂಲಸ್ವರೂಪದ ಹೆಂಡತಿ ವಾರುಣಿ. ಆಕೆಯೂ ಕೂಡ ಇಂದು ಇಲ್ಲಿ ಅವತರಿಸಿದ್ದಾಳೆ.

**ಸೈವಾಪರಂ ರೂಪಮಸ್ಥಾಯ ಚಾಗಾತ್**
**ಶ್ರೀರಿತ್ಯಾಖ್ಯಂ ಸೇಂದಿರಾವೇಶ ಮಗ್ಯಮ್ ।**
**ಕಾಂತಿಶ್ಚಾಗಾತ್ತಸ್ಯ ಸೋಮಸ್ಯ ಚಾನ್ಯಾ**
**ಭಾರ್ಯಾದ್ವಯೋಃ ಪೂರ್ವತನಾಸುರೂಪಾ ॥೧೧॥**

ಆ ವಾರುಣಿಯು ಇಂದು ಶ್ರೀ ಎಂಬ ಹೆಸರಿನಿಂದ ಲಕ್ಷ್ಮಿದೇವಿಯರ ಆವೇಶ ಹೊಂದಿ ಬಂದಿದ್ದಾಳೆ. ಈತನ ಇನ್ನೊಬ್ಬ ಹೆಂಡತಿ 'ಕಾಂತಿ' ಎಂಬುವಳು. ಸೋಮನ ಹೆಂಡತಿ ಕಾಂತಿ ಬೇರೆ. ಬಲರಾಮನ ಇಬ್ಬರ ಮಡದಿಯರು ಮೂಲರೂಪದವರೇ ಸುಂದರರೂ ಕೂಡ.

**ತಾಭೀ ರಾಮೋ ಮುಮುದೇ ತತ್ರ ತಿಷ್ಠನ್**
**ಶಶಾಂಕ ಪೂಗೋದ್ರಿಕ್ತ ಕಾಂತಿಃ ಸುಧಾಮಾ ।**
**ತಸ್ಯಾ ವಾರುಣ್ಯಾಃ ಪ್ರತಿಮಾ ಪೇಯರೂಪಾ**
**ಕಾದಂಬರೀಂ (ರೀ) ವಾರುಣೀಂ (ಣೀ) ತಾಂ ಪಪೌಸಃ ॥೧೨॥**

ಬಲರಾಮನು ಚಂದ್ರನ ಪ್ರಕಾಶಕ್ಕೂ ಮಿಕ್ಕಿದ ಕಾಂತಿಯನ್ನು ಉಪಭೋಗಿಸುತ್ತ ಸುಖವಾಗಿದ್ದಾನೆ. ವಾರುಣಿಯು ಅಲ್ಲಿರುವ ಕದಂಬ ವೃಕ್ಷದಿಂದ, 'ಕಾದಂಬರಿ' ಎಂಬ ಪೇಯ ರೂಪದಿಂದ ಹೊರಬಂದಿದ್ದಾಳೆ. ಬಲರಾಮನು ಆ ಪೇಯವನ್ನು ಪಾನ ಮಾಡಿ ಆನಂದಿಸಿದ್ದಾನೆ. (ಕಾಂತಿ ಮತ್ತು ಕಾದಂಬರಿ ಇಬ್ಬರೂ ಬಲರಾಮನಿಗೆ ಪ್ರಾಪ್ತರಾಗಿದ್ದಾರೆ.)

**ಏವಂ ತಯೋಃ ಕ್ರೀಡತೋಸ್ಸ್ವೈರಮತ್ರ**
**ರಾಜನ್ಯವೃಂದಾನುಗತೋ ಜರಾಸುತಃ ।**
**ಗಿರಿಂ ಗೋಮಂತಂ ಪರಿವಾರ್ಯದಹತ್ತಂ**
**ದೃಷ್ಟ್ವೈ ದೇವೌ ಪಪ್ಲುವತುರ್ಬಲಾಢ್ಯೌ ॥೧೩॥**

ಈ ರೀತಿಯಾಗಿ ಬಲರಾಮ ಶ್ರೀಕೃಷ್ಣರು ಗೋಮಂತ ಪರ್ವತದಲ್ಲಿ ಕ್ರೀಡಿಸುತ್ತ ಆನಂದದಿಂದ ಕಾಲಕಳೆಯುತ್ತಿರುವಾಗ, ಅನ್ಯರಾಜರನ್ನು ಕೂಡಿಕೊಂಡು ಜರಾಸಂಧನು ಗೋಮಂತ ಗಿರಿಗೆ ಬಂದು ಸುತ್ತುಗಟ್ಟಿದನು. ಅವರನ್ನು ಸಾಯಿಸುವ ದೃಷ್ಟಿಯಿಂದ ಪರ್ವತಕ್ಕೆ ಬೆಂಕಿಯನ್ನು ಹಚ್ಚಿದನು. ಇದನ್ನು ಕಂಡ ಬಲಾಢ್ಯರಾದ ಆ ದೇವತೆಗಳು ಅಲ್ಲಿಂದ ಹಾರಿದರು.

ಗಿರಿಸ್ತಾಭ್ಯಾಂ ಪೀಡಿತಃ ಸನ್ನಿಮಗ್ನೋ
ಭೂಮೌ ಪದ್ಭ್ಯಾಂ ಯೋಜನಸ್ಯೈಕಾದಶಂ ಸಃ ।
ನಿಷ್ಪೀಡಿತಾಜ್ಜ್ವಲಧಾರೋದ್ಗತಾಸ್ಮಾದ್ವಹ್ನಿಂ
ವ್ಯಾಪ್ತಂ ಶಮಯಾಮಾಸ ಸರ್ವಮ್ ॥೧೪॥

ಬಲರಾಮ ಶ್ರೀಕೃಷ್ಣರು ಮೇಲಿನಿಂದ ಹಾರುವಾಗ, ತಮ್ಮ ಪಾದಗಳಿಂದ ಆ ಪರ್ವತವನ್ನು ಚೆನ್ನಾಗಿ ಒತ್ತಿದರು. ಅವರ ಆ ಪಾದಗಳ ಪೆಟ್ಟಿನ ಪರಿಣಾಮ ಆ ಪರ್ವತವು ಹನ್ನೊಂದು ಯೋಜನೆಗಳ ಆಳಕ್ಕೆ ಕೆಳಗಿಳಿಯಿತು. ಅದರಿಂದ ಒಳಗಿದ್ದ ಜಲಧಾರೆ ಮೇಲೆ ಬಂದಿತು. ಅದರ ಪ್ರಭಾವದಿಂದ ಸುತ್ತಲೂ ಹತ್ತಿದ ಬೆಂಕಿಯು ಶಮನವಾಯಿತು.

ಸೇನಾಂ ಪ್ರವಿಷ್ಟೌ ಸರ್ವ ರಾಜನ್ಯಬೃಂದಂ
ವ್ಯಮಥ್ನ (ಥ್ನಾ) ತಾಂ ದೇವವಶೇಸ್ಚ ಶಸ್ತ್ರೈಃ ।
ತತ್ರೈವ ಹಂಸೋ ಡಿಭಿ(ಭ)ಕಶ್ಚೈಕಲವ್ಯಃ
ಸಕೀಚಕಸ್ತೌ ಶಿಶುಪಾಲ ಪೌಂಡ್ರಕೌ ॥೧೫॥
ಭೌಮಾತ್ಮಜೋ ದಂತವಕ್ರಶ್ಚ ರುಕ್ಮೀ
ಸೌಬಾಧಿಪೋ ಮೈಂದ ಮೈಂದಾನುಜೌ ಚ ।
ಅನ್ಯೇಚ ಯೇ ಪಾರ್ಥಿವಾಃ ಸರ್ವ ಏವ
ಕ್ರೋಧಾತ್ಕೃಷ್ಣಂ ಪರಿವಾರ್ಯಭ್ಯವರ್ಷನ್ ॥೧೬॥

ಮೇಲಿನಿಂದ ಹಾರಿದ ಬಲರಾಮ ಶ್ರೀಕೃಷ್ಣರು, ಎಲ್ಲ ರಾಜರಿಂದ ಕೂಡಿದ

ಮಥಿಸಿ ಮೆತ್ತಗೆ ಮಾಡಿದರು. ಆ ಸಂದರ್ಭದಲ್ಲಿ, ಹಂಸ-ಡಿಭಿಕ, ಏಕಲವ್ಯ, ಶಿಶುಪಾಲ, ಪೌಂಡ್ರಕವಾಸುದೇವ, ಭೌಮನ ಮಗ ಭಗದತ್ತ, ದಂತವಕ್ತ್ರ, ರುಕ್ಮಿ, ಸಾಲ್ವ, ಮೈಂದ ಅವನ ತಮ್ಮ ವಿವಿಂದ ಮೊದಲಾದವರು ತಮ್ಮ ಸೈನ್ಯ ನಾಶವಾಗುತ್ತಿರುವುದನ್ನು ಕಂಡು ಕ್ರೋಧದಿಂದ ಶ್ರೀ ಕೃಷ್ಣನ ಮೇಲೆ ಬಾಣಗಳ ಮಳೆಯನ್ನೇ ಸುರಿಸಿದರು.

**ಶಸ್ತ್ರೈ ರಸ್ತ್ರೈ ರ್ದ್ರುಮಪೂಗೈಃ ಶಿಲಾಭಿ**
**ರ್ಭಕ್ತಾಶ್ಚ ಯೇ ಶಲ್ಯಬಾಹ್ಲೀಕ ಮುಖ್ಯಾಃ ।**
**ಸ ಸೋಮದತ್ತಾಃ ಸೌಮದತ್ತಿರ್ವಿರಾಟಃ**
**ಪಾಂಚಾಲರಾಜಶ್ಚ ಜರಾಸುತಶ್ಚ ।**
**ಭಯಾತ್ಕೃಷ್ಣಂ ಶರ(ಸ್ತ್ರ) ವರ್ಷೈ ರಾವರ್ಷನ್**
**ಕಾರಾಗೃಹೇ ವಾಸಿತಾ ಮಾಗಧೇನ ॥೧೨॥**

ಭಗದತ್ತ, ಭೂರಿಶ್ರವ, ವಿರಾಟ, ಪಾಂಚಾಲದ ರಾಜ ದ್ರುಪದ, ಶಲ್ಯ, ಬಾಹ್ಲೀಕ ಇವರೆಲ್ಲರೂ ಶ್ರೀಕೃಷ್ಣನ ವೈರಿಗಳಲ್ಲ. ಆತನ ಭಕ್ತರೇ ಆದರೂ ಅವರೆಲ್ಲ ಜರಾಸಂಧನ ಭಯದಿಂದ ಶ್ರೀಕೃಷ್ಣನ ಮೇಲೆ ಆಕ್ರಮಣ ಮಾಡಿದರು. ಏಕೆಂದರೆ ಇದೇ ಜರಾಸಂಧನೇ ಅವರನ್ನು ಕಾರಾಗೃಹದಲ್ಲಿಟ್ಟಿದ್ದನು. ಈಗ ಯುದ್ಧ ಮಾಡದಿದ್ದರೆ ಮತ್ತೇನು ಮಾಡುವನೋ ಎಂಬ ಭಯ ಅವರನ್ನು ಕಾಡುತ್ತಿತ್ತು. ಅದಕ್ಕಾಗಿ ಅವರೆಲ್ಲರೂ ಒಲ್ಲದ ಮನಸ್ಸಿನಿಂದ ಅಸ್ತ್ರ, ಶಸ್ತ್ರ, ಗಿಡ-ಗಂಟೆ, ಕಲ್ಲು-ಬಂಡೆ ಇತ್ಯಾದಿಗಳಿಂದ ಯುದ್ಧ ಮಾಡಿದರು.

ವಿ.ವಿ. ಪರಿಸ್ಥಿತಿಯು ಮಾನವನನ್ನು ಏನು ಬೇಕಾದರೂ ಮಾಡಿಸಬಲ್ಲದು.

**ಸರ್ವಾನೇತಾನ್ ಶರವರ್ಷೇಣ ಕೃಷ್ಣೋ**
**ವಿಸೂತವಾಜಿಧ್ವಜ ಶಸ್ತ್ರ ವರ್ಮಣಃ ।**
**ಕೃತ್ವಾ ವಮನ್ ಶೋಣಿತಾನಾರ್ತರೂಪಾನ್**

ಶ್ರೀಕೃಷ್ಣನು ತನ್ನ ಬಾಣಗಳಿಂದ ಎಲ್ಲ ರಾಜರ ರಥಗಳನ್ನು, ಕುದುರೆ ಮತ್ತು ಪತಾಕೆಗಳನ್ನು ತುಂಡರಿಸಿದನು. ಮರ್ಮಭೇದ ಬಾಣಗಳಿಂದ ಬಾಧಿತರಾಗಿ ಎಲ್ಲ ರಾಜರು ರಕ್ತಕಾರಹತ್ತಿದರು. ಆರ್ತರಾಗಿ ಎಲ್ಲರೂ ಓಡಹತ್ತಿದರು. ಇದು, 'ಸಿಂಹವು ಮೃಗಗಳನ್ನು ಓಡಿಸಿದಂತೆ' ಆಗಿತ್ತು.

**ಹತ್ವಾ ಸೇನಾಂ ವಂಶದಕ್ಷೌಹಿಣೀಂ ತಾಂ**
**ತ್ರಿಭಿರ್ಯುಕ್ತಾಂ ರುಕ್ಮಿಣಂ ನೈವ ಕೃಷ್ಣಃ ।**
**ರುಕ್ಮಿಣ್ಯರ್ಥೇ ಪೀಡಯಾಮಾಸ ಶಸ್ತ್ರೈ–**
**ರ್ನ್ಯಸ್ಯಚ್ಛಿತ್ವಾ ವಿರಥಂ ದ್ರಾವ ಯಾನಃ ॥19॥**

ಶ್ರೀಕೃಷ್ಣನು ಇಪ್ಪತ್ತು ಮೂರು ಅಕ್ಷೌಹಿಣಿ ಸೈನ್ಯವನ್ನು ಹೊಡೆದು ಓಡಿಸಿದನು. ರುಕ್ಮಿಣಿಯ ತಮ್ಮ ರುಕ್ಮಿಯನ್ನು ಮಾತ್ರ ಕೊಲ್ಲಲಿಲ್ಲ. ಕೇವಲ ಅವನ ಬಾಣಗಳನ್ನು ಕಡಿದು ಅವನನ್ನು ವಿರಥನನ್ನಾಗಿ ಮಾಡಿದನು. ವಿ.ವಿ. ರುಕ್ಮಿಯು, ಎಷ್ಟಾದರೂ ಹೆಂಡತಿಯ ತಮ್ಮನಲ್ಲವೇ? ಎಲ್ಲ ಪ್ರಪಂಚ ಒಂದುಕಡೆಯಾದರೆ, ಹೆಂಡತಿಯ ತಮ್ಮ ಒಂದು ಕಡೆ. ಈ ಗಾದೆಯ ಮಾತನ್ನು ಇಲ್ಲಿ ಸ್ಮರಿಸಬಹುದು. ಈ ಮೋಹವು ಕೃಷ್ಣನಿಗೂ ಇದ್ದಿತೇ!

**ಜರಾಸುತೋ ರೌಹಿಣೇಯೇನ ಯುದ್ಧಂ**
**ಚಿರಂ ಕೃತ್ವಾ ತನ್ಮುಸಲೇನ ಪೋಥಿತಃ ।**
**ವಿಮೋಹಿತಃ ಪ್ರಾಪ್ತ ಸಂಜ್ಞಶ್ಚಿರೇಣ**
**ಕ್ರುದ್ಧೋ ಗದಾಂ ತದುರಸ್ಯಭ್ಯಪಾತಯತ್ ॥20॥**

ಜರಾಸಂಧನೊಡನೆ ಬಲರಾಮನು ಬಹಳ ಕಾಲದವರೆಗೆ ಯುದ್ಧ ಮಾಡಿದನು. ಕೊನೆಗೆ ಬಲರಾಮನು ತನ್ನ ಮುಸಲದಿಂದ ಜೋರಾಗಿ ಹೊಡೆದಾಗ (ಬಲರಾಮನ ಪೆಟ್ಟನ್ನು ತಾಳಲಾರದೆ) ಜರಾಸಂಧನು ಮೂರ್ಛಿತನಾಗಿ ನೆಲದ ಮೇಲೆ ಬಿದ್ದನು. ಪುನಃ ಸಾವಕಾಶವಾಗಿ ಎಚ್ಚೆತ್ತು,

**ತೇನಾಹತಃ ಸುಭೃಶಂ ರೌಹಿಣೇಯಃ**
**ಪಪಾತ ಮೂರ್ಛಾಭಿಗತಃ ಕ್ಷಣೇನ ।**
**ಅಜೇಯತ್ವಂ ತಸ್ಯದತ್ತಂ ಹಿ ಧಾತ್ರಾ**
**ಪೂರ್ವಂ ಗೃಹೀತೋ ವಿಷ್ಣುನಾರಾಮಗೇನ ॥೨೧॥**

ಜರಾಸಂಧನ ಗದೆಯ ಪೆಟ್ಟಿನಿಂದ ಬಲರಾಮನು ಕ್ಷಣದಲ್ಲಿಯೇ ಮೂರ್ಛಿತನಾಗಿ ಬಿದ್ದನು. ಬ್ರಹ್ಮನು, ಜರಾಸಂಧನಿಗೆ ಅಜೇಯತ್ವದ ವರ ಕೊಟ್ಟಿದ್ದೇ ಇದಕ್ಕೆ ಕಾರಣವಾಗಿತ್ತು.

ಪೂರ್ವದಲ್ಲಿ ಬಲರಾಮನು ಇದೇ ಜರಾಸಂಧನನ್ನು ಗೆದ್ದಿದ್ದನಲ್ಲ ಎಂದು ಅನುಮಾನ ಬರಬಹುದು. ಆಗ ಶುಕ್ಲಕೇಶಿನಾಮ ಪರಮಾತ್ಮನ ಆವೇಶದಿಂದ ಗೆದ್ದದ್ದು. ಸ್ವಂತ ಬಲರಾಮ ಗೆದ್ದವನಲ್ಲ.

**ತಥಾ ಕೃತೇ ಬಲಭದ್ರೇ ತು ಕೃಷ್ಣೋ**
**ಗದಾಮಾದಾಯ ಸ್ವಾಮಾಗಾನ್ಮಾಗಧೇಶಮ್ ।**
**ತತಾಡ ಜತ್ರೌ ಸ ತಯಾಭಿತಾಡಿತೋ**
**ಜಗಾಮ ಗಾಂ ಮೂರ್ಛಯಾಭಿಪ್ಲುತಾಂಗಃ ॥೨೨॥**

ಬಲರಾಮನ ಅವಸ್ಥೆ ಹೀಗಾದದ್ದನ್ನು ಕಂಡು ಶ್ರೀಕೃಷ್ಣನು ಒಂದು ಗದೆಯನ್ನು ತರಿಸಿದನು. ಅದನ್ನು ತೆಗೆದುಕೊಂಡು ಜರಾಸಂಧನಿಗೆ ಚೆನ್ನಾಗಿ ಹೊಡೆದನು. ಅವನೂ ಯುದ್ಧ ಮಾಡಿದನು. ಆದರೂ ಜರಾಸಂಧನು ರಕ್ತರಂಜಿತ ಶರೀರವುಳ್ಳವನಾಗಿ ಮೂರ್ಛೆಯಿಂದ ಬಿದ್ದನು.

**ಅಥೋತ್ಥಸೌ ರೌಹಿಣೇಯಃ ಸಹೈವ**
**ಸಮುತ್ತಸ್ಥೌ ಮಾಗಧೋಽಪ್ಯಗ್ರ್ಯವೀರ್ಯಃ ।**
**ಕ್ರುದ್ಧೋಽಗೃಹೀತ್ವಾ ಮೌಲಿಮಸ್ಯಾಶು ರಾಮೋ**
**ವಧಾಯೋದ್ಯಚ್ಛನ್ಮುಸಲಂ ಬಾಹುಶಾಲೀಂ ॥೨೩॥**

ನೋಡಿದನು. ಕೂಡಲೇ ಅವನೂ ಎದ್ದು ನಿಂತನು. ಸಿಟ್ಟಿನಿಂದ ತನ್ನ ಗದೆಯನ್ನು ತೆಗೆದುಕೊಂಡನು. ಬಾಹುಶಾಲಿಯಾದ ಬಲರಾಮನು ಜರಾಸಂಧನನ್ನು ಕೊಲ್ಲುವ ಉದ್ದೇಶದಿಂದ ಅವನ ಕೇಶರಾಶಿಯನ್ನು ಹಿಡಿದು ಜೋರಾಗಿ ಎಳೆದನು.

ಅಥಾಬ್ರವೀದ್ವಾಯುರೇವಂ ನ ರಾಮ
ತ್ವಯಾ ಹಂತುಂ ಶಕ್ಯತೇ ಮಾಗಧೋಽಯಮ್ ।
ವೃಥಾ ನತೇ ಬಾಹುಬಲಂ ಪ್ರಯೋಜ್ಯ
ಮಮೋಘಂ ತೇ ಯದ್ಬಲಂ ತದ್ವದಸ್ತ್ರಮ್ ॥೨೪॥

ಆಗ ಆಕಾಶದಲ್ಲಿ ವಾಯುದೇವರು ಈ ರೀತಿ ನುಡಿದರು. 'ಹೇ ಬಲರಾಮ ಈ ಜರಾಸಂಧನನ್ನು ಕೊಲ್ಲುವುದು ನಿನಗೆ ಶಕ್ಯವಿಲ್ಲ. ಕಾರಣ ಅಮೋಘವಾದ ನನ್ನ ಬಾಹುಬಲ ಮತ್ತು ಅಸ್ತ್ರಬಲವನ್ನು ವೃಥಾ ಉಪಯೋಗಿಸಬೇಡ.'

ಅನ್ಯೋಽಹಂತಾ ಬಲವಾನಸ್ಯ ಚೇತಿ
ಶ್ರುತವಾ ಯಯೌ ಬಲಭದ್ರೋಽ ವಿಮೋಚ್ಯ ।
ಜರಾಸುತಂ ಪುನರುದ್ಯಚ್ಛಮಾನಂ
ಜಘಾನ ಕೃಷ್ಣೋಽ ಗದಯಾ ಸ್ವಯೈವ ॥೨೫॥

"ಇವನನ್ನು ಕೊಲ್ಲುವವನು ನಿನಗಿಂತಲೂ ಬಲವಾನನು ಮತ್ತೊಬ್ಬ ನಿದ್ದಾನೆ" ಎಂಬ ಮಾತನ್ನು ಕೇಳಿದ ಬಲರಾಮನು ಜರಾಸಂಧನನ್ನು ಬಿಟ್ಟುಬಿಟ್ಟನು. ಜರಾಸಂಧನು ಪುನಃ ಯುದ್ಧಕ್ಕೆ ಸಿದ್ಧನಾಗುತ್ತಿರುವುದನ್ನು ಕಂಡು ಶ್ರೀಕೃಷ್ಣನು ತನ್ನ ಗದೆಯಿಂದ ಹೊಡೆದು ತಡೆದನು.

ತೇನಾಹತಃ ಸ್ರಸ್ತ ಸಮಸ್ತ ಗಾತ್ರಃ
ಪಪಾತ ಮೂರ್ಛಾಭಿಗತಃ ಸ ರಾಜಾ ।
ಚಿರಾತ್ಸಂಜ್ಞಾಂ ಪ್ರಾಪ್ಯ ಚಾಂತರ್ಹಿತೋಽಸೌ
ಸಂಪ್ರಾದ್ರವದ್ಭೀತ ಭೀತಃ ಸಲಜ್ಜಃ ॥೨೬॥

ಶ್ರೀಕೃಷ್ಣನಿಂದ ಪೆಟ್ಟು ತಿಂದು, ಸಮಸ್ತ ದೇಹ ಜರ್ಜರಿತನಾಗಿ, ಕೆಳಗೆ ಬಿದ್ದು ಮೂರ್ಛಿತನಾದ ಜರಾಸಂಧನು ನಿಧಾನವಾಗಿ ಎಚ್ಚರಿಕೆಯನ್ನು ಪಡೆದನು. ನಂತರ ಭಯಭೀತನಾಗಿ, ಲಜ್ಜೆಯಿಂದ ತಲೆತಗ್ಗಿಸಿ ಅಲ್ಲಿಂದ ಹೊರಟುಹೋದನು.

**ಯಯೌ ಶಿಷ್ಟೈ ರಾಜಭಿಃ ಸಂಯುತಶ್ಚ**
**ಪುರಂ ಜೀವೇತ್ಯೇವ ಕೃಷ್ಣೇನ ಮುಕ್ತಃ ।**
**ಪುನರ್ಯುದ್ಧಂ ಬಹುಶಃ ಕೇಶವೇನ ।**
**ಕೃಷ್ಣೋ ಜಿತೋ ರಾಜಗಣೈಃ ಸಮೇತಃ ।**
**ಕೃಷ್ಣೋ ಜಿತ್ವಾ ಮಾಗಧಂ ರೌಹಿಣೇಯ**
**ಯುಕ್ತೋ ಯಯೌ ದಮಘೋಷಕೇನ ಸಾರ್ಧಮ್ ॥೨೭॥**

ಶ್ರೀಕೃಷ್ಣನಿಂದ ಜೀವದಾನ ಪಡೆದು, ಬಿಡುಗಡೆಯಾದ ಜರಾಸಂಧನು, ತನ್ನ ಪುರಕ್ಕೆ ನಡೆದನು. ಪುನಃ ರಾಜರನ್ನು ಕಟ್ಟಿಕೊಂಡು ಮತ್ತೆ ಯುದ್ಧಕ್ಕೆ ಬಂದನು. ಆಗಲೂ ಶ್ರೀಕೃಷ್ಣನು ಎಲ್ಲ ರಾಜರನ್ನು ಸೋಲಿಸಿ ಜರಾಸಂಧನನ್ನು ಗೆದ್ದನು. ನಂತರ ಬಲರಾಮ ಶ್ರೀಕೃಷ್ಣರು ದಮಘೋಷನ ಹತ್ತಿರ ಬಂದರು.

ದಮಘೋಷನಾರು?

**ಪಿತೃಷ್ವಸಾ ಯಾಃ ಪತಿನಾ ಚೇನ ಚೋಕ್ತಃ**
**ಪೂರ್ವಂ ಜಿತೇನಾಪಿ ಯುಧಿ ಸ್ಮ ಬಾಂಧವಾತ್ ।**
**ಯಾಮಃ ಪುರಂ ಕರವೀರಾಖ್ಯಮೇವ**
**ಮಹಾಲಕ್ಷ್ಮ್ಯಾಃ ಕ್ಷೇತ್ರ ಸಂದರ್ಶನಾಯ ॥೨೮॥**

ದಮಘೋಷನು ಶ್ರೀಕೃಷ್ಣನ ಸೋದರತ್ತೆಯ ಗಂಡನು. ಇವನು ಈ ಮೊದಲು ಕೃಷ್ಣನೊಡನೆ ಯುದ್ಧಮಾಡಿ ಸೋತಿದ್ದನು. ಆದರೂ ಬಂಧುಗಳೆಂಬ ದೃಷ್ಟಿಯಿಂದ ಅವರನ್ನು ಸ್ವಾಗತಿಸಿದನು.

ಇಲ್ಲಿಯೇ (ಕರವೀರಪುರ) ಕೊಲ್ಹಾಪುರವೆಂಬ ಮಹಾಕ್ಷೇತ್ರವಿದೆ. ಅಲ್ಲಿ ಲಕ್ಷ್ಮೀದೇವಿ ನೆಲೆಸಿದ್ದಾಳೆ. ಅದನ್ನು ನೋಡೋಣವೇ ಎಂದು ದಮಘೋಷನು ಕೇಳಿದಾಗ ಶ್ರೀಕೃಷ್ಣನು 'ಆಗಲಿ' ಎಂದು ಹೇಳಿದನು.

**ಶ್ರುತ್ವಾ ವಾಕ್ಯಂ ತಸ್ಯ ಯುದ್ಧೇ ಜಿತಸ್ಯ**
**ಪ್ರೀ (ಭೀ) ತ್ಯಾ ಯುಕ್ತ ಸ್ವಾತ್ಮನಾ ತದ್ವಯುತೋಽಗಾತ್ ॥೨೯॥**

ಜರಾಸಂಧನ ಭಯದಿಂದ ದಮಘೋಷನು ಕೃಷ್ಣನೊಡನೆ ಯುದ್ಧ ಮಾಡಿದ್ದನು, ಸೋತಿದ್ದನು. ಆದರೂ ಸ್ವಭಾವತಃ ಒಳ್ಳೆಯವನು. ಕಾರಣ ಶ್ರೀಕೃಷ್ಣನು ಅವನ ಮಾತನ್ನು ಕೇಳಿದ ಕೂಡಲೇ ಅವನೊಡನೆ ಕರವೀರಪುರಕ್ಕೆ ನಡೆದನು.

**ಗಂಧರ್ವೋಽಸೌ ದನುನಾಮ ನರೋಽಭೂತ್**
**ತಸ್ಮಾತ್ ಕೃಷ್ಣೇ ಭಕ್ತಿಮಾಂಶ್ಚಾಸ ರಾಜಾ ।**
**ಪುರಂ ಪ್ರಾಪ್ತಾಂಸ್ತಾನ್ ಸ ವಿಜ್ಞಾಯ ಪಾಪಃ**
**ಸೃಗಾಲಾಖ್ಯೋ ವಾಸುದೇವಃ ಕ್ರುದ್ಧಾಗಾತ್ ॥೩೦॥**

ದಮಘೋಷನು, ಪೂರ್ವದಲ್ಲಿ 'ದನು' ಎಂಬ ಗಂಧರ್ವನು. ಅಂತೆಯೇ ಅವನು ಶ್ರೀಕೃಷ್ಣನಲ್ಲಿ ಭಕ್ತಿಮಾಡುತ್ತಿದ್ದನು. ದಮಘೋಷ ಮತ್ತು ಶ್ರೀಕೃಷ್ಣರು ಇಬ್ಬರು ತಮ್ಮ ಪಟ್ಟಣಕ್ಕೆ ಬಂದಿದ್ದಾರೆ ಎಂಬ ವರ್ತಮಾನ ಕೇಳಿ, ಅಲ್ಲಿಯ ರಾಜನಾದ ಸೃಗಾಲವಾಸುದೇವನು ಬಹುಕ್ರುದ್ಧನಾದನು. ಅವನು ಪಾಪಿಷ್ಠನೇ ಸೈ.

**ಸೂರ್ಯಪ್ರದತ್ತಂ ರಥಮಾರುಹ್ಯ ದಿವ್ಯಂ**
**ವರಾದವಧ್ಯಸ್ತ್ವಗ್ನಿರುಚೇಃ ಸ ಕೃಷ್ಣಮ್ ।**
**ಯೋದ್ಧುಂ ಯಯಾವಮುಚಚ್ಚಾಸ್ತ್ರ ಸಂಘಾನ್**
**ಶಿರಸ್ತಸ್ಯಾಥಾಶು ಜಹಾರ ಕೃಷ್ಣಃ ॥೩೧॥**

ಅವನಿಗೆ ಸೂರ್ಯನಿಂದ ಒಂದು ದಿವ್ಯರಥವು ಕೊಡಲ್ಪಟ್ಟಿತ್ತು. ಅಲ್ಲದೆ

ಅವನು ಅವಧ್ಯನೂ ಕೂಡ. ಅಂಥವನು ರಥಾರೂಢನಾಗಿ, ಶ್ರೇಷ್ಠ ಅಸ್ತ್ರಗಳೊಡನೆ ಶ್ರೀಕೃಷ್ಣನೊಡನೆ ಯುದ್ಧಕ್ಕೆ ಬಂದನು. ಅನೇಕ ಬಾಣಗಳನ್ನು ಪ್ರಯೋಗಿಸಿದನು. ಶ್ರೀಕೃಷ್ಣನು ಅವನ ಶಿರಸ್ಸನ್ನೇ ಕತ್ತರಿಸಿಬಿಟ್ಟನು.

**ದ್ವಿಧಾ ಕೃತ್ವಾ ದೇಹಮಸ್ಯಾರಿಣಾ ಚ**
**ಪುತ್ರಂ ಭಕ್ತಂ ತಸ್ಯರಾಜ್ಯೇಽಭಿಷಿಚ್ಯ ।**
**ಸ ಶಕ್ರದೇವಂ ಮಣಿಭದ್ರಃ ಪುರಾಯೋ**
**ಯಯೌ ಪುರೀಂ ಸ್ವಾಂ ಸಹಿತೋಽಗ್ರಜೇನ ॥೩೨॥**

ಶ್ರೀಕೃಷ್ಣನು ವೈರಿಯ ದೇಹವನ್ನು ಎರಡು ಭಾಗಗಳನ್ನಾಗಿ ತುಂಡರಿಸಿದನು. ತನ್ನ ಭಕ್ತನು, ಸೃಗಾಲವಾಸುದೇವನ ಮಗನೂ ಆದ ಶಕ್ರದೇವನಿಗೆ ರಾಜ್ಯಾಭಿಷೇಕ ಮಾಡಿದನು. ಈ ಶಕ್ರದೇವನು ಪೂರ್ವದಲ್ಲಿ 'ಮಣಿಭದ್ರ' ಎಂಬ ದೇವತೆಯು, ಪಟ್ಟಾಭಿಷೇಕದ ನಂತರ ಶ್ರೀಕೃಷ್ಣನು ಅಣ್ಣನೊಡನೆ ತನ್ನ ಪಟ್ಟಣಕ್ಕೆ ಬಂದನು.

**ನೀತಿಂ ಬಲಿಷ್ಠಸ್ಯವಿಹಾಯ ಸೇನಾಂ**
**ದೂರಾದ್ಯುದ್ಧಂ ದರ್ಶಯಿತ್ವೈವ ಗುಪ್ತ್ಯೈ ।**
**ಸ್ವ ಸೇನಾಯಾಃ ಸರ್ವಪೂರ್ಣಾತ್ಮ ಶಕ್ತಿಃ**
**ಪುನಃ ಪುರೀಂ ಪ್ರಾಪ್ಯ ಸಂ ಪೂಜಿತೋಽವಸತ್ ॥೩೩॥**

"ಯುದ್ಧಕಾಲದಲ್ಲಿ ತನ್ನ ಸೈನ್ಯವನ್ನು ಬಲಿಷ್ಠರಿಂದ ದೂರವಿರಿಸಿ, ತಾನು ಯುದ್ಧಮಾಡತಕ್ಕದ್ದು" ಎಂಬ ನೀತಿಯನ್ನು ಜಗತ್ತಿಗೆ ತೋರಿದನು. ಸರ್ವಪೂರ್ಣಶಕ್ತನಾದ ಪರಮಾತ್ಮನು. ಈ ರೀತಿ ತಾನೊಬ್ಬನೇ ಯುದ್ಧಮಾಡಿ ವೈರಿಯನ್ನು ಗೆದ್ದು ತನ್ನ ಪುರವನ್ನು ಪ್ರವೇಶಿಸಿದನು. ಸರ್ವರೂ ಆತನನ್ನು ಪೂಜಿಸುತ್ತ ಸುಖವಾಗಿ ಇದ್ದರು.

ವಿ.ವಿ. ಈ ನೀತಿಯಿಂದ ಸೈನ್ಯದ ರಕ್ಷಣೆಯೂ ಆಗುತ್ತದೆ. ಪ್ರಸಂಗ ಬಂದಾಗ ಅದರ ಸದುಪಯೋಗವೂ ಆಗುತ್ತದೆ.

ReservedMilitary ಎಂಬ ಪದ್ಧತಿ ಇಂದಿಗೂ ನಡೆದುಕೊಂಡು ಬಂದಿದೆ ಎಂಬುದನ್ನು ಓದುಗರು ಗಮನಿಸಬಹುದು.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯೇ ಷೋಡಶೋಽಧ್ಯಾಯಃ**

ಇಲ್ಲಿಗೆ ಶ್ರೀಮದಾಚಾರ್ಯರಿಂದ ವಿರಚಿತವಾದ ಶ್ರೀಮನ್‌ಮಹಾ ಭಾರತ ತಾತ್ಪರ್ಯ ನಿರ್ಣಯದಲ್ಲಿ ಹದಿನಾರನೆಯ ಅಧ್ಯಾಯ ಮುಗಿದುದು.

ಶ್ರೀಕೃಷ್ಣನು ಇದನ್ನು ಸ್ವೀಕರಿಸಿ, ಸಂಪ್ರೀತನಾಗಿ ಭಕ್ತರಿಗೆ ಸನ್ಮಾರ್ಗ ತೋರಲಿ.

ಶ್ರೀಕೃಷ್ಣಾರ್ಪಣಮಸ್ತು, ಶ್ರೀಮದ್ವೇಶಾರ್ಪಣಮಸ್ತು.

## ಹದಿನಾರನೆಯ ಅಧ್ಯಾಯದ ಚಿಂತನೆ

ಜರಾಸಂಧನು ಕೃಷ್ಣನೊಡನೆ ಯುದ್ಧಮಾಡಿ ಬಹಳಷ್ಟು ಸಲ ಸೋತಿದ್ದನು. ಆದರೂ ಕೌರವರ ಸಹಕಾರ ದೊರಕಿದಾಗ ಪುನಃ ಯುದ್ಧಕ್ಕೆ ಸಿದ್ಧನಾದನು.

ಇದುವರೆಗೆ ಜರಾಸಂಧನಿಂದ ನಗರಕ್ಕೆ ಸಾಕಷ್ಟು ಹಾನಿ ಆಗಿತ್ತು. ಮತ್ತು ಆಗದಿರಲಿ ಎಂದು ಬಲರಾಮ ಶ್ರೀಕೃಷ್ಣನು ತಾನೇ ಅಲ್ಲಿಂದ ದಕ್ಷಿಣ ದಿಕ್ಕಿಗೆ ನಡೆದನು.

ಜಮದಗ್ನಿಯ ಮಗನಾದ ಪರಶುರಾಮರು ಅಲ್ಲಿ ಗೋಮಂತಕದ ಪರ್ವತದ ಮೇಲಿರುತ್ತಿದ್ದರು. ಅದು ದುರ್ಗಮವಾಗಿತ್ತು. ಶ್ರೀಕೃಷ್ಣನು ಅಣ್ಣನನ್ನು ಕೂಡಿಕೊಂಡು ಅಲ್ಲಿಗೆ ಬಂದನು.

೧. ಪರಶುರಾಮ ಮತ್ತು ಶ್ರೀಕೃಷ್ಣ ಬೇರೆಯಲ್ಲ. ಇಬ್ಬರೂ ಮೂಲ ರೂಪ ನಾರಾಯಣನ ಅವತಾರವೇ. ಅವತಾರಗಳಲ್ಲಿ ಭೇದವಿಲ್ಲ.

೨. ತಾನು ಎಷ್ಟು ಸಮರ್ಥನಾಗಿದ್ದರೂ, ಇನ್ನೊಬ್ಬರ ಸಹಕಾರ ಪಡೆಯುವುದು ಒಳ್ಳೆಯದು.

೩. ವಿಪತ್ತು ಬಂದಾಗ ಸುರಕ್ಷಿತ ಸ್ಥಳದಲ್ಲಿ ಆಶ್ರಯ ಪಡೆಯುವುದು ಉತ್ತಮ.

ಕ್ಷೀರಸಮುದ್ರದಲ್ಲಿ ನಾರಾಯಣನಿದ್ದಾನೆ. ಎಲ್ಲ ದೇವತೆಗಳೂ ತಮ್ಮ ಯೋಗ್ಯತಾನುಸಾರ ಸ್ಥಳಗಳನ್ನು ಪಡೆದು ಸ್ವಾಮಿಯ ಸೇವೆಯಲ್ಲಿ ತೊಡಗಿದ್ದಾರೆ. ಎಲ್ಲರೂ ಸಮರಲ್ಲ. ತರತಮ ಭಾವವಿದೆ.

ಬಲಿಚಕ್ರವರ್ತಿ ನಾರಾಯಣನನ್ನು ಕಾಣಲು ಬಂದಿದ್ದಾನೆ. ಭಕ್ತನಾದರೂ ಅಸುರಾವೇಶ ಬಂದಿದೆ. ಇದನ್ನರಿತ ನಾರಾಯಣನು ತಾನು ಕಣ್ಣುಮುಚ್ಚಿ ಮಲಗಿದನು. ಇತರರಿಗೂ ಹಾಗೇ ಮಾಡಲು ಸಂಜ್ಞೆ ಮಾಡಿದನು. ಬಲಿ ಬಂದವನೇ ಕಿರೀಟವನ್ನು ತೆಗೆದುಕೊಂಡು ನಡೆದನು. ಎಲ್ಲರೂ ನಕ್ಕರು. ಗರುಡನು ಬೆನ್ನುಹತ್ತಿ ಪಾತಾಳದವರೆಗೆ ಹೋಗಿ ಬಲಿಯನ್ನು ಬಡಿದು ಕಿರೀಟ ತೆಗೆದುಕೊಂಡು ಕೃಷ್ಣನಿದ್ದಲ್ಲಿಗೆ ಬಂದನು. ಆ ಕಿರೀಟ ಕೃಷ್ಣನ ತಲೆಗೆ ಹೊಂದಿಕೊಂಡಿತು. ಇದರಿಂದ ಶ್ರೀಕೃಷ್ಣ ಮತ್ತು ನಾರಾಯಣ ಬೇರೆಯಲ್ಲ ಎಂದು ಸ್ಪಷ್ಟಪಡಿಸಿದರು. ಇಬ್ಬರ ತಲೆಗಳ ಮೇಲೂ ಒಂದೇ ಮಾದರಿಯ ಕಿರೀಟಗಳಿದ್ದವು. ಪರಮಾತ್ಮನ ಆಭರಣಗಳು ಜಡಗಳಲ್ಲ. ಅಂಶೀ ಅಂಶಭಾವವುಳ್ಳವು. ಒಂದು ಅನಂತವಾಗಬಲ್ಲವು. ಬಲರಾಮನು ತನ್ನ ನಿಯತ ಪತ್ನಿಯರು ವಾರುಣಿ ಮತ್ತು ಕಾಂತಿಯರನ್ನು ಪಡೆದು ಸುಖವಾಗಿದ್ದನು. "ನಿಯತ ಪತಿ ಪತ್ನಿತ್ವ ಎಲ್ಲಿದ್ದರೂ ತಪ್ಪುವುದಿಲ್ಲ".

ಜರಾಸಂಧನು ಗೋಮಂತಕ್ಕೆ ಬಂದು ಪರ್ವತವನ್ನು ಸುತ್ತುಗಟ್ಟಿ ಬೆಂಕಿಹಚ್ಚಿದನು. ರಾಮಕೃಷ್ಣರು ಗಟ್ಟಿಯಾಗಿ ಅದುಮಿ ಪರ್ವತದಿಂದ ಕೆಳಗೆ ಜಿಗಿದಾಗ, ಪಾದದ ಪೆಟ್ಟಿಗೆ ಪರ್ವತವು ೧೧ ಯೋಜನೆ ಆಳ ಕೆಳಗಿಳಿಯಿತು. ನೀರು ಮೇಲೆ ಬಂತು. ಅಗ್ನಿ ಶಾಂತವಾಯಿತು.

ಜರಾಸಂಧನಿಗೂ ಶ್ರೀಕೃಷ್ಣನಿಗೂ ಪುನಃ ಯುದ್ಧವಾಯಿತು. ಜರಾಸಂಧನಿಗೂ, ಆತನ ಅನುಯಾಯಿಗಳಿಗೂ ಬಹಳಷ್ಟು ನಷ್ಟವಾಯಿತು. ಸೋತು ಲಜ್ಜಿತನಾಗಿ ಹಿಂದಿರುಗಿದನು.

ಬಲರಾಮ ಶ್ರೀಕೃಷ್ಣರು ದಮಘೋಷನ ಹತ್ತಿರ ಬಂದರು. ಅವನು ಶ್ರೀಕೃಷ್ಣರಿಗೆ ಆಪ್ತನು. ಅಲ್ಲದೆ ಒಳ್ಳೆಯ ಭಕ್ತನು. ಅವನು ಬಲರಾಮ, ಶ್ರೀಕೃಷ್ಣರನ್ನು ಸ್ವಾಗತಿಸಿದನು.

ಮುಂದೆ ಕರವೀರಪುರಕ್ಕೆ ಲಕ್ಷ್ಮೀದೇವಿಯ ದರ್ಶನಕ್ಕಾಗಿ ನಡೆದರು. ಅಲ್ಲಿ ಸೃಗಾಲವಾಸುದೇವನಿರುತ್ತಿದ್ದನು. ಅವನು ಶ್ರೀಕೃಷ್ಣನಿಗೆ ವೈರಿಯಾಗಿದ್ದನು. ಶ್ರೀಕೃಷ್ಣ ಬಂದ ಸಮಾಚಾರ ತಿಳಿದು ಯುದ್ಧಕ್ಕೆ ಬಂದನು. ಕೃಷ್ಣನು ಅವನನ್ನು ಕೊಂದು ಅವನ ಮಗ ಶಕ್ರದೇವನಿಗೆ ಪಟ್ಟಾಭಿಷೇಕ ಮಾಡಿ, ತನ್ನ ಪಟ್ಟಣಕ್ಕೆ ಹಿಂದಿರುಗಿದನು.

ಸಜ್ಜನ ವಿಧೇಯ, ಶಾಂಡಿಲ್ಯ ಗೋತ್ರೋತ್ಪನ್ನ
ಶ್ರೀ ಹನುಮಂತಾರ್ಯಸುತ ರಾಘವೇಂದ್ರ ಶರ್ಮ, ಇದನ್ನು
ಕನ್ನಡಕ್ಕೆ ಅನುವಾದಿಸಿ ಶ್ರೀ ಹರಿಯ ಚರಣದಲ್ಲಿ ಅರ್ಪಿಸಿದನು.
ಶ್ರೀಹರಿ ಇದನ್ನು ಸ್ವೀಕರಿಸಿ ಅನುಗ್ರಹಿಸಲಿ.



## ನಾರಾಯಣ ರಾವ್ ಹಂಡಿಗೋಲ್

ಅನ್‌ಗೋಳ ಬೆಳಗಾವಿ-590 006

ಮಾನ್ಯರೇ

ಶ್ರೀಮನ್ ಮಧ್ವಶಾಸ್ತ್ರಗಳನ್ನು ಶ್ರೀ ಪಂಡಿತರಾದ ದಾಮೋದರಾಚಾರ್ಯ ಉಮರ್ಜಿಯವರ ಕೃಪೆಯಿಂದ ಅವರಲ್ಲಿ ಓದುತ್ತಿದ್ದೇನೆ.

ಪ್ರೊ॥ ಉಮರ್ಜಿ ಆಚಾರ್ಯರು ತಾವು ಕನ್ನಡಕ್ಕೆ ಅನುವಾದ ಮಾಡಿರುವ ಶ್ರೀಮನ್‌ಮಹಾಭಾರತತಾತ್ಪರ್ಯನಿರ್ಣಯಗ್ರಂಥ ವನ್ನು ಕೊಟ್ಟು ಉಪಕಾರ ಮಾಡಿದ್ದಾರೆ.

ತಮ್ಮ ಭಾಷಾಂತರ ಭಾವಾನುವಾದ ತುಂಬಾ ಸುಂದರ್ರ ವಾಗಿದೆ; ಶ್ರೀಸಾಮಾನ್ಯನಿಗೂ ಶ್ರೀಮನ್ ಮಧ್ವಶಾಸ್ತ್ರವನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡಿದೆ.

ಸಂಸ್ಕೃತ ಬಾರದ ನನ್ನಂಥವರಿಗೆ ನಿಮ್ಮ ಅನುವಾದಗಳು ಸಹಾಯ ಮಾಡಿ ಶ್ರೀಮನ್ ಮಧ್ವಶಾಸ್ತ್ರಕ್ಕೆ ಅಭ್ಯಾಸಕ್ಕೆ ನೆರವಾಗಿವೆ. ಸುಮಾರು 50 ವರ್ಷಗಳ ಹಿಂದೆ ಪೂಜ್ಯರಾದ ಪಂಡಿತ ನಾರಾಯಣ ತಂತ್ರಿಗಳು ಮಾಡಿದ ಅನುವಾದ ನೋಡಿದ ಮೇಲೆ ಸರಳವಾದ ಸುಂದರವಾದ ತಮ್ಮ ಅನುವಾದ ಸಂತೋಷ ಕೊಟ್ಟಿದೆ.

ನಾರಾಯಣರಾವ್ ಹುಂಡಿಗೋಲ್

## ಪ್ರಾಚ್ಯವಿದ್ಯಾ ಸಂಶೋಧನಾಲಯ ಮೈಸೂರು ವಿಶ್ವವಿದ್ಯಾಲಯ ಮೈಸೂರು

20-7-92

ಸನ್ಮಾನ್ಯ ಬಂಧುಗಳಾದ ಪಂಡಿತ ಕುಲಕರ್ಣಿಯವರಿಗೆ ಆನಂದತೀರ್ಥ ನಾಗಸಂಪಿಗೆಯವರ ಆದರ ಪೂರ್ವಕ ನಮಸ್ಕಾರಗಳು.

ತಮ್ಮ ಪುಸ್ತಕವನ್ನು ಅಲ್ಲಲ್ಲಿ ನೋಡಿದೆ. ತುಂಬಾ ಉಪಯುಕ್ತವಾದ ಅಂಶಗಳನ್ನೊಳಗೊಂಡು ನವೀನ ನಿರೂಪಣ ಶೈಲಿಯಿಂದ ಎಲ್ಲ ವರ್ಗಕ್ಕೂ ಇದು ಸಂಗ್ರಾಹ್ಯವಾಗಿದೆ.

ವಯೋವೃದ್ಧರೂ ಜ್ಞಾನ ವೃದ್ಧರೂ ಆದ ತಮ್ಮಿಂದ ಇನ್ನೂ ಹೆಚ್ಚಿನ ಮಾಹಿತಿಗಳನ್ನೊಳಗೊಂಡ ಹೊತ್ತಿಗೆಗಳು ಬರಲೆಂದು ದೇವರಲ್ಲಿ ಪ್ರಾರ್ಥಿಸುವೆ.

ತಮ್ಮ

ಆನಂದತೀರ್ಥಾಚಾರ್ಯ ನಾಗಸಂಪಿಗೆ